# ಪ್ರಸ್ತಾವನೆ

ಪ್ರಕೃತಪುಸ್ತಕವು ಫ್ರೆಂಚ್ ಗ್ರಂಥಕಾರರಲ್ಲಿ ಪ್ರಸಿದ್ಧಿಹೊಂದಿದ ಅಲೆಗ್ಝಾಂಡರ್ ಡ್ಯೂಮಾಸ್ ಎಂಬಾತನ ಪ್ರಖ್ಯಾತ ಗ್ರಂಥಗಳಲ್ಲೊಂದಾದ, "ದಿ ಬ್ಲ್ಯಾಕ್ ಟ್ಯೂಲಿಪ್" ಎಂಬುದರ ಅನುವಾದವಾಗಿದೆ. ಕತೆಯು ಆದ್ಯಂತವೂ ಆಸಕ್ತಿಯನ್ನುಂಟುಮಾಡುವುದಾಗಿಯೂ ಬೋಧಪ್ರದವಾಗಿಯೂ ಉಲ್ಲಾಸಕರವಾಗಿಯೂ ಇದೆ. "ಅನಾಥಪ್ರಲಾಪ"ದ ಪ್ರಸ್ತಾವನೆಯಲ್ಲಿ ಹಿಂದೆಯೇ ಹೇಳಿರುವಂತೆ ಐರೋಪ್ಯ ಗ್ರಂಥಕರ್ತರ ಕೃತಿಗಳನ್ನನುವಾದಿಸಿ ವಾಚಕರ ಮುಂದಿಡಲು ನಾನು ಅಲ್ಪಸ್ವಲ್ಪ ಪ್ರಯತ್ನಪಡುತ್ತಿದ್ದೇನೆ. ವಾಚಕರಿಂದ "ಅನಾಥಪ್ರಲಾಪ"ಕ್ಕೆ ಸಿಕ್ಕಿದ ಪ್ರೋತ್ಸಾಹದಿಂದಲೂ ನನ್ನ ಮಿತ್ರರನೇಕರ ಉತ್ತೇಜನದಿಂದಲೂ ಇಂತಹ ಕಾರ್ಯಕ್ಕೆ ಉದ್ಯಮಿಸಿದ್ದೇನೆ. ನನ್ನ ಈ ಕಿರು ಸೇವೆಯಿಂದ ಕನ್ನಡಿಗರು ಸ್ವಲ್ಪಮಟ್ಟಿಗಾದರೂ ಸಂತುಷ್ಟರಾಗುವರಾದರೆ ನನ್ನ ಶ್ರಮವು ಸಾರ್ಥಕವೆನಿಸುವುದು.

ಪುಸ್ತಕಪ್ರಕಟನಾಪ್ರಸಂಗವು ಪ್ರಕೃತದಲ್ಲಿ ಬಹು ಉತ್ಕಟ ಪರಿಸ್ಥಿತಿಯಲ್ಲಿದೆ. ಅಂತಹುದರಲ್ಲಿ ನನ್ನ ಗೆಳೆಯರಾದ ಶ್ರೀಮಾನ್ ಎಂ. ಆರ್. ನರಸಿಂಹಮೂರ್ತಿಯವರು ಪ್ರಕೃತ ಪುಸ್ತಕವನ್ನು ಪ್ರಕಾಶಗೊಳಿಸಿ ಪ್ರಶಂಸಾರ್ಹರಾಗಿರುವರು. ಇದಕ್ಕಾಗಿ ನಾನವರಿಗೆ ಚಿರಕೃತಜ್ಞನಾಗಿರುವೆನು.

ಅಕ್ಟೋಬರ್ 1948

ಇತಿ,
ಬಿ. ಎ. ವೆಂಕಟೇಶಯ್ಯ

# ಪರಿವಿಡಿ





# ಪುಷ್ಪಲತಾ

---

## ಉಪಕ್ರಮಣಿಕೆ

### ಬಂದಿಯ ಪಲಾಯನ

"ತಾವು ನನ್ನ ಮಾತನ್ನು ಕೇಳೋಣಾಗುವುದೆ?"

"ಅದೇ ನನ್ನಮಗು ಹೇಳು"

"ನಾನು ತಮ್ಮ ಸ್ಥಿತಿಯಲ್ಲಿದ್ದಿದ್ದರೆ ಏನು ಮಾಡುತ್ತಿದ್ದೆ ಬಲ್ಲಿರಾ?"

"ಏನು ಮಾಡುತ್ತಿದ್ದೆಯಮ್ಮ?"

"ತಾವೂ ತಮ್ಮ ತಮ್ಮಂದಿರೂ ತಪ್ಪಿಸಿಕೊಂಡು ಹೋಗುವುದೇ ಈಗ ಮುಖ್ಯವಾದುದು ನಾನು ತಮ್ಮ ಸ್ಥಿತಿಯಲ್ಲಿದ್ದಿದ್ದರೆ ದೊಡ್ಡ ಬೀದಿಯ ಕಡೆ ಹೋಗುತ್ತಿರಲಿಲ್ಲ"

"ಅದೇಕೆ? ನಮ್ಮನ್ನು ಕಾಯಲು ಕಾರಾಗೃಹದ ಮುಂದೆಯೇ ಅನೇಕ ಸೈನಿಕರಿರುವರಷ್ಟೆ?

"ಇದ್ದಾರೆ. ಆದರೆ ಅವರಿಗೆ ಬೇರೆ ಆಜ್ಞೆ ಬರುವವರೆಗೆ ಕಾರಾಗೃಹದ ಬಾಗಿಲ ಬಳಿಯೇ ಇರಬೇಕಾದುದು ಅವರ ಕರ್ತವ್ಯವಷ್ಟೆ?"

"ನಿಜ"

"ತಾವು ಸುರ ನಗರಿಯನ್ನು ಬಿಟ್ಟು ಹೊರಟು ಹೋಗಬೇಕು. ನಿಮ್ಮೊಡನೆ ಸೈನಿಕರು ಬರಲಾಗುವುದಿಲ್ಲ ಹಾಗೆ ಮಾಡಲು ಅವರಿಗಾರೂ ಆಜ್ಞೆಮಾಡಿಲ್ಲ."

"ಅದೇನೋ ನಿಜ"

"ನೀವು ಸೈನಿಕರನ್ನು ಬಿಟ್ಟು ದೂರ ಹೋಗುತ್ತಲೇ ಜನಗಳ ಕೈಗೆ ಸಿಕ್ಕಿ ಬೀಳುವಿರಿ"

"ಆದರೆ ಪೋಲೀಸಿನವರಿಲ್ಲವೆ"?

"ಎಲ್ಲರಿಗಿಂತಲೂ ಹೆಚ್ಚಾಗಿ ಪೋಲೀಸಿನವರಿಗೆ ನಿಮ್ಮ ಮೇಲೆ ಆಗ್ರಹವಿದೆ"

ಯುವತಿಯೊಬ್ಬಳು ಮಧ್ಯಮ ವಯಸ್ಕರಾದ ಪುರುಷರಿಬ್ಬರೊಡನೆ ನಿಂತು ಮಾತನಾಡುತ್ತಿದ್ದಳು ಅವರಲ್ಲಿ ಹಿರಿಯನಾದವನು ಮಾತ್ರ ಈಗ ಅವಳೊಡನೆ ಸಂಭಾಷಿಸುತ್ತಿದ್ದನು ಕಾರಾಗೃಹದಿಂದ ಪುರುಷರಿಬ್ಬರೂ ಇಳಿದು ಬರುತ್ತಿದ್ದಾಗ ಮೆಟ್ಟಲುಗಳ ಬಳಿ ಯುವತಿಯು ನಿಂತಿದ್ದಳು. ಆಗವಳು ಅವರಲ್ಲಿ ಹಿರಿಯವನೊಡನೆ ಮಾತನಾಡಲಾರಂಭಿಸಿದ್ದಳು ಅವಳು ಕಡೆಯಲ್ಲಿ ಹೇಳಿದ ಮಾತನ್ನು ಕೇಳಿ ಹಿರಿಯವನು "ಹಾಗಾದರೆ ನಾವೇನು ಮಾಡಬೇಕೆನ್ನುವೆ?" ಎಂದನು

ಯುವತಿ.—ನಾನು ತಮ್ಮ ಸ್ಥಿತಿಯಲ್ಲಿದ್ದಿದ್ದರೆ ಕಾರಾಗೃಹದ ಹಿಂಬಾಗಿಲಿನ ಮುಖಾಂತರ ಹೊರಟು ಹೋಗುತ್ತಿದ್ದೆನು ಎಲ್ಲರೂ ನಿಮಗಾಗಿ ದೊಡ್ಡವೀಧಿಯಲ್ಲಿ ಕಾದಿರುವರು ನೀವು ಹಿಂಬಾಗಿಲಿನಿಂದಲೇ ಹೊರಟು ಪಟ್ಟಣದ ಹೆಬ್ಬಾಗಿಲೊಂದರ ಬಳಿಗೆ ಹೋಗಬಹುದು.

ಹಿರಿಯವನು—ಆದರೆ ನನ್ನ ತಮ್ಮನಿಗೆ ನಡೆಯಲು ಶಕ್ತಿಯಿಲ್ಲವಲ್ಲ.

ಅದನ್ನು ಕೇಳಿ ಕಿರಿಯುವನು ಬಹಳ ಧೈರ್ಯವನ್ನು ತಂದುಕೊಂಡು, "ಪ್ರಯತ್ನಪಟ್ಟುನೋಡುತ್ತೇನೆ" ಎಂದನು.

ಯುವತಿ —ನಡೆಯುವುದೇಕೆ? ನಿಮ್ಮ ಗಾಡಿಯಿರುವುದಲ್ಲಾ!

ಹಿರಿಯುವ —ಗಾಡಿಯು ದೊಡ್ಡವೀಥಿಯ ಬಳಿಯಿರುವ ಮುಂಬಾಗಿಲಿನಲ್ಲಿ ನಿಲ್ಲಿಸಲ್ಪಟ್ಟಿದೆ

ಯುವತಿ —ಹಾಗೇನೂ ಆಗಿಲ್ಲ ನಿಮ್ಮ ಗಾಡಿಯವನು ಪ್ರಾಮಾಣಿಕನೆಂದು ತಿಳಿದು ಹಿಂಬಾಗಿಲಿನ ಬಳಿ ನಿಮಗಾಗಿ ಕಾದಿರಬೇಕೆಂದವನಿಗೆ ಹೇಳಿ ಬಂದಿದ್ದೇನೆ.

ಪುರುಷರಿಬ್ಬರೂ ಯುವತಿಯನ್ನು ಕೃತಜ್ಞತೆಯಿಂದ ನೋಡಿದರು ಹಿರಿಯುವನು ಸ್ವಲ್ಪ ಹೊತ್ತು ಮೌನವಾಗಿದ್ದು, "ನಿನ್ನ ತಂದೆಯು ಜೈಲರನಷ್ಟೆ. ಆತನು ನಮಗಾಗಿ ಹಿಂಬಾಗಿಲನ್ನು ತೆರೆಯುವನೆ ನೋಡಬೇಕು" ಎಂದನು.

ಯುವತಿ.—ಖಂಡಿತವಾಗಿ ಅವನು ಬಾಗಿಲು ತೆರೆಯುವುದಿಲ್ಲ.

"ಹಾಗಾದರೇನು ಮಾಡೋಣ?"

"ಅವನು ಬಾಗಿಲು ತೆರೆಯಲು ಒಪ್ಪುವುದಿಲ್ಲವೆಂದು ಮೊದಲೇ ತಿಳಿದಿದ್ದೆನು ಅವನು ಕಿಟಕಿಯ ಮೂಲಕ ಸೈನಿಕನೊಬ್ಬನೊಡನೆ ಮಾತನಾಡುತ್ತಿದ್ದಾಗ ಹಿಂಬಾಗಿಲಿನ ಬೀಯಗವ ಕೈಯನ್ನು ಗೊಂಚಲಿನಿಂದ ಹಾರಿಸಿಬಿಟ್ಟೆನು"

"ಅದೀಗ ನಿನ್ನಲ್ಲಿದೆಯೆ?"

"ಇಲ್ಲಿಯೇ ಇದ!"

ಕಿರಿಯುವನು ಅದನ್ನು ಕೇಳುತ್ತಲೇ ಬಹಳ ಸಂತೋಷವನ್ನೂ ಆಶ್ಚರ್ಯವನ್ನೂ ಕೃತಜ್ಞತೆಯನ್ನೂ ಪ್ರಕಟಿಸುತ್ತ "ಮಗು! ನನ್ನ ಅಣ್ಣನು ಜೈಲಿನಲ್ಲಿರುವ ನನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾನೆ ಆದರೆ ಅವನಿಗಾಗಲಿ ನನಗಾಗಲಿ ನಿನ್ನಷ್ಟು ಮುಂದಾಲೋಚನೆಯು ತೋರಲಿಲ್ಲವಮ್ಮ ನಿನ್ನ ಉಪಕಾರಕ್ಕಾಗಿ ನಾನೇನೂ ನಿನಗೆ ಕೊಡಲಾರೆ ನನ್ನ ಕೊರಡಿಯಲ್ಲಿ ಗೀತೆಯ ಪುಸ್ತಕವೊಂದಿದೆ. ಅದನ್ನು ನನ್ನ ಕಡೆಯ

ಬಹುಮಾನವಾಗಿಟ್ಟುಕೊಂಡಿರು ತಾಯಿ! ನಿನಗೆ ಅದು ಅದೃಷ್ಟವನ್ನು ತರಲಮ್ಮ" ಎಂದನು

ಯುವತಿ :—ಅದನ್ನೆಂದಿಗೂ ಬಿಟ್ಟಿರುವುದಿಲ್ಲ ಯೋಚಿಸಬೇಡಿ.

ಅಷ್ಟು ಹೇಳಿ ಅವಳು, "ಅಯ್ಯೋ! ನನಗೆ ಓದುವುದಕ್ಕೆ ಬರುವುದಿಲ್ಲವಲ್ಲಾ! ಎಂತಹ ಕಷ್ಟ" ಎಂದು ಕೊಂಡಳು

ಆ ಸಮಯದಲ್ಲಿ ಕಾರಾಗಾರದ ಹೊರಭಾಗದಲ್ಲಿ ಜನಗಳು ಕೂಗುವ ಶಬ್ದವೂ ಅರಚುವ ಧ್ವನಿಯೂ ಹೆಚ್ಚಾಗಿ ಕೇಳಬಂದುವು

ಯುವತಿಯು ಅವರಿಬ್ಬರನ್ನೂ ಬನ್ನಿರೆಂದು ಕರೆಯುತ್ತ ಕಾರಾಗಾರದ ಹಿಂಬಾಗಿಲಿನ ಬಳಿಗೆ ಕರೆದುಕೊಂಡು ಹೋದಳು ಯುವತಿಯು ಬಾಗಿಲನ್ನು ತೆರೆದಳು. ಹೊರಗಡೆ ಜನಸಂಚಾರ ರಹಿತವಾದ ಸಣ್ಣ ಬೀದಿಯೊಂದಿದ್ದಿತು. ಅಲ್ಲಿ ಬಂಡಿಯೊಂದು ಕಾದಿದ್ದಿತು ಬಂಡಿಯವನು ತನ್ನ ಯಜಮಾನನನ್ನು ನೋಡುತ್ತಲೇ, "ಬೇಗ ಬನ್ನಿ ನನ್ನೊಡೆಯ! ಜನರು ಕೂಗುತ್ತಿರುವುದು ಕೇಳಿಸುವುದಿಲ್ಲವೆ?" ಎಂದನು ಕಿರಿಯವನು ಬಹಳ ನೊಂದಿದ್ದವನಂತೆ ಕಂಡು ಬರುತ್ತಿದ್ದನು ಅವನ ಕೈಗಳೂ ಕಾಲುಗಳೂ ಬಟ್ಟೆಗಳಿಂದ ಬಿಗಿಯಲ್ಪಟ್ಟಿದ್ದುವು ಅವನನ್ನು ಹಿರಿಯವನು ಗಾಡಿಯಲ್ಲಿ ಮೊದಲು ಕುಳ್ಳಿರಿಸಿ ತಾನೂ ಕುಳಿತು, ಯುವತಿಯ ಕಡೆಗೆ ನೋಡಿ, "ಬರುತ್ತೇನಮ್ಮ ಮಗು! ನನ್ನ ಕೃತಜ್ಞತೆಯನ್ನು ಹೇಳುವುದಕ್ಕೆ ಮಾತುಗಳೇ ಬರಲೊಲ್ಲವು ಇಬ್ಬರ ಪ್ರಾಣಗಳನ್ನುಳಿಸಿದುದಕ್ಕಾಗಿ ದೇವ ದೇವನು ನಿನಗೆ ಪ್ರತಿಫಲವನ್ನೀಯುವನು" ಎಂದನು

ಯುವತಿಯು "ಹೋಗಿ, ಮೊದಲು ಹೊರಟುಹೋಗಿ ಜನರು ಕಾರಾಗೃಹದ ಬಾಗಿಲನ್ನೊಡೆಯುತ್ತಿರುವಂತೆ ತೋರುತ್ತಿದೆ" ಎಂದಳು

ಹಿರಿಯವನು ಗಾಡಿಯಲ್ಲಿ ಕುಳಿತು ಪಟ್ಟಣದ ಹೆಬ್ಬಾಗಿಲೊಂದರ ಕಡೆಗೆ ಗಾಡಿಯನ್ನು ಬಿಡುವಂತೆ ಆಜ್ಞೆ ಮಾಡಿದನು

ಗಾಡಿಯು ವೇಗವಾಗಿ ಹೊರಟು ಹೋಯಿತು. ಯುವತಿಯು ಅದನ್ನೇ ಕಣ್ಣಿಗೆ ಕಾಣುವವರೆಗೆ ನೋಡುತ್ತಿದ್ದು ಹಿಂದಕ್ಕೆ ಹೋಗಿ ತನ್ನಲ್ಲಿದ್ದ ಬೀಯಗದ ಕೈಯನ್ನು ಭಾವಿಯೊಂದರಲ್ಲಿ ಎಸೆದಳು

ಆ ಸಮಯದಲ್ಲಿ ಜನರು ಕಾರಾಗೃಹದ ಹೆಬ್ಬಾಗಿಲನ್ನು ಒಡೆಯುವ

ಪ್ರಯತ್ನದಲ್ಲಿದ್ದರು ಜೈಲರನು ಯುವತಿಯ ತಂದೆ. ಅವನಿಗೆ ಬಾಗಿಲನ್ನು ತೆರೆಯಲಿಷ್ಟವಿರಲಿಲ್ಲ ಆದರೂ ಜನಗಳ ಪೆಟ್ಟಿನಿಂದ ಬಾಗಿಲು ಹೊಡೆದು ಹೋಗಲು ಹೆಚ್ಚುಕಾಲ ವಿಳಂಬವಾಗುವಂತಿರಲಿಲ್ಲ ಅದನ್ನೊಡೆಯಲು ಬಿಡುವುದಕ್ಕೆ ಬದಲಾಗಿ ಅದನ್ನು ತೆರೆಯುವುದೇ ಮೇಲೆಂದು ಜೈಲರನು ಯೋಚಿಸುತ್ತಿರುವಷ್ಟರಲ್ಲಿ ಅವನ ಅಂಗಿಯನ್ನಾರೋ ಎಳೆಯುತ್ತಿದ್ದುದು ಅವನಿಗೆ ಅರಿವಾಯಿತು

ನೋಡಲಾಗಿ ತನ್ನ ಮಗಳು ತನ್ನ ಅಂಗಿಯನ್ನೆಳೆಯುತಿದ್ದುದು ಕಂಡು ಬಂದಿತು ಅವನು " ಆ ಹುಚ್ಚರು ಕೂಗುತ್ತಿರುವುದು ಕೇಳಿಸುತ್ತಿದೆಯೆ ? " ಎಂದನು

" ಚೆನ್ನಾಗಿ ಕೇಳಿಬರುತ್ತಿದೆ ನಿನ್ನ ಸ್ಥಾನದಲ್ಲಿ ನಾನಿದ್ದಿದ್ದರೆ

" ಬಾಗಿಲನ್ನು ತೆರೆಯುತ್ತಿದ್ದೆಯೊ ? "

" ಇಲ್ಲ ಅದನ್ನು ಒಡೆಯಲು ಬಿಡುತ್ತಿದ್ದೆನು "

" ಹಾಗೇನಾದರೂ ಆದರೆ ನನ್ನನ್ನು ಜನರು ಕೊಲ್ಲದೆ ಬಿಡುವರೆ ? "

" ನಿನ್ನನ್ನು ನೋಡಿದರೆ ತಾನೆ ಕೊಲ್ಲುವುದು "

" ನೋಡದೆ ಬಿಡುವರೆ "

" ಎಲ್ಲಿಯಾದರೂ ಅವಿತುಕೊಂಡರೆ ಸರಿ "

" ಎಲ್ಲಿಗೆ ಹೋಗಲಿ ? "

" ಏಕಾಂತವಾದ ಗುಹೆಯಿಲ್ಲವೆ ? ಅಲ್ಲಿ ಅವಿತುಕೊಂಡರಾಯಿತು "

" ಆದರೆ ನೀನೇನು ಮಾಡುವೆ ಮಗು ?

" ನಾನು ನಿನ್ನೊಡನೆ ಬರುತ್ತೇನೆ ಬಾಗಿಲಿಗೆ ಬೀಗವನ್ನು ಹಾಕಿ ಬಿಟ್ಟರೆ ಸರಿ ಅವರೆಲ್ಲರೂ ಕಾರಾಗೃಹದಿಂದ ಹೋದ ಬಳಿಕ ಅಲ್ಲಿಂದ ಹೊರಕ್ಕೆ ಬರಬಹುದು "

" ನಿಜ ಮಗು ! ಅಷ್ಟು ಚಿಕ್ಕ ತಲೆಯಲ್ಲಿ ಇಷ್ಟೊಂದು ಬುದ್ಧಿಯನ್ನು ಹೇಗೆ ತುಂಬಿಕೊಂಡಿರುವೆಯೆ ? "

ಜನಗಳ ಕೂಗಿನೊಡನೆ ಬಾಗಿಲೊಡೆದ ಶಬ್ದವು ಸೇರಿಕೊಳ್ಳುತ್ತಿದ್ದ

ಸಮಯದಲ್ಲಿ ಯುವತಿಯು ಗುಹೆಯ ಬಾಗಿಲನ್ನು ತೆರೆದು "ಅಪ್ಪಾ! ಒಳಕ್ಕೆ ಬೇಗ ನಡೆ" ಎಂದಳು.

ಅವನು "ನಮ್ಮ ಬಂದಿಗಳ ಗತಿಯೇನು"? ಎಂದನು.

ಅವಳು ಅದಕ್ಕುತ್ತರವಾಗಿ "ದೇವರು ಅವರ ರಕ್ಷಣೆ ವಹಿಸುತ್ತಾನೆ. ನಾನು ನಿನ್ನ ರಕ್ಷಣೆ ವಹಿಸುತ್ತೇನೆ" ಎಂದಳು.

ಅವರಿಬ್ಬರೂ ಗುಹೆಯನ್ನು ಪ್ರವೇಶಿಸಿದರು ಆ ಸಮಯದಲ್ಲಿ ಜನರು ಕಾರಾಗೃಹವನ್ನು ಪ್ರವೇಶಿಸಿದ್ದರು.



# ಪುಷ್ಪಲತಾ

## ಪ್ರಥಮ ಪರಿಚ್ಛೇದ

---

### ಕೃತಜ್ಞತೆಯುಳ್ಳ ಪುರಜನರು

ವಿಲಾಸನಗರಿಯು ಯಾವ ರಾಜ್ಯಕ್ಕೆ ಮುಖ್ಯಪಟ್ಟಣವೋ ಅದೇ ರಾಜ್ಯದ ಪಕ್ಕದಲ್ಲಿರುವ ರಾಜ್ಯಕ್ಕೆ ಸುರನಗರಿಯು ಮುಖ್ಯಪಟ್ಟಣ ಆ ಪಟ್ಟಣದಲ್ಲಿ ಸಾಮಾನ್ಯವಾಗಿ ಯಾವಾಗಲೂ ಸಂತೋಷವೂ ಸ್ವೈರ್ಮ ಲ್ಯವೂ ಕಂಡುಬರುವುವು ಅಲ್ಲಲ್ಲಿರುವ ಉದ್ಯಾನಗಳಲ್ಲಿನ ವೃಕ್ಷಗಳು ನೆರಳನ್ನು ಹರಡಿರುವುವು ಎತ್ತರದ ವೃಕ್ಷಗಳು ಮನೆಗಳ ಮೇಲೆಲ್ಲಾ ಹರಡಿಕೊಂಡಿರುವುವು. ಏಳುಭಾಗಗಳುಳ್ಳ ರಾಜ್ಯಕ್ಕೆ ಸುರನಗರಿಯು ಮುಖ್ಯಪಟ್ಟಣವಾಗಿದ್ದಿತು. 1672 ನೇ ಇಸವಿಯ ಆಗಸ್ಟ್ ೩೦ನೆಯ ತಾರೀಖಿನದಿನ ಪಟ್ಟಣದ ಎಲ್ಲ ಬೀದಿಗಳಲ್ಲಿಯೂ ಜನರು ನರನರನೆ ನಡೆದು ಹೋಗುತ್ತಿದ್ದರು ಮೇಲ ಮೇಲೆ ಉಸಿರುಬಿಡುತ್ತೆ ಕೆಲವರು ಏದುತ್ತಿದ್ದರು ಅವರ ನೊಂಟಗಳಲ್ಲಿ ದೊಡ್ಡ ಚೂರಿಗಳೂ, ಕೈಗಳಲ್ಲಿ ದೊಣ್ಣೆಗಳೂ, ಭುಜಗಳ ಮೇಲ ಬಂದೂಕುಗಳೂ ಕಾಣಬರುತ್ತಿದ್ದುವು ಅವರೆಲ್ಲರೂ ಕಾರಾಗೃಹಾಭಿಮುಖವಾಗಿ ಹೋಗುತ್ತಿದ್ದರು ಅದರಲ್ಲಿ ರಮಾನಾಥನೆಂಬೊಬ್ಬ ಅಧಿಕಾರಿಯನ್ನು ಬಂಧಿಸಿದ್ದರು ಅವನು ಸುರನಗರಿಗೆ ಸ್ವಲ್ಪ ದೂರದಲ್ಲಿದ್ದ ರತ್ನಗಿರಿಯಲ್ಲಿ ಪೌರಸಭಾಧ್ಯಕ್ಷನಾಗಿದ್ದವನು ಅಲ್ಲದೆ ಏಳುಭಾಗಗಳರಾಜ್ಯದ ಪ್ರತಿನಿಧಿಗಳಲ್ಲೊಬ್ಬನಾಗಿದ್ದನು. ಅವನ ಅಣ್ಣನಾದ ಉಮಾನಾಥನೆಂಬುವವನು ನೌಕೆ ಕೊಡುವ ಅಧಿಕಾರಿಯಾಗಿದ್ದನು. ರಮಾನಾಥನು ಖೂನಿ ಮಾಡುವ ಪ್ರಯತ್ನಮಾಡಿದನೆಂದು ಅವನ ಮೇಲೆ

ಆಪಾದನೆಯಾಗಿ ಅವನು ಕಾರಾಗೃಹದಲ್ಲಿ ಬಂದಿಯಾಗಿಡಲ್ಪಟ್ಟಿದ್ದನು. ಪ್ರಕೃಥ ಕಥೆಯನ್ನು ಚೆನ್ನಾಗಿ ಅರಿಯಲು ಅನುಕೂಲವಾಗುವಂತೆ ಈ ರಮಾನಾಥ ಉಮಾನಾಥರ ವಿಷಯವನ್ನು ಸ್ವಲ್ಪ ವಿವರವಾಗಿ ಹೇಳುವೆವು.

ರಮಾನಾಥನಿಗೆ ಸುಮಾರು ನಲವತ್ತೊಂಭತ್ತು ವರ್ಷಗಳಾಗಿದ್ದುವು ರಾಜ್ಯದ ಅತ್ಯುನ್ನತಾಧಿಕಾರಿಯಾಗಿ ಯಾವಾಗಲೂ ಗವರ್ನರನು ಹಿಂದಿನ ಕಾಲದಲ್ಲಿ ಕೆಲಸಮಾಡುತ್ತಿದ್ದನು ಆದರೆ ಅವನ ಆಳ್ವಿಕೆಯು ಅನೇಕ ಸಮಯಗಳಲ್ಲಿ ದಬ್ಬಾಳಿಕೆಯಾಗಬಹುದೆಂದು ಉಮಾನಾಥನು ಪ್ರಜಾಪ್ರಭುತ್ವ ಸರ್ಕಾರವನ್ನು ಜಾರಿಗೆ ತರಿಸಿದ್ದನು. ಕಾಲಾನುಕ್ರಮದಲ್ಲಿ ಜನರಿಗೆ ಇದು ಬೇಸರಿಕೆಯಾಗುತ್ತ ಬಂದಿತು ಅವರು ಗವರ್ನರ ಆಳ್ವಿಕೆಯೇ ಪುನಃ ಬರಲೆಂದಾಶಿಸುತ್ತಿದ್ದರು ಅದನ್ನು ವಿರೋಧಿಸುತ್ತಿದ್ದವರಲ್ಲಿ ಮುಖ್ಯರಾದವರು ಉಮಾನಾಥ ರಮಾನಾಥರಾಗಿದ್ದರು ಆದುದರಿಂದ ಜನರಿಗೆ ಅವರಿಬ್ಬರಮೇಲೂ ಅತೀವಕ್ರೋಧವಿದ್ದಿತು. ರಾಜಕುಮಾರ ವಿನಯಸಿಂಹನನ್ನು ಗವರ್ನರ್ ಮಾಡಬೇಕೆಂದು ಜನರು ಬಹಳ ಪ್ರಯತ್ನಪಡುತ್ತಿದ್ದರು ಆದರೆ ಅವರ ಪ್ರಯತ್ನವು ಇನ್ನೂ ನಫಲವಾಗುವುದರಲ್ಲಿಯೇ ಇದ್ದಿತು

ರಮಾನಾಥನೂ ಉಮಾನಾಥನೂ ಪಕ್ಕ ರಾಜ್ಯದ ದೊರೆಯನ್ನು ವಿಲಾಸನಗರಿಯಲ್ಲಿ ಆಗಾಗ ವಿಚಾರಿಸುತ್ತಿದ್ದುದಲ್ಲದೆ ಅವನೊಡನೆ ಪತ್ರ ವ್ಯವಹಾರ ನಡೆಸುತ್ತಿದ್ದರು ಆ ರಾಜನು ಆ ಸಮಯದಲ್ಲಿ ಮಹಾ ಪ್ರತಿಭಾಶಾಲಿಯಾಗಿದ್ದನು ಅವನ ಪ್ರತಾಪವು ನೆರೆಯಲ್ಲಿದ್ದ ಅನೇಕ ರಾಜ್ಯಗಳಲ್ಲಿ ಪ್ರಖ್ಯಾತವಾಗಿದ್ದಿತು. ಅವನು ಅನೇಕ ಸಮಯಗಳಲ್ಲಿ ಸುರನಗರಿಯಮೇಲೆ ಯುದ್ಧಮಾಡಿ ಆ ರಾಜ್ಯದ ಜನರನ್ನು ಸೋಲಿಸಿ ಬಿಟ್ಟಿದ್ದನು ಹೀಗಾಗಿ ವಿಲಾಸನಗರಿಯ ರಾಜನನ್ನು ಸುರನಗರಿಯ ಜನರು ಬಹಳವಾಗಿ ದ್ವೇಷಿಸಿ ಅವನನ್ನು ಬೈಯುತ್ತ ಹಾಸ್ಯಮಾಡುವುದರಲ್ಲಿ ನಿರತರಾಗಿದ್ದರು ರಮಾನಾಥನೂ ಉಮಾನಾಥನೂ ಪಕ್ಕದ ರಾಜ್ಯದವರನ್ನು ಸಮಾಧಾನಗೊಳಿಸುತ್ತಿರುವುದೇ ಮೇಲೆಂದು ಭಾವಿಸಿ ಉಪಾಯವಾಗಿ ಅವರೊಡನೆ ವರ್ತಿಸುತ್ತಿದ್ದರು ಸುರನಗರಿಯ ಜನರು ಮಾತ್ರ ನೆರೆ ರಾಜ್ಯದವರನ್ನು ಸೋಲಿಸುವ ಪ್ರತಿಭಾಶಾಲಿಯೊಬ್ಬನು ದೊರೆತರೆ ಸಾಕೆಂದು

ಹಾತೊರೆಯುತ್ತಿದ್ದರು. ರಾಜಕುಮಾರ ವಿನಯಸಿಂಹನು ಹಾಗೆ ಮಾಡಲು ಸಮರ್ಥನೆಂದು ಅವರು ಅಭಿಪ್ರಾಯಪಟ್ಟಿದ್ದರು ಅವನನ್ನು ತಮ್ಮ ರಾಜ್ಯದ ಮುಖ್ಯಾಧಿಕಾರಿಯಾದ ಗವರ್ನರನನ್ನಾಗಿ ಮಾಡಬೇಕೆಂದೂ ಅವನೊಡನೆ ಸೇರಿ ಪಕ್ಕದ ರಾಜ್ಯದ ದೊರೆಯನ್ನು ಹಣ್ಣು ಮಾಡಬೇಕೆಂದೂ ಜನರು ಪ್ರಯತ್ನಿಸುತ್ತಿದ್ದರು

ರಾಜಕುಮಾರ ವಿನಯಸಿಂಹನಿಗೆ ಸುಮಾರು ಇಪ್ಪತ್ತೆರಡು ವರ್ಷಗಳಾಗಿದ್ದುವು ಅವನಿಗೆ ಉಮಾನಾಥನೇ ಗುರುವಾಗಿದ್ದನು ಅವನು ಸತ್ಪ್ರಜೆಯಾಗುವಂತೆ ಅವನ ಗುರುವು ಸರ್ವಪ್ರಯತ್ನವನ್ನೂ ಮಾಡಿದ್ದನು ಆದರೆ ಉಮಾನಾಥನಿಗೆ ಶಿಷ್ಯನ ಮೇಲಿದ್ದ ಪ್ರೇಮಕ್ಕಿಂತ ತನ್ನ ದೇಶದ ಮೇಲೆ ಹೆಚ್ಚು ಪ್ರೇಮ ಇದ್ದಿತಾಗಿ ಅವನು ಹೊಸ ಕಾನೂನನ್ನು ಜಾರಿಗೆ ತರಿಸಿ ರಾಜ್ಯವನ್ನು ಪ್ರಜಾಪತಿನಿಧಿಗಳು ಆಳುವಂತೆ ಮಾಡಿದ್ದನು ಆದರೆ ಜನಗಳ ಚಂಚಲ ಬುದ್ಧಿಯಿಂದಲೂ, ನೆರೆ ರಾಜ್ಯದಮೇಲೆ ಅವರಿಗಿದ್ದ ದ್ವೇಷಾಸೂಯೆ ಭಯಗಳಿಂದಲೂ ಪ್ರಜಾಪ್ರತಿನಿಧಿ ಸರ್ಕಾರವು ತಪ್ಪಿ ಕಾಲಾನುಕ್ರಮದಲ್ಲಿ ಗವರ್ನರನ ಸರ್ವಾಧಿಕಾರ ಪ್ರಭುತ್ವವೇ ಪುನ ಏರ್ಪಟ್ಟುಹೋಯಿತು

ಪುನಃ ಸರ್ವಾಧಿಕಾರ ಪ್ರಭುತ್ವವುಂಟಾಗುತ್ತಲೇ ಉಮಾನಾಥನು ಉಪಾಯಾಂತರ ಕಾಣದೆ ಜನರ ನಿರ್ಧಾರಕ್ಕೆ ತಲಬಾಗಿಸಿ ನಡೆದನು ಆದರೆ ರಮಾನಾಥನು ಮಾತ್ರ ಹಟ ಹಿಡಿಯತೊಡಗಿದನು ರತ್ನಗಿರಿಯಲ್ಲಿದ್ದ ರಮಾನಾಥನಮನೆಗೆ ವಿನಯಸಿಂಹನ ಕಡೆಯ ಜನರು ನುಗ್ಗಿ ಖೂನಿ ಮಾಡುವುದಾಗಿ ಹೆದರಿಸಿದರೂ ಅವನು ಗವರ್ನರನ ಪುನರಾಗಮನ ಪತ್ರಕ್ಕೆ ಸಹಿಹಾಕುವುದಿಲ್ಲವೆಂದು ಹಟಮಾಡತೊಡಗಿದನು ಅವನ ಪತ್ನಿಯು ಅಳುತ್ತ ಬಹಳವಾಗಿ ಬೇಡಿಕೊಂಡುದರ ಮೇಲೆ ತನ್ನ ಸಹಿಯನ್ನು ಹಾಕಿ ಕಡಯಲ್ಲಿ ಬಲವಂತದಮೇಲೆ ಸಹಿಹಾಕಿದುದಾಗಿ ಬರೆದನು

ಆದಿನ ಅವನು ಖೂನಿಯಾಗದಿದ್ದುದು ಬಹಳ ಆಶ್ಚರ್ಯಕರವೆಂದು ಹೇಳಬೇಕು !

ಉಮಾನಾಥನು ತನ್ನ ಒಪ್ಪಿಗೆಯನ್ನಿತ್ತುದರಿಂದೇನೂ ಹೆಚ್ಚು ಸೌಕರ್ಯಗಳನ್ನು ಪಡೆಯಲಿಲ್ಲ ಕೆಲವು ದಿನಗಳಲ್ಲಿಯೇ ಅವನನ್ನಾರೋ

ಗಾಯಪಡಿಸಿದರು. ಅವನಿಗೆ ಬಹಳಗಾಯವಾದರೂ ಪ್ರಾಣವು ಮಾತ್ರ ಹೋಗಲಿಲ್ಲವಾಗಿ ಅವನು ಅಷ್ಟರಲ್ಲಿಯೇ ಸಂತೋಷಪಡಬೇಕಾಯಿತು.

ವಿನಯಸಿಂಹನ ಕಡೆಯವರಿಗೆ ಮಾತ್ರ ಇಷ್ಟುಮಾತ್ರ ನಡೆದುದು ಸಂತೋಷವನ್ನುಂಟುಮಾಡಲಿಲ್ಲ ಅವರು ತಮ್ಮ ಪ್ರಯತ್ನಗಳಿಗೆ ಈ ಸಹೋದರರಿಬ್ಬರೂ ಅಡಚಣೆತರುವರೆಂದು ತಿಳಿದು ಅವರನ್ನು ತಾವೇ ಖೂನಿಮಾಡಲಾಗದೆಹೋದರೆ ಬೇರೆ ಉಪಾಯಾಂತರದಿಂದಲಾದರೂ ಅವರನ್ನು ತೀರಿಸಬಿಡಬೇಕೆಂದು ಯೋಚಿಸಿದರು ಒಳ್ಳೆಯ ಕೆಲಸಗಳಿಗೆ ಮುಂದಾಳುಗಳು ಸಿಕ್ಕುವುದು ಕಷ್ಟ ಕೆಟ್ಟಕಾರ್ಯಗಳಿಗೆ ಅನೇಕ ಮುಂದಾಳುಗಳು ದೊರಕುವರು. ಸುರನಾಥನೆಂಬೊಬ್ಬ ಸರ್ಜನನು ಮುಂದೆ ಬಂದು, ರಮಾನಾಥನು ವಿನಯಸಿಂಹನನ್ನು ದ್ವೇಷಿಸುತ್ತಿದ್ದನೆಂದೂ, ಅದಕ್ಕಾಗಿ ಗವರ್ನರನ ಪತ್ರಕ್ಕೆ ಸಹಿಹಾಕಲು ಅವನು ನಿರಾಕರಿಸಿದ್ದನೆಂದೂ, ಅಷ್ಟುಸಾಲದೆಂದರಿತು ಅವನು ವಿನಯಸಿಂಹನನ್ನು ಸಂಹರಿಸುವ ಪ್ರಯತ್ನಮಾಡಿದನೆಂದೂ ಆಪಾದನೆ ಮಾಡಿದನು ವಿನಯಸಿಂಹನನ್ನು ಕೊಲ್ಲಲು ತನ್ನನ್ನೇ ಪ್ರೇರಿಸಿದನೆಂದೂ, ಆದರೆ ತಾನು ಸಂಹಾರಕ್ಕೆ ಪ್ರಯತ್ನಿಸುವ ಬದಲಾಗಿ ತನ್ನನ್ನು ಪ್ರೇರಿಸಿದವನ ಕೃತ್ಯವನ್ನೇ ಬಯಲಿಗೆಳೆದೆನೆಂದೂ ಹೇಳಿದನು ಇದೆಲ್ಲವನ್ನು ಕೇಳುತ್ತಲೇ ವಿನಯಸಿಂಹನ ಕಡೆಯವರಿಗೆ ಕ್ರೋಧವು ಬಹಳವಾಯಿತು 1672 ನೇ ಇಸವಿಯ ಆಗಸ್ಟ್ 16 ನೇ ತಾರೀಖಿನಲ್ಲಿ ರಮಾನಾಥನು ದಸ್ತಗಿರಿ ಮಾಡಲ್ಪಟ್ಟನು ಕಾರಾಗಾರದಲ್ಲಿ ಅವನಿಗೆ ಹಿಂಸೆಯು ಕೊಡಲ್ಪಟ್ಟಿತು ಅವನು ತನ್ನ ತಪ್ಪನ್ನೊಪ್ಪಿಕೊಳ್ಳಬೇಕೆಂದು ಬಲಾತ್ಕಾರವಾಗತೊಡಗಿತು. ಆದರೆ ರಮಾನಾಥನು ಎಲ್ಲ ಕಷ್ಟಗಳನ್ನೂ ಸಹಿಸಿಕೊಂಡನು ಅವನ ಹಿಂಸಕರಿಗೇ ಬೇಸರವಾಗತೊಡಗಿತು. ಅವನು ಯಾವುದನ್ನೂ ಒಪ್ಪಲಿಲ್ಲ

ವಿಚಾರಣೆಯು ನಡೆಯಿತು ಸುರನಾಥನು ತಪ್ಪಿತಸ್ಥನಲ್ಲವೆಂದೂ ರಮಾನಾಥನು ತಪ್ಪಿತಸ್ಥನೆಂದೂ ಸಿದ್ಧಾಂತವಾಯಿತು ರಮಾನಾಥನನ್ನು ದೇಶದಿಂದ ಗಡೀಪಾರು ಮಾಡಬೇಕೆಂದಾಜ್ಞೆಯಾಯಿತು

ನಿರಪರಾಧಿಯೂ ದೇಶಪ್ರೇಮಿಯೂ ಆದ ರಮಾನಾಥನಿಗೆ ವಿಧಿಸಲ್ಪಟ್ಟ ಶಿಕ್ಷೆಯಿಂದ ಜನರಿಗೆ ಸ್ವಲ್ಪ ಸಮಾಧಾನ ವಾಯಿತೆಂದು ಹೇಳಬೇಕು.

ಅವನೇನೋ ಯಾವಾಗಲೂ ಅವರ ಹಿತಕ್ಕಾಗಿಯೇ ಕೆಲಸಮಾಡಿದ್ದನು. ಆದರೂ ಜನರು ಈ ಶಿಕ್ಷೆಯಿಂದ ಪೂರ್ತಿಯಾಗಿ ತೃಪ್ತರಾಗಲಿಲ್ಲವೆನ್ನುವುದನ್ನು ಮುಂದೆ ಅರಿಯುವೆವು

ಉಮಾನಾಥನು ತನ್ನ ತಮ್ಮನಿಗುಂಟಾದ ಸ್ಥಿತಿಯನ್ನೂ ಅವನ ಮೇಲಿನ ಆಪಾದನೆಯನ್ನೂ ತಿಳಿದಮೇಲೆ ತನ್ನ ಕೆಲಸಕ್ಕೆ ರಾಜೀನಾಮೆ ಯನ್ನಿತ್ತನು ಅವನು ದೇಶಕ್ಕೆ ಮಾಡಿದ ಉಪಕಾರಕ್ಕೆ ಬದಲಾಗಿ ಪುರಜನರು ಅವನನ್ನು ದ್ವೇಷಿಸಿದುದಲ್ಲದೆ ಅವನ ದೇಹದ ಮೇಲೆ ಹೆಚ್ಚುಗಾಯಗಳನ್ನು ಮಾಡಿ ತಮ್ಮ ಕರ್ತವ್ಯವನ್ನು ಹೆಚ್ಚಾಗಿ ವ್ಯಕ್ತಪಡಿಸಿದರು ತಮ್ಮ ಸ್ವಂತಕೆಲಸಕಾರ್ಯಗಳನ್ನು ಬಿಟ್ಟು ತಮ್ಮ ದೇಶಸೇವೆಯಲ್ಲಿ ನಿರತರಾಗುವವರಿಗೆ ಪುರಜನರಿಂದ ಅನೇಕವೇಳೆಗಳಲ್ಲಿ ದೊರೆಯುವ ಪ್ರತಿಫಲವೇ ಇದು!

ಈ ಮಧ್ಯೆ ವಿನಯಸಿಂಹನು ಗವರ್ನರನಾಗಿ ಸರ್ವಾಧಿಕಾರವನ್ನು ವಹಿಸಿ, ರಮಾನಾಥ ಉಮಾನಾಥರ ದೇಹಗಳನ್ನೇ ತನ್ನ ಸಿಂಹಾಸನದ ಮೆಟ್ಟಿಲುಗಳನ್ನಾಗಿ ಮಾಡಿಕೊಳ್ಳಲು ಸರ್ವಪ್ರಯತ್ನ ಮಾಡುತ್ತ ಸಮಯವನ್ನು ಕಾಯುತ್ತಿದ್ದನು.

ಹೀಗಿದ್ದ ಪರಿಸ್ಥಿತಿಯಲ್ಲಿ ನಾವು ಮೊದಲೇ ಹೇಳಿರುವಂತೆ 1672ನೇ ಇಸವಿ ಆಗಸ್ಟ್ 20ನೇ ತಾರೀಖಿನ ದಿನ ಅನೇಕ ಪುರಜನರು ನಗರಿಯ ಮುಖ್ಯ ಕಾರಾಗೃಹದಕಡೆಗೆ ಹೋಗುತ್ತಿದ್ದರು ಆದಿನ ರಮಾನಾಥನನ್ನು ಗಡೀಪಾರು ಮಾಡುವ ದಿನವಾಗಿದ್ದಿತು ಅವನು ಕಾರಾಗಾರದ ಹಿಂಸೆಗಳಿಂದ ಹೇಗೆ ಹಣ್ಣಾಗಿದ್ದನೆಂಬುದನ್ನು ನೋಡಲು ಆ ಪುರಜನರು ಕುತೂಹಲಾವಿಷ್ಟರಾಗಿದ್ದರು ಅನೇಕರು ಗಲ್ಲಿಗೇರಿಸುವವನ ಕಾರ್ಯವನ್ನು ಮಾಡಿಬಿಡಲು ಪ್ರಯತ್ನ ಪಡುತ್ತಿದ್ದರು ಕೆಲವರು ಅವನ ಪರಾಭವವನ್ನೂ, ಅವನ ಲಜ್ಜೆಯನ್ನೂ ನೋಡಲಿಷ್ಟವುಳ್ಳವರಾಗಿದ್ದರು ಕೆಲವರು ಅವನ ಗಾಯಗಳನ್ನೆಣಿಸಲು ಪ್ರಯತ್ನಪಡಬೇಕೆನ್ನುತ್ತಿದ್ದರು ಕೆಲವರು ಅವನ ಮೇಲೆ ಮುಷ್ಟಿರಚಲು ಸಿದ್ಧರಾಗುತ್ತಿದ್ದರು ಅವನ ಶುಷ್ಕವದನವನ್ನು ನೋಡಿ ಹಾಸ್ಯಮಾಡಲು ಕೆಲವರು ಸಿದ್ಧರಾಗುತ್ತಿದ್ದರು ಕೆಲವರು ಅವನ ಮೇಲೆ ಕಲ್ಲುಗಳನ್ನೆಸೆದು ಖೂನಿಮಾಡಲು ಕೂಡ

ಸಿದ್ಧಪಡಿಸಿಕೊಳ್ಳುತ್ತಿದ್ದರು. ಕೆಲವರು ಅವನನ್ನು ಹಿಯ್ಯಾಳಿಸುತ್ತ," "ವಿನಯಸಿಂಹನು ಗವರ್ನರಾಗುವಾಗ ಬಲವಂತದಿಂದ ಸಹಿ ಮಾಡಿದ್ದೇನೆಂದವನು ಹೇಳಲಿಲ್ಲವೆ? ಅವನು ಸಾಯಬೇಕು" ಎನ್ನುತ್ತಿದ್ದರು. ಮತ್ತೆ ಕೆಲವರು, "ಅವನನ್ನು ಇಲ್ಲಿಯೇ ಕೊಲ್ಲದಿದ್ದರೆ ಅವನು ವಿಲಾಸ ನಗರಿಗೆ ಹೋಗುವನು. ತನ್ನ ಕೊರವು ಸಹೋದರನಾದ ಉಮಾನಾಥನೊಡನೆ ಅಲ್ಲಿದ್ದುಕೊಂಡು ನಮ್ಮ ರಾಜ್ಯದಮೇಲೆ ದಂಡೆತ್ತಿ ಬರುವ ಪ್ರಯತ್ನ ಪಡುವನು. ಆದುದರಿಂದ ಅವನನ್ನು ಇಲ್ಲಿಯೇ ಪೂರ್ತಿಮಾಡಿಬಿಡಬೇಕು" ಎನ್ನುತ್ತಿದ್ದರು.

ಇಂತಹ ಪರಿಸ್ಥಿತಿಯಲ್ಲಿರುವವರು ನಡೆಯಲಾರರು, ಓಡುವರು. ಜನರು ಕಾರಾಗೃಹದ ಕಡೆಗೆ ಧಾವಿಸುತ್ತಿದ್ದುದಕ್ಕೆ ಅವರ ಮನೋಭಾವವೇ ಕಾರಣವಾಗಿದ್ದಿತು.

ಸರ್ಜನ್ ಸುರನಾಥನು ಪುರಜನರ ಪ್ರೀತಿಪಾತ್ರನಾಗಿದ್ದನು. ಎಲ್ಲರೂ ಅವನನ್ನು ಪ್ರಶಂಸಿಸುವವರೇ ಆಗಿದ್ದರು. ಅವನ ಪ್ರಾಮಾಣಿಕತೆ, ದೇಶದ ಮೇಲಿನ ಪ್ರೇಮ, ಸಹೃದಯತೆ – ಇವುಗಳನ್ನು ಕೊಂಡಾಡುತ್ತಿದ್ದರು. ಎಲ್ಲರೂ ಅವನ ಕಡೆಗೆ ತೋರಿಸುತ್ತ ಅವನನ್ನು ಪ್ರಮುಖನನ್ನಾಗಿ ಮಾಡಿಕೊಳ್ಳಲೆತ್ನಿಸುತಿದ್ದರು ಈ ಖೂನಿಕಾರನು ಎಲ್ಲವನ್ನೂ ವಿವರವಾಗಿ ವಿಶದಪಡಿಸುವನಂತೆ ತೋರ್ಪಡಿಸಿಕೊಳ್ಳುತ್ತ, ತನ್ನ ಕುಬುದ್ಧಿಯನ್ನು ವ್ಯಯಮಾಡಿ ಎಲ್ಲರಿಗೂ ವಿಧ ವಿಧವಾದ ಕತೆಗಳನ್ನು ಹೇಳುತ್ತಿದ್ದನು ರಮಾನಾಥನು ತನಗೆ ಬಹಳ ಹಣವನ್ನು ಕೊಡುವುದಾಗಿ ಪ್ರಮಾಣಮಾಡಿ ಹೇಳಿದ್ದನೆಂದೂ, ವಿನಯಸಿಂಹನನ್ನು ಖೂನಿ ಮಾಡಲು ಅನೇಕ ಉಪಾಯಗಳನ್ನು ಹೇಳಿಕೊಟ್ಟಿದ್ದನೆಂದೂ, ಖೂನಿಯಾದಮೇಲೆ ಬರಬಹುದಾದ ಕಷ್ಟನಷ್ಟಗಳನ್ನು ಸರಿಪಡಿಸಲು ಪ್ರಯಾಸವಾಗದೆಂದು ಹೇಳಿದ್ದನೆಂದೂ ಹೇಳತೊಡಗಿದನು ಸುರನಾಥನ ವಚನಗಳನ್ನು ಕೇಳಿದಂತೆಲ್ಲಾ ಪುರಜನರು ವಿನಯಸಿಂಹನನ್ನು ಪ್ರಶಂಸಿಸುತ್ತಲೂ ರಮಾನಾಥ ಉಮಾನಾಥರನ್ನು ಶಪಿಸುತ್ತಲೂ ನಡೆದರು ಕೆಲವರಂತೂ ರಮಾನಾಥನನ್ನು ಗಲ್ಲಿಗೇರಿಸದೆ ಗಡಿಪಾರುಮಾಡಿದ ನ್ಯಾಯಾಧಿಪತಿಗಳನ್ನೇ ದೂಷಿಸಿದರು. ಕೆಲವರು, "ಅವನು ಓಡಿಹೋಗುತ್ತಾನೆ! ನಮಗೆ ಸಿಕ್ಕದೆ ತಪ್ಪಿಸಿಕೊಳ್ಳುತ್ತಾನೆ!

ಎಂದು ಕೂಗಿಕೊಳ್ಳುತ್ತಿದ್ದರು. ಕೆಲವರು, "ವಿಲಾಸನಗರಿಯ ಹಡಗೊಂದು ಅವನಿಗಾಗಿ ಕಾದಿದೆ. ಅದರಲ್ಲಿ ಹೊರಟು ಹೋಗುತ್ತಾನೆ! ಅದನ್ನು ಸುರನಾಥನು ನೋಡಿದ್ದಾನೆ." ಎಂದರು. ಅದನ್ನು ಕೇಳಿ ಕೆಲವರು, "ಸುರನಾಥನು ಚಿರಕಾಲ ಬಾಳಲಿ! ಅವನು ಪ್ರಾಮಾಣಿಕ' ಎಂದು ಕೂಗಿದರು. ಒಬ್ಬನು, "ಮರೆಯಬೇಡಿ. ಆ ವಂಚಕ ರಮಾನಾಥ ನೊಡನೆ ಅವನ ಅಣ್ಣ ಉಮಾನಾಥನೂ ತಪ್ಪಿಸಿಕೊಂಡುಬಿಡುತ್ತಾನೆ. ಹುಷಾರಾಗಿರಿ" ಎಂದನು ಮತ್ತೊಬ್ಬನು, "ಈ ಮೋಸಗಾರರಿಬ್ಬರೂ ವಿಲಾಸನಗರಿಯಲ್ಲಿ ನಮ್ಮ ಹಣದಿಂದ ಸೌಖ್ಯವಾಗಿರುವರು. ಅಲ್ಲಿನ ದೊರೆಗೆ ನಮ್ಮ ಹಡಗುಗಳನ್ನೂ ನಮ್ಮ ತೋಫಖಾನೆಗಳನ್ನೂ ಮಾರಿಬಿಟ್ಟಿದ್ದಾರೆ" ಎಂದನು ಬೇರೊಬ್ಬನು, "ಸರಿ ಹೀಗಿರುವಾಗ ಅವರು ತಪ್ಪಿಸಿಕೊಂಡು ಹೋಗದಂತೆ ಮಾಡಲೇಬೇಕು" ಎಂದನು

ಉದ್ರೇಕಿತವಾಗಿದ್ದ ಜನರ ಗುಂಪು, "ಕಾರಾಗೃಹದ ಕಡೆಗೆ ನಡೆಯಿರಿ! ಮೊದಲು ಅಲ್ಲಿಗೆ ನಡೆಯಿರಿ!" ಎಂದು ಕೂಗಿಕೊಂಡರು

ಹೀಗೆಯೇ ಎಲ್ಲರೂ ಕೂಗುತ್ತ ಬಂದೂಕುಗಳನ್ನು ಸರಿಪಡಿಸಿ ಕೊಳುತ್ತ ತಮ್ಮ ದೊಣ್ಣೆಗಳನ್ನು ಬೀಸುತ್ತ ಬೇಗ ಬೇಗನೆ ನಡೆದರು. ಯಾವುದನ್ನು ಬೇಕಾದರೂ ಎದುರಿಸಬಲ್ಲೆವೆಂಬ ಶಕ್ತಿಯೂ ಮೃತ್ಯುವನ್ನು ವಿಶ್ವಾಸಘಾತಕರಿಗೆ ತರುವೆವೆಂಬ ಸಂತೋಷವೂ ಅವರ ಮುಖಗಳಲ್ಲಿ ವ್ಯಕ್ತವಾಗುತ್ತಿದ್ದುವು.

ಇದುವರೆಗೆ ಯಾರಿಗೇ ಆಗಲಿ ಯಾವ ವಿಧವಾದ ಅಪಾಯವೂ ಆಗಿರಲಿಲ್ಲ ಕಾರಾಗೃಹದಮುಂದೆ ದಿನನಾಥನೆಂಬ ಸರದಾರನ ಸೈನಿಕರು ನಿಂತು ಅದನ್ನು ಕಾಯುತ್ತಿದ್ದರು ಅವರಾರೂ ಮಾತನಾಡದೆ, ಶಾಂತರಾಗಿ, ವಿಚಲಿತರಾಗದೆ ನಿಂತಿದ್ದರು ಜನರು ಎಷ್ಟು ಕೂಗುತ್ತಿದ್ದರೂ ಎಷ್ಟು ಭಯಪಡಿಸುತ್ತಿದ್ದರೂ, ಎಷ್ಟು ಗಾಬರಿಪಡಿಸುತ್ತಿದ್ದರೂ ಸೈನಿಕರು ಮೌನ ವಾಗಿದ್ದರು. ಇವರನ್ನು ನೋಡಿದೊಡನೆಯೇ ಜನರು ಸ್ವಲ್ಪ ಭೀತರಾದರು. ದಿನನಾಥನು ತನ್ನ ಕೈಯಲ್ಲಿ ಕತ್ತಿಯನ್ನು ಹಿರಿದು ಅದರ ಅಗ್ರಭಾಗವನ್ನು ಕೆಳಮುಖವಾಗಿ ಮಾಡಿಕೊಂಡು ಅಶ್ವಾರೂಢನಾಗಿ ವಿರಾಜಿಸುತ್ತಿದ್ದುದನ್ನು ನೋಡಿ ಜನರು ಮತ್ತಷ್ಟು ಭೀತರಾದರು. ಸೈನಿಕರೆಲ್ಲರೂ ಅಶ್ವಾ

ರೂಢರಾಗಿಯೇ ಇದ್ದರು. ಇವರಿಗೆದುರಾಗಿ ಪೋಲಿಸಿನವರ ತಂಡವೊಂದು ಕೂಡ ಕಾರಾಗಾರದ ರಕ್ಷಣೆಗಾಗಿ ಇಡಲ್ಪಟ್ಟಿದ್ದಿತು. ಆದರೆ ಮೌನ ವ್ರತಧಾರಿಗಳಾಗಿದ್ದ ಸೈನಿಕರನ್ನು ನೋಡಿ ಈ ಪೋಲೀಸಿನವರಿಗೆ ಕೂಡ ಭಯಸಂಚಾರವಾಗಿದ್ದಿತು. ಪೋಲೀಸಿನವರು ಸೈನಿಕರಿಗೆ ಸಹಾಯಕರಾಗಿ ನಿಲ್ಲುವುದಕ್ಕೆ ಬದಲಾಗಿ ತಾವೂಕೂಡ ಜನಗಳೊಡನೆ ಸೇರಿ "ರಾಜಕುಮಾರ ವಿನಯಸಿಂಹನಿಗೆ ವಿಜಯವಾಗಲಿ! ದ್ರೋಹಿಗಳು ನಾಶವಾಗಲಿ!" ಎಂದು ಕೂಗಿಕೊಳ್ಳುತ್ತಿದ್ದರು

ಸೈನಿಕರನ್ನು ಕಂಡು ಜನರಿಗೆ ಭಯವುಂಟಾದರೂ ಅವರು ಕೂಗುವುದನ್ನೇನೂ ಬಿಡದೆ ಮತ್ತಷ್ಟು ಗಲಾಟೆ ಮಾಡತೊಡಗಿದರು ಕೂಗಿದಷ್ಟೂ ತಮ್ಮ ಧೈರ್ಯವನ್ನು ಹೆಚ್ಚು ಪ್ರಕಾಶಮಾಡಿದಂತಾಯಿತೆಂದು ಅವರು ಮತ್ತಷ್ಟು ಗಲಭೆ ಮಾಡತೊಡಗಿದರು ಕೂಗಿದಷ್ಟೂ ಅವರ ಕ್ರೋಧವು ವೃದ್ಧಿಯಾಗ ತೊಡಗಿತು ಅವರು ಕಡೆಗೆ ಪೋಲೀಸಿನವರನ್ನೂ ಕೂಡಿಕೊಂಡು ಕಾರಾಗೃಹದ ಬಾಗಿಲಿನವರೆಗೂ ಬಂದರು ಆ ಸಮಯದಲ್ಲಿ ದಿನನಾಥನು ತಾನೊಬ್ಬನೇ ಅವರ ಕಡೆಗೆ ಕುದುರೆಯನ್ನು ಬಿಟ್ಟುಕೊಂಡು ಹೋಗಿ ಕತ್ತಿಯನ್ನೆತ್ತಿಹಿಡಿದು, ಹುಬ್ಬುಗಂಟುಹಾಕಿಕೊಂಡು, "ಪುರಜನರೆ' ಪೋಲೀಸಿನವರೆ! ನೀವು ಮುಂದೆ ನುಗ್ಗಲು ಕಾರಣವೇನು? ನಿಮಗೇನು ಬೇಕು? ಎಂದನು

ಪೋಲೀಸಿನವರು ತಮ್ಮ ಬಂದೂಕುಗಳನ್ನು ಎತ್ತಿಹಿಡಿದು, "ವಿನಯಸಿಂಹನಿಗೆ ವಿಜಯವಾಗಲಿ! ದ್ರೋಹಿಗಳಿಗೆ ವಿನಾಶವಾಗಲಿ! ಎಂದು ಕೂಗಿದರು

ದಿನನಾಥ:—'ವಿನಯಸಿಂಹನಿಗೆ ವಿಜಯವಾಗಲಿ' ಎನ್ನುವುದು ಸರಿಯೇ ಆದರೆ ಸುಟ್ಟಮೋರೆಯಲ್ಲಿ ಹಾಗೆ ಹೇಳುವುದಕ್ಕಿಂತ ಸಂತೋಷ ಸೂಚಕವಾದ ಮುಖದಲ್ಲಿ ಹೇಳಿದರೆ ನನಗೂ ಸಂತೋಷವಾಗುವುದು. 'ದ್ರೋಹಿಗಳಿಗೆ ವಿನಾಶವಾಗಲಿ!' ಎನ್ನುವುದನ್ನೂ ಬೇಕಾದಷ್ಟು ಹೇಳಿ. ಆದರೆ ಕೂಗುವುದರಲ್ಲಿ ಮಾತ್ರ ನಿಮ್ಮ ಕಾರ್ಯವು ಪರ್ಯವಸಾನವಾಗಬೇಕು. ನಿಜವಾಗಿ ದ್ರೋಹಿಗಳನ್ನು ಕೊಂದುಬಿಡಲೆತ್ನಿಸಿದರೆ ಮಾತ್ರ ನಾನು ಅಡಚಣೆ ಮಾಡಬೇಕಾಗುವುದು. ಮಾಡಿಯೂ ಮಾಡುತ್ತೇನೆ.

ದಿನನಾಥನು ಅಷ್ಟು ಹೇಳಿ ತನ್ನ ಸೈನಿಕರಿಗೆ ಆಜ್ಞೆಮಾಡಿದನು :- " ಸೈನಿಕರೆ! ಸಿದ್ಧವಾಗಿರಿ."

ಸೈನಿಕರು ಒಡೆಯನ ಆಜ್ಞೆಯನ್ನು ಪಾಲಿಸಲು ಸಿದ್ಧರಾಗಿ ಪಿಸ್ತೂಲುಗಳನ್ನು ಹಿಡಿದು ನಿಂತರು. ನೋಡಿ ಪೋಲೀಸಿನವರೂ ಅವರೊಡನಿದ್ದ ಜನರೂ ಗಾಬರಿಗೊಂಡು ಹತ್ತಾರು ಹೆಜ್ಜೆಗಳಷ್ಟು ದೂರ ಹಿಂದಕ್ಕೆ ಸರಿದರು. ದಿನನಾಥನು ಕಿರುನಗೆಯನ್ನು ತೋರುತ್ತಿ," ಓಹೋ! ಭಯಪಡಬೇಕಾದುದೇನೂ ಇಲ್ಲ. ಮಿತ್ರರೆ! ಧೈರ್ಯದಿಂದಿರಿ. ನನ್ನ ಸೈನಿಕರು ಒಂದು ಬಾರಿಯೂ ಪಿಸ್ತೂಲು ಹಾರಿಸುವುದಿಲ್ಲ ಆದರೆ ತಾವು ಮಾತ್ರ ಒಂದು ಹೆಜ್ಜೆಯನ್ನೂ ಕಾರಾಗೃಹದಕಡೆಗೆ ಇಡಲಾಗದು," ಎಂದನು

ಪೋಲೀಸಿನವರ ಮುಖಂಡನು, " ನಮ್ಮ ಬಳಿ ಬಂದೂಕುಗಳಿವೆ, ಬಲ್ಲಿರಾ ? ಸ್ವಾಮಿ!" ಎಂದನು.

ದಿನನಾಥ —ದೇವರೇ ಗತಿ! ನನಗೆ ಕಣ್ಣುಕಾಣಿಸುವುದಿಲ್ಲವೆ? ನನ್ನ ಕಣ್ಣು ಮುಂದೆಯೇ ಅವೆಲ್ಲವೂ ಥಳಥಳನೆ ಹೊಳೆಯುತ್ತಿವೆ ಆದರೆ ಒಂದು ವಿಷಯವನ್ನು ಹೇಳಬೇಕು. ನಮ್ಮ ಬಳಿ ಪಿಸ್ತೂಲುಗಳಿಗೇನೂ ಕೊರತೆಯಿಲ್ಲ ಪಿಸ್ತೂಲಿನಿಂದ ಐವತ್ತು ಗಜಗಳಷ್ಟು ದೂರ ಹೊಡೆಯಬಹುದು ನೀವು ಇಪ್ಪತ್ತೈದು ಗಜಗಳಷ್ಟು ದೂರದಲ್ಲಿರುವಿರಿ.

ಪೋಲೀಸಿನವರು ಪುನಃ ಕೋಪದಿಂದ, " ದ್ರೋಹಿಗಳಿಗೆ ವಿನಾಶವಾಗಲಿ " ಎಂದು ಕೂಗಿಕೊಂಡರು

ದಿನನಾಥನು ಗೊಣಗುತ್ತೆ, "ಹೊರಟುಹೋಗಿ ನೀವು ಹೇಳಿದುದನ್ನೇ ಹೇಳಿಬೇಸರಗೊಳಿಸುತ್ತಿರುವಿರಿ ಕೇಳಿ ಕೇಳಿ ಆಯಾಸವೂ ಆಗುತ್ತಿದೆ" ಎಂದನು ಒಡನೆಯೇ ತನ್ನ ಸೈನಿಕರಮುಂದೆ ನಿಂತನು. ಕಾರಾಗೃಹದ ಬಳಿ ಗಲಭೆಯು ಕ್ಷಣ ಕ್ಷಣಕ್ಕೂ ಹೆಚ್ಚಾಗುತ್ತಿತ್ತು

ಅದೇ ಸಮಯದಲ್ಲಿಯೇ ಉಮಾನಾಥನು ಗಾಡಿಯಿಂದಿಳಿದು ಕಾರಾಗೃಹದಲ್ಲಿದ್ದ ತನ್ನ ರಮಾನಾಥನನ್ನು ಕಂಡು ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಿದ್ದನು. ಈ ವಿಷಯವು ಪುರಜನರಿಗೆ ತಿಳಿದು ಬರಲಿಲ್ಲ. ಜನಗಳಿಂದ ಸುಮಾರು ನೂರು ಗಜಗಳ ದೂರದಲ್ಲಿದ್ದ ಹೆಬ್ಬಾಗಿಲ ಬಳಿ ಅವನು ಗಾಡಿಯಿಂದಿಳಿದು ಕಾರಾಗೃಹದ ಕಾವಲುಗಾರನಾದ ಕಾಳೀ

ಚರಣನನ್ನು ಸಣ್ಣ ಕಿಟಕಿಯಮೂಲಕ ನೋಡಿ, "ನಮಸ್ಕಾರ ಕಾಳೀಚರಣ! ನಾನು ಉಮಾನಾಥ ! ನನ್ನ ತಮ್ಮನನ್ನು ಕರೆದುಕೊಂಡು ಹೋಗುತ್ತೇನೆ. ಅವನನ್ನು ಗಡೀಪಾರು ಮಾಡಿರುವುದನ್ನು ಬಲ್ಲೆಯಷ್ಟೆ. ಅವನನ್ನು ಪಟ್ಟಣದಿಂದ ಹೊರಕ್ಕೆ ಕರೆದುಕೊಂಡು ಹೋಗುತ್ತೇನೆ'' ಎಂದನು.

ಕಾಳೀಚರಣನು ಉಮಾನಾಥನ ಹೆಸರನ್ನು ಕೇಳಿ ಗುರುತಿಸಿ ಅವನಿಗೆ ನಮಸ್ಕಾರಮಾಡಿ ಬಾಗಿಲನ್ನು ತೆರೆದು ಅವನನ್ನು ಒಳಕ್ಕೆ ಬಿಟ್ಟನು. ಉತ್ತರ ಕ್ಷಣವೇ ಕಾರಾಗೃಹದ ಬಾಗಿಲನ್ನು ಮುಚ್ಚಿ ಮೊದಲಿನಂತೆಯೇ ಬೀಯಗದಕೈಯಿಂದ ಭದ್ರಪಡಿಸಿದನು.

ಉಮಾನಾಥನು ಹತ್ತುಗಜಗಳಷ್ಟು ದೂರ ಹೋಗುವ ವೇಳೆಗೆ ಸುಂದರಿಯಾದ ಯುವತಿಯೊಬ್ಬಳು ಅವನಿಗೆದುರಾಗಿ ಬಂದಳು. ಅವನು ಅವಳ ಗಲ್ಲವನ್ನು ಮುಟ್ಟುತ್ತ, '' ಪುಷ್ಪಾ! ನನ್ನ ತಮ್ಮನು ಹೇಗಿದ್ದಾನೆ' ಎಂದನು.

ಯುವತಿಯ ಹೆಸರು ಪುಷ್ಪಲತಾ ಅವಳಿಗೆ ಸುಮಾರು ಹದಿನೆಂಟು ವರ್ಷಗಳಿರಬಹುದು ಅವಳು ಕಾವಲುಗಾರ ಕಾಳೀಚರಣನ ಪುತ್ರಿಯಾಗಿದ್ದಳು ತಂದೆಯೊಡನೆ ಕಾರಾಗೃಹದಲ್ಲಿಯೇ ಇದ್ದ ತಮ್ಮ ವಾಸಸ್ಥಳದಲ್ಲಿ ಇರುತ್ತಿದ್ದಳು. ಅವಳಿಗೆ ಕಾರಾಗೃಹದಲ್ಲಿ ನಡೆಯುವ ವಿಷಯಗಳೆಲ್ಲವೂ ತಿಳಿಯುತ್ತಿದ್ದುವು. ಅವಳು ಉಮಾನಾಥನ ಪ್ರಶ್ನೆಗೆ ಉತ್ತರವಾಗಿ, '' ಉಮಾನಾಥ ಬಾಬುಗಳೆ! ಇದುವರೆಗೆ ತಮ್ಮ ಸೋದರರಿಗಾದ ಕಷ್ಟವನ್ನು ಯೋಚಿಸಿ ನಾನೇನೂ ಭಯಪಡುತ್ತಿಲ್ಲ ಅದೆಲ್ಲವೂ ಮುಗಿಯಿತು!'' ಎಂದಳು.

ಉಮಾನಾಥ.—ಹಾಗಾದರೆ ನಿನಗೆ ಭಯವನ್ನುಂಟುಮಾಡುತ್ತಿರುವುದಾವುದು ?

ಪುಷ್ಪಲತಾ :—ಇನ್ನು ಮುಂದೊದಗುವ ಕಷ್ಟಗಳ ವಿಚಾರವಾಗಿ ಯೋಚಿಸಿದರೆ ಭಯವಾಗುತ್ತಿದೆ

ಉಮಾನಾಥ :—ಹೊರಗಡೆ ಇರುವ ಜನರ ವಿಷಯವಾಗಿ ಹೇಳುತ್ತಿರುವೆಯಾ ?

ಪುಷ್ಪಲತಾ :—ಅವರು ಕೂಗುತ್ತಿರುವುದು ಕೇಳುತ್ತಿದೆಯೆ ?

ಉಮಾ :—ಕೇಳುತ್ತಿದೆ. ಅವರಿಗೆ ಉದ್ರೇಕವಾಗಿರುವುದು ನಿಜ. ಆದರೆ ನಮ್ಮನ್ನು ಅವರು ನೋಡುತ್ತಲೇ ಶಾಂತರಾಗುವುದೂ ನಿಜ. ನಾವು ಅವರಿಗೆ ಯಾವಾಗಲೂ ಒಳ್ಳೆಯದನ್ನೇ ಮಾಡಿರುವೆವು.

ಪುಷ್ಪ :—ಕೆಟ್ಟದನ್ನು ಮಾಡದಿರುವುದಕ್ಕೆ ಅದೇನೂ ಸಹಕಾರಿಯಾಗುವುದಿಲ್ಲ. ಪ್ರಪಂಚದಲ್ಲಿ ಉಪಕಾರ ಮಾಡಿರುವವರಿಗೆ ಪ್ರತಿಯಾಗಿ ಜನರು ಅಪಕಾರ ಮಾಡುವುದೇ ಸಾಮಾನ್ಯವಾಗಿ ಕಂಡು ಬರುತ್ತಿದೆ.

ಆ ಸಮಯದಲ್ಲಿ ಕಾಳೀಚರಣನು ಮಗಳನ್ನು ಕೂಗಿದನು. ಪುಷ್ಪಲತೆಯು ಓಡಿಹೋದಳು. ಉಮಾನಾಥನು ಮುಂದುವರಿಯುತ್ತೆ, “ ಈ ಚಿಕ್ಕಹುಡುಗಿಗೆ ಓದಲುಕೂಡ ಬರುತ್ತಿಲ್ಲ. ಆದುದರಿಂದ ಅವಳಾವುದನ್ನೂ ಓದಿಲ್ಲ. ಆದರೂ ಪ್ರಪಂಚದಚರಿತ್ರೆಯೆಲ್ಲವನ್ನೂ ಒಂದೇ ಮಾತಿನಲ್ಲಿ ಹೇಳಿಬಿಟ್ಟಿದ್ದಾಳೆ ” ಎಂದುಕೊಂಡನು

# ದ್ವಿತೀಯ ಪರಿಚ್ಛೇದ

---

## ಇಬ್ಬರು ಸಹೋದರರು.

ಗಂಭೀರಭಾವದಿಂದ ಕೂಡಿದ್ದರೂ ಸ್ವಲ್ಪ ವಿಷಣ್ಣವದನನಾಗಿ ಉಮಾನಾಥನು ತನ್ನ ತಮ್ಮ ರಮಾನಾಥನಿದ್ದ ಕಾರಾಗೃಹದ ಬಳಿಗೆ ಹೋದನು. ಅದೇ ಸಮಯದಲ್ಲಿ ಪುಷ್ಪಲತೆಯು ಹೇಳಿದಂತೆ ಪುರಜನರು ದಿನನಾಥನ ಸೈನಿಕರನ್ನು ಕಾರಾಗೃಹದ ಸಮೀಪದಿಂದ ಕಳುಹುವ ಪ್ರಯತ್ನಮಾಡುತ್ತಿದ್ದರು. ಅವರು, “ ಪೊಲೀಸಿನವರಿಗೆ ವಿಜಯವಾಗಲಿ ! ” ಎಂದೊಂದು ಬಾರಿ ಕೂಗಿದರು. ದಿನನಾಥನು ತನ್ನ ಸೈನಿಕರ ಪಿಸ್ತೂಲುಗಳಿಂದ ರಕ್ಷಿತನಾಗಿದ್ದುದರಿಂದ ವ್ಯಸ್ತನಾಗದೆ ಇದ್ದನು. ಅವನು ಪೋಲೀಸಿನವರೊಡನೊಂದುಬಾರಿ ವಿನಯವಾಗಿ ಮಾತನಾಡಿದನು. ಒಂದುಬಾರಿ ಪುರಜನರೊಡನೆ ನಯವಾಗಿ ಮಾತನಾಡಿದನು. ಎಲ್ಲರಿಗೂ ವಿಷಯಗಳನ್ನು ವಿವರವಾಗಿ ಹೇಳುತ್ತೆ, ತನ್ನ ಆಜ್ಞೆಯು ಗವರ್ನರನ ಮಂತ್ರಿಸಮಿತಿಯವರಿಂದ ಬಂದುದೆಂದೂ, ಕಾರಾಗೃಹವನ್ನೂ ಅದರ ದಾರಿಗಳನ್ನೂ,

ಮೂರು ದಳಗಳ ಸಹಾಯದಿಂದ ಕಾಯುತ್ತಿರಲಾಜ್ಞೆಯಾಗಿರುವುದೆಂದೂ ಹೇಳಿದನು.

ಗವರ್ನರನ ಕಡೆಯವನೊಬ್ಬನು, "ಅದೇಕೆ ಹಾಗೆ ಆಜ್ಞೆಮಾಡಿದುದು? ಕಾರಾಗೃಹದ ಬಳಿ ಕಾವಲೇಕೆ?" ಎಂದು ಪ್ರಶ್ನೆಮಾಡಿದನು.

ದಿನನಾಥ:—ಸ್ವಲ್ಪತಾಳಿ. ಆ ಪ್ರಶ್ನೆಗೆ ಉತ್ತರ ಕೊಡಲು ನನಗೆ ಶಕ್ತಿಯಿಲ್ಲ. ಕಾರಾಗೃಹದ ಬಳಿ ಕಾವಲಿರಬೇಕೆಂದು ನನಗೆ ಹೇಳಿದ್ದಾರೆ. ನಾನು ಕಾವಲಿದ್ದೇನೆ. ನಿಮ್ಮಲ್ಲಿ ಅನೇಕರು ಮಿಲಿಟರಿಯವರಂತೆಯೇ ಕಂಡು ಬರುತ್ತಿರುವಿರಿ. ನಿಮಗೆ ಗೊತ್ತಿಲ್ಲವೆ? ಸರದಾರನಾದವನು ಮಿಲಿಟರಿ ಆಜ್ಞೆಯನ್ನುಲ್ಲಂಘಿಸಕೂಡದೆನ್ನುವುದನ್ನು ನೀವರಿತಿಲ್ಲವೆ?

"ಆದರೆ ಈ ಆಜ್ಞೆಯಿಂದ ದ್ರೋಹಿಗಳು ಪಟ್ಟಣವನ್ನು ಬಿಟ್ಟು ಹೋಗಲು ಅನುಕೂಲವಾಗುವುದು."

"ಇರಬಹುದು. ದ್ರೋಹಿಗಳನ್ನು ಗಡೀಪಾರು ಮಾಡಿರುವರಲ್ಲವೆ?"

"ಈ ಆಜ್ಞೆಯನ್ನು ಕೊಟ್ಟವರಾರು?"

"ಮಂತ್ರಿಗಳ ಸಮಿತಿಯೆಂದು ಆಗಲೇ ಹೇಳಿದೆನಷ್ಟೆ."

"ಹಾಗಾದರೆ ಆ ಮಂತ್ರಿಗಳೂ ದ್ರೋಹಿಗಳೇ ಸರಿ"

"ಅದನ್ನು ನಾನರಿಯೆ"

"ನೀನೂ ದ್ರೋಹಿಯೇ"

"ನಾನೆ?"

"ಅಹುದು, ನೀನು"

"ಓಹೋ! ಸ್ವಲ್ಪ ತಾಳಿ, ಅದರ ವಿಚಾರವನ್ನು ಸ್ವಲ್ಪ ಯೋಚಿಸಬೇಕಾಗಿದೆ. ನಾನು ಮಂತ್ರಿಗಳಿಗೆ ದ್ರೋಹವನ್ನೆಣಿಸಬೇಕೆಂದು ಹೇಳುವಿರೇನು? ಅದು ಸಾಧ್ಯವಿಲ್ಲ. ಅವರಿಂದ ಸಂಬಳ ಪಡೆಯುತ್ತಿರುವ ನಾನು ಅವರ ಆಜ್ಞೆಯನ್ನು ಅಕ್ಷರಶಃ ಪಾಲಿಸಬೇಕು."

ದಿನನಾಥನು ಹೇಳಿದುದು ನಿಜವಾಗಿದ್ದುದರಿಂದ ಅದಕ್ಕೆದುರಾಗಿ ವಾದವನ್ನು ಹೂಡುವುದು ಅಸಾಧ್ಯವಾಗಿದ್ದಿತು. ಇದನ್ನರಿತು ಜನರು ಮತ್ತಷ್ಟು ಗಲಭೆಮಾಡತೊಡಗಿದರು. ದಿನನಾಥನು ವಿಚಲಿತನಾಗದೆ ಹೇಳ ತೊಡಗಿದನು:—

"ಸ್ವಾಮಿ! ತಾವೆಲ್ಲರೂ ದೊಡ್ಡಮನುಷ್ಯರು. ನಿಮ್ಮ ಬಂದೂಕಗಳಲ್ಲಿರುವ ಗುಂಡುಗಳನ್ನು ತೆಗೆದುಹಾಕಿಬಿಡಿ. ಅವುಗಳಲ್ಲಿ ಆವುದಾದರೊಂದು ಅಕಸ್ಮಾತ್ತಾಗಿ ಹಾರಿಬಿಟ್ಟೀತು. ನಮ್ಮ ಸೈನಿಕನಾವನಿಗಾದರೂ ಅದರಿಂದ ಗಾಯವಾಗಿಬಿಟ್ಟರೆ ನಿಮ್ಮಲ್ಲಿ ಕಡೆಗೆ ಇನ್ನೂರು ಜನರನ್ನಾದರೂ ನಾವು ಗುಂಡಿನಿಂದ ಸುಟ್ಟುಬಿಡಬೇಕಾಗುವುದು. ಹಾಗೆ ಮಾಡುವುದಕ್ಕೆ ನಮಗೆ ದುಃಖವಾಗುವುದು. ನಮಗಿಂತಲೂ ನಿಮಗೆ ಹೆಚ್ಚು ದುಃಖವಾಗಬಹುದು. ಏಕೆಂದರೆ ಹಾಗಾಗಬೇಕೆಂದು ನೀವೂ ಯೋಚಿಸುತ್ತಿಲ್ಲ, ನಾನೂ ಯೋಚಿಸುತ್ತಿಲ್ಲ."

ಪೊಲೀಸಿನವನೊಬ್ಬನು ಅದನ್ನು ಕೇಳಿ, "ನೀನೇನಾದರೂ ಹಾಗೆ ಮಾಡಿದರೆ ನಿನ್ನನ್ನೂ ನಾವು ಸುಟ್ಟು ಬಿಡುವೆವು" ಎಂದನು.

ದಿನನಾಥ.—ನಿಜ. ನೀವೇನೋ ಹಾಗೆ ಮಾಡುವಿರಿ. ನಮ್ಮೆಲ್ಲರನ್ನೂ ನೀವು ಕೊಲ್ಲುವಿರೆಂದೇ ಭಾವಿಸೋಣ ಆದರೆ ಅಂತಹ ಕಾರ್ಯದಿಂದ ನಾವು ಕೊಂದಿರುವವರೇನೂ ಮೇಲೆದ್ದು ಬರುವುದಿಲ್ಲ.

"ಹಾಗಾದರೆ ಈ ಸ್ಥಳದಿಂದ ಹೊರಟುಹೋಗು. ಆಗ ಒಳ್ಳೆಯ ಪೌರನಿವಾಸಿಯಾಗಿಬಿಡುವೆ"

"ನಾನು ಪೌರನಿವಾಸಿಮಾತ್ರವಲ್ಲ. ಅಧಿಕಾರಿ. ಅದೇ ಬೇರೆ ವಿಷಯವಾಗಿ ಹೋಯಿತು. ಅಲ್ಲದೆ ನಾನು ಈ ರಾಜ್ಯದವನಲ್ಲ. ವಿಲಾಸನಗರಿಯವನು. ಆದುದರಿಂದ ನನ್ನ ಹತ್ಯೆಯು ನಿಮ್ಮ ನೆರೆರಾಜ್ಯದವರ ಅವಗಾಹನೆಗೆ ಬರುವುದು. ಅದು ಮಹತ್ತರವಾದ ವಿಷಯವೇ ಆಗಿಬಿಡುವುದು. ನನಗೆ ಸಂಬಳ ಕೊಡುತ್ತಿರುವವರು ಮಂತ್ರಿಸಮಿತಿಯವರು. ಅವರು ಈ ಸ್ಥಳವನ್ನು ಬಿಟ್ಟುಹೋಗಬೇಕೆಂದರೆ ಕ್ಷಣಮಾತ್ರದಲ್ಲಿ ಹೊರಟುಹೋಗುವೆನು. ಇಲ್ಲಿದ್ದು ನನಗೆ ಬಹಳ ಬೇಸರವೂ ಆಗಿರುವುದು."

ಅದನ್ನು ಕೇಳಿ ನೂರಾರು ಜನರು, "ನಿಜ, ನಿಜ!" ಎಂದು ಕೂಗಿಕೊಂಡರು. ಉತ್ತರಕ್ಷಣವೇ ಬೇರೆ ಐನೂರು ಧ್ವನಿಗಳು, "ಪುರಭವನಕ್ಕೆಹೋಗೋಣ ನಡೆಯಿರಿ. ಮಂತ್ರಿಸಮಿತಿಯವರನ್ನುನೋಡೋಣ, ಬನ್ನಿ, ಬನ್ನಿ!" ಎಂದು ಕೂಗಿದುವು.

ಜನರ ಗುಂಪಿನಲ್ಲಿ ಮುಖಂಡರಾಗಿ ನಿಂತು ಬಹಳ ಗಲಭೆಮಾಡು

ತ್ತಿದ್ದವರು ಪೌರಭವನದಕಡೆಗೆ ನಡೆದರು. ಮಿಕ್ಕವರೂ ಅವರನ್ನು ಹಿಂಬಾಲಿಸತೊಡಗಿದರು. ದಿನನಾಥನು ತನ್ನಲ್ಲಿಯೇ, "ಹೋಗಿ. ಮಂತ್ರಿಗಳ ಬಳಿಗೆ ಹೋಗಿ ತುಚ್ಛಕಾರ್ಯವೊಂದನ್ನು ಮಾಡಬೇಕೆಂದು ಕೇಳಿ. ಅವರು ನಿಮ್ಮ ಮಾತಿನಂತೆ ನಡೆಯುವರೆ ನೋಡಿ. ದೊಡ್ಡಮನುಷ್ಯರೆ! ತಾವು ದಯಮಾಡಿಸಿ" ಎಂದು ಹೇಳಿಕೊಳ್ಳುತ್ತಿದ್ದನು.

ಮಂತ್ರಿಗಳು ಅವನ ಪ್ರಾಮಾಣಿಕತೆಯಮೇಲೆ ಹೇಗೆ ಭರವಸೆಯನ್ನಿಟ್ಟಿದ್ದರೋ ಅದರಂತೆಯೇ ಉನ್ನತಧ್ಯೇಯವುಳ್ಳಾ ಸರದಾರನೂ ಮಂತ್ರಿಗಳ ಪ್ರಾಮಾಣಿಕತೆಯ ಮೇಲೆ ಭರವಸೆಯನ್ನಿಟ್ಟಿದ್ದನು.

ದಿನನಾಥನ ಅನುಯಾಯಿಯೊಬ್ಬನು ಆ ಸಮಯದಲ್ಲಿ ಅವನಲ್ಲಿಗೆ ಬಂದು, "ಸರದಾರರೆ! ಮಂತ್ರಿಗಳು ಇವರ ಪ್ರಾರ್ಥನೆಯನ್ನು ನಿರಾಕರಿಸಿ ಕಳುಹುವುದರಲ್ಲಿ ಸಂದೇಹವಿಲ್ಲ. ಆದರೂ ಆ ಮಂತ್ರಿಗಳು ಇನ್ನೂ ಹೆಚ್ಚುಮಂದಿ ಸೈನಿಕರನ್ನಿಲ್ಲಿಗೆ ಕಳುಹಿದರೆ ಮೇಲಾಗುವುದೆಂದು ತೋರುವುದು" ಎಂದನು.

ಈ ಸಮಯದಲ್ಲಿ ಉಮಾನಾಥನು ರಮಾನಾಥನಿದ್ದ ಕಾರಾಗಾರದ ಮೆಟ್ಟಲುಗಳನ್ನು ಹತ್ತಿಹೋಗುತ್ತಿದ್ದನು. ಆ ಗುಹೆಯ ಬಾಗಿಲಿನಬಳಿ ಬರುತ್ತಲೇ ಒಳಗಿದ್ದ ರಮಾನಾಥನು ಕಂಡು ಬಂದನು. ಅವನು ಚಾಪೆಯೊಂದರಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದನು. ಆ ವೇಳೆಗೆ ಅವನಿಗೆ ಅನೇಕ ವಿಧಗಳಲ್ಲಿ ಹಿಂಸೆಕೊಟ್ಟಾಗಿತ್ತು. ಅವನಮೇಲೆ ಗಡೀಪಾರು ಆಜ್ಞೆಯು ಜಾರಿಯಾಗುತ್ತಲೇ ಅವನಿಗೆ ಹಿಂಸೆ ಕೊಡುವುದು ನಿಲ್ಲಿಸಲ್ಪಟ್ಟಿದ್ದಿತು. ಅವನ ಬೆರಳುಗಳ ಮೂಳೆಗಳೂ ಅಂಗೈ ಮೂಳೆಗಳೂ ಜಜ್ಜಿಹೋದಂತಾಗಿದ್ದುವು. ಅವನು ಯಾವತಪ್ಪನ್ನೂ ಮಾಡಿರಲಿಲ್ಲವಾಗಿ ಮಾಡಿದೆನೆಂದೇನನ್ನೂ ಅವನು ಹೇಳಲೇ ಇಲ್ಲ. ನ್ಯಾಯಾಧಿಪತಿಗಳು ತನ್ನನ್ನು ಮರಣದಂಡನೆಗೆ ಗುರಿಮಾಡುವರೆಂದವನು ಭಾವಿಸಿದ್ದನು. ಆದರೆ ಗಡೀಪಾರಾಜ್ಞೆಯನ್ನು ಮಾತ್ರ ಕೇಳಿ ಅವನಿಗೆ ಸ್ವಲ್ಪ ಉಸಿರು ಬಿಡುವಂತಾಯಿತು. ಅವನ ಶತ್ರುಗಳು ಅವನನ್ನು ಕಾರಾಗೃಹದಲ್ಲಿ ನೋಡಿದ್ದರೆ ಅವನ ಕಿರುನಗೆಯನ್ನು ಕಂಡಿದ್ದರೆ ಅವನೆಂತಹ ಪರಿಸ್ಥಿತಿಯನ್ನೂ ಎದುರಿಸಬಲ್ಲವನೆಂಬುದು ವಿಶದವಾಗುತ್ತಿತ್ತು.

ರಮಾನಾಥನು ತನ್ನ ಧೈರ್ಯಸಾಹಸಗಳಿಂದ ಸ್ವಲ್ಪ ಚೈತನ್ಯವನ್ನು ಹೊಂದಿದವನಾಗಿದ್ದನು. ಇನ್ನೆಷ್ಟುದಿನಗಳು ಕಾರಾಗೃಹದಲ್ಲಿರಬೇಕಾಗ ಬಹುದೆನ್ನುವುದನ್ನೂ ಯೋಚಿಸುತ್ತಿದ್ದನು. ಇದೇ ಸಮಯದಲ್ಲಿಯೇ ಹೊರಗಡೆ ಪುರಜನರು ದಿನನಾಥನೊಡನೆ ಚರ್ಚಿಸುತ್ತ ಗಟ್ಟಿಯಾಗಿ ಕೂಗಿ ಕೊಳ್ಳುತ್ತಿದ್ದರು. ಕಾರಾಗೃಹದ ಹೊರಗಡೆಮಾತ್ರ ಕೇಳಿಬರುತ್ತಿದ್ದ ಗರ್ಜನೆಗಳು, ಸಮುದ್ರದಲೆಗಳು ದಡವನ್ನು ಸೇರುವಂತೆ, ಈಗ ಕಾರಾ ಗೃಹದ ಅಂತರ್ಭಾಗದಲ್ಲಿಯೂ ಕೇಳಿಬರತೊಡಗಿದ್ದುವು. ಈ ಧ್ವನಿಗಳು ರಮಾನಾಥನಿಗೆ ಕೇಳಿ ಬರುತ್ತಿದ್ದರೂ ಅವುಗಳ ಕಾರಣವೇನೆಂದು ಅವನಾ ರನ್ನೂ ವಿಚಾರಿಸಲಿಲ್ಲ. ಕಂಬಿಗಳಿದ್ದ ಕಿಟಕಿಯಬಳಿ ಏನಾದರೂ ಕಾಣ ಬಹುದೆಂದು ಕುತೂಹಲಾವಿಷ್ಟನಾಗಿ ನೋಡಲೂ ಇಲ್ಲ. ಅವನಿಗೆ ತನ್ನ ದೇಹದನೋವಿನ ವಿಚಾರವಾಗಿ ಯೋಚನೆಯಾಗಿದ್ದಿತು. ದೇಹವನ್ನು ಆತ್ಮವು ತ್ಯಜಿಸಿದರೆ ನೋವು ತಾನಾಗಿಯೇ ನಿಂತು ಹೋಗುವುದೆಂದವನು ಯೋಚಿಸುತ್ತಿದ್ದನು.

ಅವನು ತನ್ನ ಅಣ್ಣನವಿಷಯವಾಗಿಯೂ ಯೋಚಿಸುತ್ತಿದ್ದನು. ಅದೇ ಸಮಯದಲ್ಲಿಯೇ ಅವನ ಅಣ್ಣನು ಕಾರಾಗೃಹವನ್ನು ಪ್ರವೇಶಿಸಿದನು. ರಮಾನಾಥನು ಪ್ರಫುಲ್ಲಿತವದನನಾಗಿ ತನ್ನ ಅಣ್ಣನಕಡೆಗೆ ತನ್ನಮುರಿದ ಕೈಗಳನ್ನು ನೀಡಿದನು.

ಉಮಾನಾಥನು ಪ್ರೀತಿಪುರಸ್ಸರವಾಗಿ ತಮ್ಮನ ಲಲಾಟವನ್ನು ಚುಂಬಿಸಿ ತಮ್ಮನ ಕೈಗಳನ್ನು ಮೆಲ್ಲನೆ ಚಾಪೆಯಮೇಲಿಟ್ಟು, "ರಮಾ ನಾಥ! ಬಹಳ ನೋವಾಗುತ್ತಿದೆಯೆ?" ಎಂದನು.

ರಮಾ :—ನಿನ್ನನ್ನು ನೋಡುತ್ತಲೇ ನನ್ನ ನೋವೆಲ್ಲಾ ಮಾಯ ವಾಯಿತಣ್ಣಾ!

ಉಮಾ :—ಅಯ್ಯೋ! ನಿನ್ನನ್ನೀ ಪರಿಸ್ಥಿತಿಯಲ್ಲಿ ನೋಡಿ ನನ್ನ ಹೃದಯವಿದ್ರಾವಕವಾಗುತ್ತಿದೆ.

ರಮಾ :—ನಾನೇನೋ ನನ್ನ ವಿಷಯಕ್ಕಿಂತ ನಿನ್ನವಿಷಯವಾಗಿಯೇ ಹೆಚ್ಚುಯೋಚಿಸುತ್ತಿದ್ದೆನು. ಅವರು ಹಿಂಸಿಸಿದಾಗಲೆಲ್ಲಾ ಒಂದು ಮಾತನ್ನೂ ಅವರಿಗೆ ವ್ಯತಿರಿಕ್ತವಾಗಿ ಹೇಳಲಿಲ್ಲ. "ಅಣ್ಣಾ" ಎಂದು

ಮಾತ್ರ ಹೇಳುತ್ತಿದ್ದೆನು. ಅದಿರಲಿ, ನೀನೀಗ ಇಲ್ಲಿಯೇ ಇರುವೆಯಷ್ಟೆ. ಹಳೆಯಕತೆಯೆಲ್ಲವನ್ನೂ ಮರೆತುಬಿಡೋಣ. ನೀನು ನನ್ನನ್ನು ಕರೆದು ಕೊಂಡುಹೋಗಲು ಬಂದೆಯಾ?

ಉಮಾ :—ಅಹುದು.

ರಮಾ :—ನನ್ನ ಗಾಯಗಳೆಲ್ಲವೂ ವಾಸಿಯಾಗಿಬಿಟ್ಟವೆ. ನಾನು ನಿಲ್ಲುವುದಕ್ಕೆ ಸ್ವಲ್ಪ ಸಹಾಯಮಾಡು. ನಡೆಯಬಲ್ಲೆನೆನ್ನುವುದನ್ನು ತೋರಿಸುತ್ತೇನೆ.

ಉಮಾ :—ನೀನು ಬಹಳ ದೂರ ನಡೆಯಬೇಕಾಗಿಲ್ಲ. ದಿನನಾಥನ ಸೈನಿಕರಿಂದ ನೂರುಗಜಗಳಷ್ಟು ದೂರದಲ್ಲಿಯೇ ನನ್ನ ಗಾಡಿಯಿದೆ.

ರಮಾ :—ದಿನನಾಥನ ಸೈನಿಕರೆ! ಅವರು ಇಲ್ಲೇನು ಮಾಡು ತ್ತಿದ್ದಾರೆ?

ಉಮಾನಾಥನು ದುಃಖಸೂಚಕವಾಗಿ ಸ್ವಲ್ಪ ನಕ್ಕು, "ನೀನು ಹೊರಟುಹೋಗುವುದನ್ನು ಜನರು ನೋಡಲು ಬರುವರೆಂದು ಮಂತ್ರಿಗಳು ಭಯಪಟ್ಟು ಹುಷಾರಿಸಿಂದಿದ್ದಾರೆ. ಸ್ವಲ್ಪಗಲಾಟೆಯಾಗಬಹುದೆಂದು ಭೀತಿಗೊಂಡಿದ್ದಾರೆ." ಎಂದನು.

ರಮಾ :—ಗಲಾಟೆಯೆ?

ಉಮಾ :—ಅಹುದು.

ರಮಾ :—ಓಹೋ! ಹಾಗಾದರೆ ನಾನೀಗತಾನೆ ಕೇಳಿದುದು ಅದೇ ಅಲ್ಲವೆ?—ಅಣ್ಣಾ! ಕಾರಾಗೃಹದಮುಂದೆ ಬಹಳ ಜನರಿದ್ದಾರೆಯೆ?"

"ಇದ್ದಾರೆ"

"ಹಾಗಾದರೆ—ಇಲ್ಲಿಗೆ ಬರುವುದಕ್ಕೆ ... .."

"ಏನು?"

"ಇಲ್ಲಿಗೆ ಬರುವುದಕ್ಕೆ ನಿನಗೆ ಅನುಮತಿಯನ್ನು ಕೊಟ್ಟದು ಹೇಗೆ?"

"ರಮಾನಾಥ! ನಾವು ಪುರಜನರ ಪ್ರೀತಿಗೆ ಪಾತ್ರರಲ್ಲವೆಂದು ನಿನಗೂ ತಿಳಿದಿದೆಯಷ್ಟೆ. ನಾನು ಸಣ್ಣಗಲ್ಲಿಗಳಲ್ಲಿಯೂ ಹೊರಟು ಇಲ್ಲಿಗೆ ಬರಬೇಕಾಯಿತು."

"ನೀನೂ ತಲೆತಪ್ಪಿಸಿಕೊಂಡು ತಿರುಗಿದೆಯಾ?"

"ನಾನು ಇಲ್ಲಿಗೆ ಬೇಗನೆ ಬರಬೇಕಾದುದು ಮುಖ್ಯವಾಗಿತ್ತು. ಸಮುದ್ರದಮೇಲೆ ಎದುರುಗಾಳಿಯು ಬೀಸಿದರೆ ಮಾಡುವಂತೆ ತಲೆ ತಗ್ಗಿಸಿಬಿಟ್ಟೆನು."

ಆ ಸಮಯದಲ್ಲಿ ಜನಗಳ ಕೂಗು ಅತ್ಯಧಿಕವಾಗಿತ್ತು. ದಿನನಾಥನು ಅವರೊಡನೆ ಚರ್ಚೆಮಾಡುತ್ತಿದ್ದನು.

ರಮಾನಾಥನು ಅಣ್ಣನನ್ನು ನೋಡಿ ಹೇಳತೊಡಗಿದನು :—"ನೀನು ಸಮುದ್ರಯಾನದಲ್ಲಿ ಅದ್ವಿತೀಯನಿರಬಹುದು. ಆದರೆ ನಿನ್ನ ತಮ್ಮನನ್ನು ಈ ಜನಸಾಗರದ ಮಧ್ಯೆ ಹೇಗೆ ಕರೆದುಕೊಂಡು ಹೋಗುವೆಯೋ ನಾನರಿಯೆ."

ಉಮಾ :—ದೈವಬಲವಿದ್ದರೆ ಎಲ್ಲವೂ ಆಗುವುದು. ಪ್ರಯತ್ನವನ್ನಾದರೂ ಮಾಡೋಣ. ಅದಿರಲಿ. ನಿನಗೊಂದು ವಿಷಯವನ್ನು ಹೇಳಬೇಕು.

ರಮಾ :—ಅದೇನಣ್ಣಾ ?

ಆಗ ಪುರಜನರ ಆರ್ಭಟವು ಕೇಳಿಬಂದಿತು. ಅದನ್ನು ಕೇಳಿ ರಮಾನಾಥನು, "ಓಹೋ! ಇದೇನು? ಪುರಜನರಿಗೆ ಇಷ್ಟುಕೋಪವೇಕೆ? ಯಾರಮೇಲೆ ಕೋಪವು ಹೆಚ್ಚಾಗಿದೆ.? ನಿನ್ನಮೇಲೋ ನನ್ನಮೇಲೋ?" ಎಂದನು.

ಉಮಾ :—ಇಬ್ಬರಮೇಲೂ ಒಂದೇ ಸಮನಾಗಿದೆ ರಮಾ!-ಗವರ್ನರನ ಕಡೆಯವರು ನನ್ನಮೇಲೆ ಮಾಡಿರುವ ಆರೋಪಣೆಗಳನ್ನು ಬಲ್ಲೆಯಾ? ನಾವು ವಿಲಾಸನಗರಿಯವರೊಡನೆ ಸಂಧಾನನಡೆಸಿರುವೆವೆನ್ನುತ್ತಿದ್ದಾರೆ.

"ಎಂತಹ ಮೂರ್ಖರು!"

"ನಿಜವಾಗಿ ಅದೇ ದೊಡ್ಡ ಆರೋಪಣೆಯಾಗಿದೆ. ರಮಾ!"

"ಸಂಧಾನವು ಫಲಿಸಿದ್ದರೆ ವಿಲಾಸನಗರಿಯವರು ನಮ್ಮನ್ನು ಸೋಲಿಸುವುದು ಸಾಧ್ಯವಾಗುತ್ತಿರಲಿಲ್ಲ. ಸುರನಗರಿಯು ಸುರಕ್ಷಿತವಾಗಿಯೂ ಸಂತೋಷದಿಂದಲೂ ಸಮಯವ್ಯಯಮಾಡಬಹುದಾಗಿತ್ತು."

"ರಮಾ! ಅದನ್ನು ಕೇಳುವವರಾರು?—ಅದಿರಲಿ. ನಾವು ವಿಲಾಸನಗರಿಯ ಮಂತ್ರಿಗೆ ಬರೆದ ಕಾಗದಗಳು ಸಿಕ್ಕಿಬಿದ್ದರೆ ನಮ್ಮಆಶೆಯು

ಪೂರ್ತಿಯಾಯಿತೆಂದೇ ತಿಳಿ. ಪ್ರಾಮಾಣಿಕರು ಅವನ್ನು ನೋಡಿದರೆ ನಮ್ಮ ದೇಶಪ್ರೇಮವು ಅಗಾಧವಾದುದೆಂದರಿಯುವರು. ನಮ್ಮ ದೇಶವು ಉನ್ನತಸ್ಥಿತಿಯಲ್ಲಿರುವುದಕ್ಕೂ ಸ್ವತಂತ್ರವಾಗಿರುವುದಕ್ಕೂ ನಾವೆಷ್ಟು ಪ್ರಯತ್ನಪಟ್ಟಿರುವೆವೆಂಬುದನ್ನರಿಯುವರು. ಆದರೆ ಆ ಪತ್ರಗಳು ಗವರ್ನರ ಕಡೆಯವರಿಗೇನಾದರೂ ಸಿಕ್ಕಿಬಿದ್ದರೆ ನಮಗೆ ಸರ್ವನಾಶವಾಗಿಬಿಡುವುದು. ನೀನು ರತ್ನಗಿರಿಯಿಂದ ಹೊರಟು ಇಲ್ಲಿಗೆ ಬರುವುದಕ್ಕೆಮುಂಚೆ ಆ ಕಾಗದಗಳನ್ನು ಸುಟ್ಟುಹಾಕಿದೆಯಾ?"

"ಅಣ್ಣ! ನೀನು ಪರದೇಶದ ಪ್ರಧಾನಿಯೊಡನೆ ನಡೆಸಿದ ಪತ್ರ ವ್ಯವಹಾರದಿಂದ ನಿನ್ನ ಪ್ರಾಮಾಣಿಕತೆಯೂ, ಪವಿತ್ರವಾದ ದೇಶ ಪ್ರೇಮವೂ, ಉನ್ನತಧ್ಯೇಯವೂ ಪ್ರಕಾಶಕ್ಕೆ ಬರುವುವು. ಆದುದರಿಂದ ಪತ್ರಗಳನ್ನು ಸುಡದೆ ಭದ್ರಪಡಿಸಿಟ್ಟಿರುವೆನು."

"ಹಾಗಾದರೆ ನಾವು ಸರ್ವನಾಶಹೊಂದಿದಂತೆಯೇಸರಿ. ಈ ಜನ್ಮದಲ್ಲಿ ನಾವು ಮತ್ತೆ ಯಾವ ಸೌಖ್ಯವನ್ನೂ ಪಡೆಯುವಂತಿಲ್ಲ."

"ಹಾಗಲ್ಲ ಅಣ್ಣ! ನಾವು ನಮ್ಮ ಪ್ರಾಣರಕ್ಷಣೆಮಾಡಿಕೊಂಡು ಮೊದಲಿನಂತೆ ಪುರಜನರಲ್ಲಿ ಪ್ರಖ್ಯಾತಿ ಪಡೆಯುವೆವು."

"ಪತ್ರಗಳನ್ನೇನು ಮಾಡಿರುವೆ?"

"ನನ್ನ ಪುತ್ರನಂತೆ ವರ್ತಿಸುತ್ತಿರುವ ಕುಮುದಚಂದ್ರನಬಳಿ ರತ್ನಗಿರಿಯಲ್ಲಿಯೇ ಇಟ್ಟಿದ್ದೇನೆ."

"ಅಯ್ಯೋ ಪಾಪ! ಕುಮುದಚಂದ್ರನೇನೋ ಬುದ್ಧಿವಂತನೇಸರಿ. ಆದರೆ, ಅವನು ಎಷ್ಟು ವಿದ್ಯಾವಂತನಾದರೂ ಯಾವಾಗಲೂ ಹೂವುಗಳ ವಿಷಯವಾಗಿಯೂ ಅವನ್ನು ನಿರ್ಮಿಸಿದ ದೇವರವಿಷಯವಾಗಿಯೂ ಯೋಚಿಸುತ್ತ ಕಾಲಕಳೆಯುತ್ತಾನೆ.—ಅವನ ವಶಕ್ಕೆ ಈ ರಹಸ್ಯ ಪತ್ರಗಳನ್ನು ಕೊಟ್ಟಿರುವೆಯಾ? ಪಾಪ! ಅವನಿಗೆ ಸರ್ವನಾಶವಾಗುವುದು!"

"ಅವನ ಸರ್ವನಾಶವೆ?"

"ಅಹುದು. ಅವನು ದೃಢಮನಸ್ಕನಾದರೆ ನಮ್ಮ ಸ್ನೇಹದವಿಷಯವಾಗಿ ಧೈರ್ಯವಾಗಿ ಮಾತನಾಡಿ ನಮ್ಮ ಕಷ್ಟಗಳಲ್ಲಿ ಸಹಾನುಭೂತಿ ತೋರಿಬಿಡುವನು. ಆಗ ಜನರು ಅವನನ್ನು ಹಿಡಿದು ಶೋಧಿಸಿ ಪತ್ರಗ

ಳನ್ನು ಕಂಡು ಹಿಡಿದುಬಿಡುವರು. ಅವನು ಅಂಜುಬುರುಕನಾದರೆ ಜನಗಳು ಪ್ರಶ್ನೆಮಾಡಿದಾಗ ಪತ್ರಗಳ ವಿಷಯವನ್ನು ಹೇಳಿಬಿಡುವನು-ಹೇಗಾದರೂ ಅವನ ಸರ್ವನಾಶವು ಸನ್ನಿಹಿತವಾದಂತೆಯೇಸರಿ. ಆದುದರಿಂದ ನಡೆ ಬೇಗಹೋಗೋಣ ಅವನನ್ನುಳಿಸಲು ಇನ್ನೂ ಸಮಯವಿರಬಹುದು."

ರಮಾನಾಥನು ಅತಿಕಷ್ಟದಿಂದ ಏಳುತ್ತ ಅಣ್ಣನ ಕೈ ಹಿಡಿದುಕೊಂಡು ಹೇಳತೊಡಗಿದನು —"ಉಮಾನಾಥ! ನನ್ನ ಸಾಕುಮಗನು ದೃಢ ಮನಸ್ಕನೂ ಅಲ್ಲ. ಅಂಜುಬುರುಕನೂ ಅಲ್ಲ ಅವನನ್ನು ನಾನರಿಯೆನೆ? ಮುಖ್ಯವಾದ ವಿಷಯವೇನೆಂದರೆ ಅವನೆಂದಿಗೂ ರಹಸ್ಯವನ್ನು ಬಿಟ್ಟು ಕೊಡಲಾರನು—ಏಕೆಂದರೆ ಪತ್ರಗಳಲ್ಲಿರುವ ರಹಸ್ಯವೇನೆಂಬುದನ್ನು ಅವನೇ ಅರಿಯನು"

ಉಮಾನಾಥನು ವಿಸ್ಮಿತನಾಗಿ ನೋಡತೊಡಗಿದನು ರಮಾನಾಥನು ಮುಂದರಿಯುತ್ತ ಪುನಃ ಹೇಳತೊಡಗಿದನು :—"ಅಣ್ಣಾ! ನಾನು ನಿನ್ನಂತಹ ರಾಜಕೀಯುವೇತ್ತನ ಶಿಷ್ಯನಲ್ಲವೆ? ನಿಜವಾಗಿ ಹೇಳುತ್ತೇನೆ ಕೇಳು ಕುಮುದಚಂದ್ರನಿಗೆ ತನ್ನ ಬಳಿ ಇರುವ ಕಾಗದಗಳ ಮಹತ್ವವಾಗಲಿ ಪ್ರಾಧಾನ್ಯತ್ವವಾಗಲಿ ಸ್ವಲ್ಪವೂ ತಿಳಿದಿಲ್ಲ"

"ಹಾಗಾದರೆ ಬೇಗನೆ ಅವನಿಗೆ ಸಮಾಚಾರವನ್ನು ತಿಳಿಸು ಮೊದಲು ಆ ಕಾಗದಗಳ ಕಟ್ಟನ್ನು ಸುಟ್ಟುಬಿಡಬೇಕೆಂದು ಹೇಳಿ ಕಳುಹಿಸು"

"ಯಾರೊಡನೆ ಹೇಳಿ ಕಳುಹಲಿ?

"ನನ್ನ ಸೇವಕ—ರಾಮವರ್ಮನೊಡನೆ ಹೇಳಿ ಕಳುಹಿಸೋಣ. ಅವನು ನಮ್ಮೊಡನೆ ಬರಲು ಕುಮರಿಯೊಡನೆ ಬಂದಿದ್ದಾನೆ. ಅವನು ಕಾರಾಗಾರದಲ್ಲಿ ಮೆಟ್ಟಿಲುಗಳ ಬಳಿ ಕಾದಿದ್ದಾನೆ. ಅವನು ನಮ್ಮೊಡನೆ ಈಗಲೇ ಬರಲಾಗುವುದಿಲ್ಲ. ಮೊದಲು ರತ್ನಗಿರಿಗೆಹೋಗಲಿ"

"ಅಣ್ಣಾ! ಚೆನ್ನಾಗಿ ಯೋಚಿಸು. ಅವುಗಳನ್ನು ಸುಟ್ಟುಬಿಡುವುದೇ ಮೇಲೇನು?"

"ನಾವು ಬದುಕಿದ್ದರೆ ನಮ್ಮ ಗೌರವವನ್ನು ಕಾದುಕೊಳ್ಳಬಹುದು.

ನಾವು ಸತ್ತರೆ ನಮ್ಮ ಪರವಾಗಿ ವಾದಿಸುವವರಾರು? ನಮ್ಮ ಮನೋಗತ ವಿಚಾರಗಳನ್ನು ಚೆನ್ನಾಗಿ ಅರಿತಿರುವವರಾರಿರುವರು?"

"ಹಾಗಾದರೆ, ಆ ಪತ್ರಗಳು ಸಿಕ್ಕಿಬಿಟ್ಟರೆ ನಮ್ಮನ್ನು ಕೊಲ್ಲುವುದೇ ನಿಶ್ಚಯವೇ?"

ಉಮಾನಾಥನು ಉತ್ತರಕೊಡದೆ ಜನಗಳ ಕಡೆಯಿಂದ ಬರುತ್ತಿದ್ದ ಕೂಗುಗಳನ್ನು ಕೇಳುತ್ತ್ತೆನಿಂತು ಪುರಜನರಿದ್ದ ದಿಕ್ಕಿಗೆ ಕೈ ತೋರಿದನು. ರಮಾನಾಥನು, "ಅವರು ಕೂಗುತ್ತಿರುವುದು ಕೇಳಿ ಬರುತ್ತಿದೆ. ಆದರೆ ಮಾತುಗಳು ಚೆನ್ನಾಗಿ ಅರ್ಥವಾಗುತ್ತಿಲ್ಲ. ಅವರು ಹೇಳುತ್ತಿರುವುದೇನು?" ಎಂದನು.

ಉಮಾನಾಥನು ಕಾರಾಗೃಹದಲ್ಲಿದ್ದ ಕಿಟಕಿಯನ್ನು ತೆರೆದನು. ಜನಗಳು ಕೂಗುತ್ತಿದ್ದುದು ಆಗ ಸ್ಪಷ್ಟವಾಗಿ ಕೇಳಿಬಂದಿತು:—"ದ್ರೋಹಿಗಳಿಗೆ ನಾಶವುಂಟಾಗಲಿ!" ಉಮಾನಾಥನು "ಈಗ ಕೇಳಿಸಿತೆ? ಎಂದನು.

ರಮಾ .—ದ್ರೋಹಿಗಳೆಂದರೆ ನಾವೇನು?

ಉಮಾ :—ಅಹುದು, ನಾವೇ

ರಮಾ .—ರಾಮವರ್ಮನೆಲ್ಲಿದ್ದಾನೆ?

ಉಮಾ :—ನಿನ್ನ ಕಾರಾಗೃಹದ ಬಾಗಿಲಬಳಿಯೇ ಇರಬೇಕು.

ರಮಾ :—ಅವನನ್ನು ಕರೆ

ಉಮಾನಾಥನು ಬಾಗಿಲನ್ನು ತೆರೆದನು. ಪ್ರಭುಭಕ್ತಿಯುಳ್ಳಾಸೇವಕನು ಬಾಗಿಲಬಳಿಯೇ ನಿಂತಿದ್ದನು. ಉಮಾನಾಥನು ಅವನನ್ನು ಒಳಕ್ಕೆ ಬರಹೇಳಿ, ರಮಾನಾಥನು ಹೇಳುವುದನ್ನು ಚೆನ್ನಾಗಿ ಕೇಳೆಂದು ಹೇಳಿದನು.

ರಮಾ :—ಬಾಯಲ್ಲಿ ಹೇಳಿಕಳುಹಿಸಿದರೆ ಉಪಯೋಗವಾಗದು. ನಾನು ಬರೆಯಬೇಕಾಗುವುದು.

ಉಮಾ :—ಅದೇಕೆ?

ರಮಾ :—ಕುಮುದಚಂದ್ರನಿಗೆ ಸರಿಯಾದ ಆಜ್ಞೆಯು ಹೋಗದೆ ಇದ್ದರೆ ಅವನು ಪತ್ರಗಳನ್ನು ಕೊಡುವುದೂ ಇಲ್ಲ, ಸುಡುವುದೂ ಇಲ್ಲ.

ಉಮಾ :—ಆದರೆ ನಿನ್ನ ಕೈಗಳಿರುವ ದುಸ್ಥಿತಿಯಲ್ಲಿ ಹೇಗೆ ಬರೆಯುವೆ ರಮಾ!

ರಮಾ :—ಲೇಖಣಿಯೂ ಮಸಿಯೂ ಇದ್ದರೆ ಹೇಳು. ಬರೆಯುವುದನ್ನು ನೀನೇ ನೋಡುವೆ.

"ಇಲ್ಲೊಂದು ಸೀಸದಕಡ್ಡಿಯೇನೋ ಇದೆ."

"ನಿನ್ನ ಬಳಿ ಕಾಗದವಿದೆಯೆ? ನನ್ನಲ್ಲೇನೂ ಉಳಿದಿಲ್ಲ"

"ಈ ಗೀತಾಪುಸ್ತಕವನ್ನು ತೆಗೆದುಕೊ ಮೊದಲನೆಯ ಪುಟವನ್ನು ಹರಿದುಹಾಕು."

"ಅದೇ ಸಾಕು"

"ಆದರೆ ನಿನ್ನ ಬರವಣಿಗೆಯು ಸರಿಹೋಗುವುದಿಲ್ಲ"

"ನೀನೇ ನೋಡುವೆ. ನಮ್ಮ ಕಾರಾಗೃಹದವರು ನನ್ನ ಬೆರಳುಗಳನ್ನು ಪುಡಿಮಾಡಿರುವುದು ನಿಜ. ಆದರೆ ಅತ್ಯಾವಶ್ಯಕವಾದೀಮಾತುಗಳನ್ನು ಬರೆಯುವಾಗ ನನ್ನ ಕೈ ಸ್ವಲ್ಪವೂ ನಡುಗುವುದಿಲ್ಲ ನೋಡು."

ರಮಾನಾಥನು ಸೀಸದಕಡ್ಡಿಯಿಂದ ನಿಜವಾಗಿ ಬರೆಯತೊಡಗಿದನು. ಬರೆಯುವಾಗ ಅವನ ನೂತನ ಗಾಯಗಳಿಂದ ರಕ್ತ ಬಿಂದುಗಳು ಬ್ಯಾಂಡೇಜುಗಳನ್ನು ಭೇದಿಸಿಕೊಂಡು ಹೊರಟುವು. ಉಮಾನಾಥನ ಮೈಯೆಲ್ಲವೂ ಬೆವರಿನಿಂದ ತೊಯ್ದುಹೋಗುವಂತಾಯಿತು

ರಮಾನಾಥನು ಈ ರೀತಿಯಾಗಿ ಅತಿಕಷ್ಟದಿಂದ ಬರೆದು ಮುಗಿಸಿದನು –

"ನನ್ನ ಪ್ರೀತಿಪಾತ್ರ ಕುಮುದಚಂದ್ರ!

ನಿನ್ನಬಳಿ ನಾ ನಿಟ್ಟಿರುವ ಕಾಗದಗಳ ಕಟ್ಟನ್ನು ಸುಟ್ಟುಹಾಕು ಆ ಕಟ್ಟನ್ನು ನೋಡದೇಅದನ್ನು ಬಿಚ್ಚದೆ ಸುಟ್ಟುಬಿಡು. ಅದರಲ್ಲಿರುವ ವಿಷಯವು ನಿನಗೆ ಎಂದಿಗೂ ತಿಳಿಯದೇ ಇರಲೋಸುಗ ನೀನು ಹಾಗೆ ಮಾಡಬೇಕು. ಆ ರಹಸ್ಯಕಾಗದಗಳು ಯಾರಬಳಿ ಇರುವುವೋ ಅವರಿಗೆ ಮರಣವುಂಟಾಗುವುದು ಖಂಡಿತ. ಅವುಗಳನ್ನು ಸುಟ್ಟು ಬೂದಿಮಾಡು. ಹಾಗೆಮಾಡಿವರೆ ನೀನುಉಮಾನಾಥ ರಮಾನಾಥರಿಬ್ಬರನ್ನೂ ಉಳಿಸಿದಂತಾಗುವುದು ನಿನಗೆ ದೇವರು ಒಳ್ಳೆಯದನ್ನು ಮಾಡಲಿ. ಹೋಗಿಬರುತ್ತೇನೆ.

20ನೇ ಆಗಸ್ಟ (1672) ರಮಾನಾಥ"

ಉಮಾನಾಥನು ಅಶ್ರುವದನನಾಗಿ ಪತ್ರದಮೇಲೆ ಬಿದ್ದ ರಕ್ತಬಿಂದುವೊಂದನ್ನು ಒರೆಸಿ, ಪತ್ರವನ್ನು ತನ್ನ ಸೇವಕನ ಕೈಗೆ ಕೊಟ್ಟು, ಅವನನ್ನು

ಕಳುಹಿಸಿದನು. ರಮಾನಾಥನಿಗೆ ಬಹಳ ನೋವುಂಟಾಗಿ ಅವನು ಮೂರ್ಛಿತನಾಗುವುದರಲ್ಲಿದ್ದನು. ಉಮಾನಾಥನು ಅವನನ್ನು ಸಂತೈಸುತ್ತ "ರಾಮವರ್ಮನು ಶಿಳ್ಳೆಯನ್ನೂದುತ್ತಲೇ ಅವನು ಜನರಿಂದ ಪಾರಾದನೆಂದು ಅರ್ಥ. ಅದರ ಧ್ವನಿಯನ್ನು ಕೇಳಿದ ಬಳಿಕ ನಾವು ಹೊರಟು ಹೋಗೋಣ" ಎಂದನು

ಐದು ನಿಮಿಷಗಳು ಕಳೆಯುವಷ್ಟರಲ್ಲಿ ಜನಗಳ ಕೂಗುಗಳನ್ನು ಭೇದಿಸಿಕೊಂಡು ಉಚ್ಚಸ್ವರದಲ್ಲಿ ಶಿಳ್ಳೆಯ ಧ್ವನಿಯೊಂದು ಕೇಳಿಸಿತು. ಉಮಾನಾಥನು ಕೃತಜ್ಞತೆಯಿಂದ ದೇವದೇವನಿಗೆ ವಂದಿಸಿ, "ರಮಾ! ನಡೆ ಈಗ ಹೋಗೋಣ" ಎಂದನು.

# ತೃತೀಯ ಪರಿಚ್ಛೇದ

---

## ಉಮಾನಾಥನ ಶಿಷ್ಯ.

ಜನಗಳ ಕೂಗುಗಳನ್ನು ಕೇಳಿ ರಮಾನಾಥ ಉಮಾನಾಥರು ಬೇಗ ಬೇಗನೆ ಹೊರಟುಹೋಗುತ್ತಿದ್ದ ಸಮಯದಲ್ಲಿ ಪುರಜನರಲ್ಲಿ ಪ್ರಮುಖರು ಕೆಲವರು ಪುರಭವನದಕಡೆಗೆ ಹೊರಟಿದ್ದರು ದಿನನಾಥನ ಸೈನಿಕರನ್ನು ಕಳುಹಿಸಿ ಬಿಡಬೇಕೆಂದು ಅವರು ಪ್ರಯತ್ನಮಾಡಿ, ಮಂತ್ರಿಗಳ ಆಜ್ಞೆಯನ್ನು ಪಡೆದುಬರಲು ಪುರಭವನಕ್ಕೆ ಹೊರಟಿದ್ದರು.

ಕಾರಾಗೃಹದಿಂದ ಪುರಭವನಕ್ಕೆ ಬಹಳದೂರವಿರಲಿಲ್ಲ. ಪೂರ್ವ ಪರಿಚ್ಛೇದಗಳಲ್ಲುಕ್ತವಾದ ಪುರಜನವೃಶ್ಯವನ್ನು ಮೊದಲಿನಿಂದಲೂ ಅಪರಿಚಿತನೊಬ್ಬನು ಬಹಳ ಉತ್ಸುಕತೆಯಿಂದ ನೋಡುತ್ತಿದ್ದನು. ಅವನೂ ಪುರಜನರನ್ನೀಗ ಹಿಂಬಾಲಿಸಿ ಹೊರಟನು. ಪಕೃತ ವಿಷಯದ ಪರಿಣಾಮವೇನಾಗುವುದೆಂಬುದನ್ನರಿಯಲು ಅವನಿಗೂ ಬಹಳ ಕುತೂಹಲವಿದ್ದಿತು.

ಅಪರಿಚಿತನಿಗೆ ಸುಮಾರು ಇಪ್ಪತ್ತೆರಡು ವರ್ಷಗಳಿರಬಹುದು. ಆ ಯುವಕನನ್ನು ನೋಡಿದರೆ ಆರೋಗ್ಯಧೃಢಕಾಯನೆಂದಾಗಲಿ ಅತಿಪರಾಕ್ರಮಿಯೆಂದಾಗಲಿ ಹೇಳುವಂತಿರಲಿಲ್ಲ. ಅವನ ಗುರುತು ಯಾರಿಗೂ

ಸಿಕ್ಕದಿರಲೆಂದು ಬಹಳ ಬೆಲೆ ಬಾಳುತ್ತಿದ್ದ ಕರವಸ್ತ್ರವೊಂದನ್ನವನು ತನ್ನ ಮುಖಕ್ಕೆ ಅಡ್ಡಲಾಗಿಟ್ಟುಕೊಂಡಿದ್ದನು. ಆ ವಸ್ತ್ರದಿಂದವನು ತನ್ನ ಹಣೆಯನ್ನೂ ತುಟಿಗಳನ್ನೂ ಬಾರಿಬಾರಿಗೂ ಒರೆಸಿಕೊಳ್ಳುತ್ತಿದ್ದನು.

ಯುವಕನಿಗೆ ತೀಕ್ಷ್ಣವಾದ ಕಣ್ಣುಗಳಿದ್ದುವು, ಉದ್ದನಾದ ಎಳ ಸಾದ ಮೂಗು ಮತ್ತು ಚಿಕ್ಕದಾದ ಅಂದವಾದ ಬಾಯಿ ಇದ್ದುವು. ಅವನ ದೇಹವು ಕಾಹಿಲೆಯಿಂದ ಕೂಡಿದಂತೆ ಸಣ್ಣಾಗಿದ್ದಿತು. ಮುಖದಲ್ಲಿ ಕಾಂತಿ ಯಿರಲಿಲ್ಲ ಅವನು ಮುಖವನ್ನು ಮುಚ್ಚಿಕೊಂಡು ತಿರುಗುತ್ತಿದ್ದುದನ್ನು ಯಾರಾದರೂ ಕಂಡಿದ್ದರೆ, ತನ್ನ ಸೇವಕರನ್ನು ಸಂದೇಹದಿಂದ ನೋಡುವ ಯಜಮಾನನೆಂದೋ ಪರಿಚಯವನ್ನು ಕೊಡಲಾರದ ಕಳ್ಳನೆಂದೋ ಭಾವಿಸುತ್ತಿದ್ದರು ಅವನ ಚರ್ಯೆಯು ಅಷ್ಟು ರಹಸ್ಯವಾಗಿದ್ದಿತು.

ಅವನು ಸಾಮಾನ್ಯವಾದ ಉಡುಪನ್ನುಟ್ಟಿದ್ದನು ಅವನ ಬಳಿ ಆಯುಧವಾವುದೂ ಕಂಡುಬರುತ್ತಿರಲಿಲ್ಲ ಅವನ ತೋಳು ಸಣ್ಣಗೆ ಬೆಳ್ಳಗಿದ್ದಿತು ಅವನ ಕೈಗಳೂ ಬಿಳ್ಳಗಿದ್ದುವು. ಅವುಗಳನ್ನು ನೋಡಿದರೆ ಅವನೆಂದಿಗೂ ಕಷ್ಟಪಟ್ಟು ಕೆಲಸಮಾಡಿದ್ದಂತೆ ತೋರಿಬರುತ್ತಿರಲಿಲ್ಲ. ಅವನ ಪಕ್ಕದಲ್ಲಿಯೇ ಅಧಿಕಾರಿಯೊಬ್ಬನು ಕತ್ತಿಯೊಂದನ್ನು ಹಿರಿದು ನಿಂತಿದ್ದನು ಆ ಅಧಿಕಾರಿಯ ಭುಜದಮೇಲೆ ಅವನು ಒರಗಿಕೊಂಡು ನಿಂತಿದ್ದನು ಸ್ವಲ್ಪ ಹೊತ್ತಿನಲ್ಲಿಯೇ ಅವರಿಬ್ಬರೂ ಪುರಜನರು ಹೋಗಿದ್ದ ಕಡೆಗೇ ಹೊರಟರು

ಪುರಭವನಕ್ಕಿಂತ ಸ್ವಲ್ಪ ದೂರದಲ್ಲಿಯೇ ಅಪರಿಚಿತನು ಕಿಟಕಿಯ ಬಾಗಿಲೊಂದರಬಳಿ ತನ್ನೊಡನಿದ್ದವನನ್ನೂ ನಿಲ್ಲಿಸಿಕೊಂಡು ಪುರಭವನದ ಬಾಗಿಲನ್ನು ನೋಡತೊಡಗಿದನು.

ಪುರಜನರ ವಿಕಟಧ್ವನಿಗಳನ್ನು ಕೇಳಿ ಪುರಭವನದಿಂದ ಪುರುಷ ನೊಬ್ಬನು ಹೊರಟು ಬಂದು ಮಾತನಾಡತೊಡಗಿದನು. ಅವನನ್ನು ನೋಡಿ ನಮ್ಮ ಅಪರಿಚಿತ ಯುವಕನು, "ಅವನಾರು?" ಎಂದು ತನ್ನೊಡ ನಿದ್ದ ಅಧಿಕಾರಿಯನ್ನು ಕೇಳಿದನು

ಅಧಿಕಾರಿ :—ಅವನು ಮಂತ್ರಿ ಶ್ರೀಶಚಂದ್ರ.

ಅಪರಿಚಿತ :—ಅವನೆಂತಹವನು ?

ಅಧಿಕಾರಿ :—ಅವನು ಪ್ರಾಮಾಣಿಕ, ಮಹಾಪ್ರಭುಗಳೆ!—ಅಂತೂ ಅದೇ ನನ್ನ ನಂಬಿಕೆ.

ಈ ಪ್ರಶಂಸೆಯನ್ನು ಕೇಳಿ ಅಪರಿಚಿತನಿಗೆ ಆಶಾಭಂಗವೂ ಅಸಮಾಧಾನವೂ ಏಕಕಾಲದಲ್ಲಿ ತೋರಿಬಂದುವು. ಅಧಿಕಾರಿಯು ಅದನ್ನು ಕಂಡು ಅಚ್ಚರಿಗೊಂಡನಾದರೂ ಅಂತಹ ಅಸಮಾಧಾನವನ್ನುಂಟುಮಾಡಿದುದನ್ನು ಅಳಿಸಲೋಸುಗ, "ಮಹಾಪ್ರಭುಗಳೆ! ಜನಗಳು ಅವನನ್ನು ಪ್ರಾಮಾಣಿಕನೆನ್ನುತ್ತಾರೆ. ನಾನಾಪಾಗಲೇ ಆಗಲಿ ಅವನನ್ನು ನೋಡಿ ಸ್ವಂತವಾಗಿ ಪರಿಚಯಮಾಡಿಕೊಂಡಿಲ್ಲ" ಎಂದನು

ಅಪರಿಚಿತನು, "ಇರಲಿ ಕಾದುನೋಡಿದರೆ ಎಲ್ಲವೂ ವಿಶದವಾಗುವುದು" ಎಂದನು.

ಅಧಿಕಾರಿಯು ಸಮ್ಮತಿಸೂಚಕವಾಗಿ ತಲೆತಗ್ಗಿಸಿ ಮೌನವಾಗಿ ನಿಂತನು

ಅಪರಿಚಿತನು ಪುನಃ ಹೇಳತೊಡಗಿದನು —"ಈ ಶ್ರೀಶಚಂದ್ರನು ಪ್ರಾಮಾಣಿಕನಾದರೆ ಪುರಜನರು ಕೇಳುವ ಪ್ರಶ್ನೆಗೆ ವಿಸ್ಮಯಕರವಾದ ಉತ್ತರವನ್ನು ಕೊಡುವನು"

ಅವನ ಕೈಗಳು ನರಗಳ ದೌರ್ಬಲ್ಯವನ್ನೂ ಅತೀವ ಉತ್ಸುಕತೆಯನ್ನೂ ವ್ಯಕ್ತಪಡಿಸುವಂತೆ ನಡುಗುತ್ತಿದ್ದುವು

ಈ ವೇಳೆಗೆ ಪುರಜನರು ಶ್ರೀಶಚಂದ್ರನನ್ನು ನೋಡಿ ಇತರ ಮಂತ್ರಿಗಳೆಲ್ಲೆಂದು ಪ್ರಶ್ನೆಮಾಡುತ್ತಿದ್ದರು. ಅವನು ಉತ್ತರವಾಗಿ, "ನಾನು ಹರಚಂದ್ರನೊಡನೆ ಇಲ್ಲಿದ್ದೇನೆ ನನ್ನ ಜವಾಬ್ದಾರಿಯಮೇಲೆ ಯಾವ ಕೆಲಸವನ್ನೂ ನಾನು ಮಾಡಲಾರೆ" ಎನ್ನುತ್ತಿದ್ದನು.

ಸಹಸ್ರ ಕಂಠಗಳು ಏಕಕಾಲದಲ್ಲಿ ಕೂಗಿದುವು :—"ಆಜ್ಞೆಯಾಗಲಿ! ಮೊದಲು ಆಜ್ಞೆಯ ಚೀಟಿಯನ್ನು ಕೊಡೋಣಾಗಲಿ!"

ಶ್ರೀಶಚಂದ್ರನು ಪುನಃ ಮಾತನಾಡಲೆತ್ನಿಸಿದನು. ಆದರೆ ಅವನ ಮಾತುಗಳಾರಿಗೂ ಕೇಳಿಬರುತ್ತಿರಲಿಲ್ಲ. ಅವನು ಕೈಗಳನ್ನೂ ತುಟಿಗಳನ್ನೂ ಆಡಿಸುವುದು ಮಾತ್ರ ಕಂಡುಬರುತ್ತಿತ್ತು ಅವನು ಕಡೆಗೆ ಉಪಾಯಾಂತರ ಕಾಣದೆ ಒಳಗೆ ಹೋಗಿ ಮಂತ್ರಿ ಹರಚಂದ್ರನನ್ನು ಕರೆದನು

ಸ್ವಲ್ಪಹೊತ್ತಿನಲ್ಲಿಯೇ ಹರಚಂದ್ರನು ಬಂದು ಬಾಗಿಲಬಳಿ ನಿಂತನು. ಪುರಜನರು ಮೊದಲಿಗಿಂತಲೂ ಹೆಚ್ಚಾಗಿ ಕೂಗಿಕೊಳ್ಳತೊಡಗಿದರು. ಆದರೂ ಹರಚಂದ್ರನು ಉಪನ್ಯಾಸಕ್ಕಾರಂಭಿಸಿದನು. ಜನರು ಒಳಕ್ಕೆ ನುಗ್ಗುವುದರಲ್ಲಿ ಹೆಚ್ಚು ಆಸಕ್ತರಾಗಿದ್ದುದರಿಂದ ಉಪನ್ಯಾಸಶ್ರವಣವನ್ನು ಮಾಡಲಾರದೆ ಹೋದರು. ಬಾಗಿಲಬಳಿ ಇದ್ದ ಸೈನಿಕರು ಜನರು ನುಗ್ಗುವುದನ್ನು ತಡೆಯಲಾರದವರಾಗಿ ಅವರನ್ನು ಒಳಕ್ಕೆ ಬಿಟ್ಟರು.

ಅಪರಿಚಿತನು ಅಧಿಕಾರಿಯನ್ನು ನೋಡಿ, "ಸರದಾರರವರೆ! ಎಲ್ಲವನ್ನೂ ಪುರಭವನದೊಳಗೆ ಚರ್ಚಿಸುವಂತಿದೆ. ಬರೋಣವಾಗಲಿ, ನಾವೂ ಎಲ್ಲವನ್ನೂ ಕೇಳೋಣ" ಎಂದನು.

ಅಧಿಕಾರಿ .—ಬೇಡ ಮಹಾಪ್ರಭುಗಳೆ! ಹುಷಾರಾಗಿರಿ.

ಅಪರಿಚಿತ :—ಹುಷಾರಾಗಿರುವುದೇನು?

ಅಧಿಕಾರಿ .—ಈ ಮಂತ್ರಿಗಳು ನಿಮ್ಮನ್ನು ಗುರುತಿಸುವರು

ಅಪರಿಚಿತ —ನಿಜ ಇದೆಲ್ಲಕ್ಕೂ ನಾನೇ ಉತ್ತೇಜನಕೊಟ್ಟಿರುವನೆಂದು ಎಲ್ಲರೂ ತಿಳಿದುಕೊಳ್ಳುವರು. ನೀನು ಹೇಳಿದುದೇ ಸರಿ. ಇಲ್ಲಿಂದಲೇ ನೋಡುತ್ತಿರೋಣ ಆಜ್ಞೆಯೊಡನೆ ಜನರು ಬರುವರೆ ಇಲ್ಲವೆ ತಿಳಿಯುವುದು. ಶ್ರೀಶಚಂದ್ರನಿಗೆ ಪ್ರಾಮಾಣಿಕತೆಯೇ ಹೆಚ್ಚಾಗಿರುವುದೋ ಧೈರ್ಯವೇ ಹೆಚ್ಚಾಗಿರುವುದೋ ತಿಳಿಯಲನುಕೂಲವಾಗುವುದು.

ಅಧಿಕಾರಿಯು ಆಶ್ಚರ್ಯಚಕಿತನಾಗಿ, "ಮಹಾಪ್ರಭು! ದಿನನಾಥನ ಸೈನಿಕವಳವು ಹೊರಟುಹೋಗುವಂತೆ ಮಂತ್ರಿಯ ಆಜ್ಞೆಯಾಗುವುದೆಂದು ತಾವು ಭಾವಿಸುವಿರೇನು?'' ಎಂದನು

ಅಪರಿಚಿತ :—ಅದೇಕೆ ಭಾವಿಸಬಾರದು?

ಅಧಿಕಾರಿ :—ಏಕೆಂದರೆ ಸೈನಿಕರು ಹೊರಟುಹೋದರೆ ಉಮಾನಾಥ ರಮಾನಾಥರಿಗೆ ಮರಣದಂಡನೆಯಾಗಿಬಿಟ್ಟಂತಾಗುವುದು.

ಅಪರಿಚಿತನು ಕಾತರಭಾವವನ್ನೇನೂ ಪ್ರಕಟಿಸದೆ, "ನೋಡೋಣ, ಮಾನವನ ಹೃದಯದಲ್ಲಾವಯೋಚನೆಯಿರುವುದೆನ್ನುವುದನ್ನು ಪರಮಾತ್ಮನೊಬ್ಬನೇ ಬಲ್ಲನು" ಎಂದನು.

ಅಧಿಕಾರಿಯು ಆಶ್ಚರ್ಯದಿಂದ ಆ ಅಪರಿಚಿತನನ್ನು ಕಡೆಗಣ್ಣಿ

ನಿಂದಲೇ ನೋಡಿ ಶುಷ್ಕವದನನಾದನು. ಅವನು ಪ್ರಾಮಾಣಿಕನೂ ಧೈರ್ಯಶಾಲಿಯೂ ಆದ ಅಧಿಕಾರಿಯಾಗಿದ್ದನು.

ಪೌರಭವನದಲ್ಲಿ ಅನೇಕರು ಓಡಾಡುತ್ತಿದ್ದಂತೆ ಬೋಧೆಯಾಗುತ್ತಿದ್ದಿತು. ಗಲಾಟೆಯೂ ಬಹಳವಾಗಿದ್ದಿತು. ಪುರಭವನವು ಪುರಜನರಿಂದ ತುಂಬಿಹೋಗಿದ್ದಿತು. ತಟ್ಟನೆ ಪುರಭವನದಲ್ಲಾಗುತ್ತಿದ್ದ ಶಬ್ದವು ನಿಂತುಹೋಯಿತು. ಉತ್ತರಕ್ಷಣವೇ ಇನ್ನೂ ಹೆಚ್ಚಾಗಿ ಶಬ್ದವಾಗತೊಡಗಿತು. ಪುರಭವನವೆಲ್ಲವೂ ಗಲಾಟೆಯಿಂದ ನಡುಗಿಯೋಯಿತು. ಒಂದೆರಡು ನಿಮಿಷಗಳಲ್ಲಿಯೇ ಪುರಜನರು ಪುರಭವನದಿಂದ ಹೊರಟು ಬರಲಾರಂಭಿಸಿದರು. ಮುಂದೆ ಬಂದ ಗುಂಪಿನ ಮುಖ್ಯಸ್ಥನೊಬ್ಬನು ಸಂತೋಷಾತಿಶಯದಿಂದ ಬರತೊಡಗಿದ್ದನು. ಅವನು ಪತ್ರವೊಂದನ್ನು ಮೇಲೆತ್ತಿ ತೋರಿಸುತ್ತೆ, "ಸಿಕ್ಕಿತು! ಸಿಕ್ಕಿತು!" ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತಿದ್ದನು ಅವನೇ ಸರ್ಜನ್ ಸುರನಾಥನಾಗಿದ್ದನು.

ಅಧಿಕಾರಿಯು ಆಶ್ಚರ್ಯಾನ್ವಿತನಾಗಿ, "ಅವರಿಗೆ ಅಪ್ಪಣೆಯ ಚೀಟಿಯು ಸಿಕ್ಕಿದಂತಿದೆ" ಎಂದನು.

ಅಪರಿಚಿತನು, "ಹಾಗಾದರೆ ಸರಿ. ಶ್ರೀಶಚಂದ್ರನ ವಿಷಯವು ಈಗ ವಿಶದವಾಯಿತೆ? ಅವನಿಗೆ ಪ್ರಾಮಾಣಿಕತೆಯೂ ಇಲ್ಲ ಧೈರ್ಯವೂ ಇಲ್ಲ" ಎಂದು ಹೇಳಿ ತನ್ನಮುಂದೆ ಹೋಗುತ್ತಿದ್ದ ಜನರ ಗುಂಪನ್ನು ನೋಡುತ್ತೆ, "ಕ್ಯಾಪ್ಟನ್ ಸಾಹೇಬ! ನಡೆ ಕಾರಾಗೃಹದಬಳಿಗೆ ಹೋಗೋಣ. ಅಲ್ಲಿ ಅತ್ಯಾಶ್ಚರ್ಯಕರವಾದ ನೋಟವನ್ನು ನೋಡಬಹುದು" ಎಂದನು.

ಅಧಿಕಾರಿಯು ನಮಸ್ಕರಿಸಿ ಮರುಮಾತಾಡದೆ ತನ್ನ ಒಡೆಯನನ್ನು ಹಿಂಬಾಲಿಸಿದನು. ಈ ವೇಳೆಗೆ ಕಾರಾಗೃಹದ ಮುಂದೆ ಜನಸಂದಣಿಯು ಬಹಳವಾಗಿತ್ತು. ಆದರೂ ದಿನನಾಥನ ಸೈನಿಕರು ದೃಢಮನಸ್ಕರಾಗಿ ನಿಂತು ಜನರೆಲ್ಲರನ್ನೂ ತಡೆಯುವುದರಲ್ಲಿ ಯಶಸ್ವಿಗಳಾಗಿದ್ದರು. ದಿನನಾಥನು ದೂರದಿಂದಲೇ ತನ್ನ ಕಡೆಗೆ ಬರುತ್ತಿದ್ದ ಪುರಜನರನ್ನು ನೋಡಿದ್ದನು. ಮುಂದೆ ಬರುತ್ತಿದ್ದವನ ಕೈಯಲ್ಲಿದ್ದ ಪತ್ರವನ್ನೂ ನೋಡಿದ್ದನು. ಅವನು ತನ್ನ ಅನುಯಾಯಿಯೊಬ್ಬನನ್ನು ನೋಡಿ, "ಓಹೋ! ಇದೇನು?

ಈ ಮೂರ್ಖರು ನಿಜವಾಗಿ ಅಪ್ಪಣೆಪಡೆದು ಬಂದಿರುವಂತೆ ಕಾಣುವುದಲ್ಲಾ! ಎಂದನು.

ಅವನ ಅನುಯಾಯಿಯು, “ ಶುದ್ಧ ಕಟುಕರು ! ” ಎಂದವರನ್ನು ಶಪಿಸಿದನು

ಈ ವೇಳೆಗೆ ಪುರಜನರು ಅಪ್ಪಣೆಯಪತ್ರವನ್ನು ತಂದು ಪೋಲೀಸಿನವರ ಮುಖಂಡನ ಕೈಯಲ್ಲಿಟ್ಟನು. ಪೋಲೀಸಿನವರು ಒಡನೆಯೇ ದಿನನಾಥನ ಸೈನಿಕರಕಡೆಗೆ ನಡೆದರು ಆದರೆ ದಿನನಾಥನು ಅವರನ್ನು ಸಮೀಪಕ್ಕೆ ಬರಗೊಡದೆ, “ನಿಲ್ಲಿ! ನನ್ನ ಕುದುರೆಯ ಸಮೀಪಕ್ಕೆ ಬರಬೇಡಿ. ಇಲ್ಲವಾದರೆ ನನ್ನ ಸೈನಿಕರಿಗೆ ಮುನ್ನುಗ್ಗಲು ಆಜ್ಞೆಮಾಡಬೇಕಾಗುವುದು” ಎಂದನು

ನೂರಾರು ಧ್ವನಿಗಳು, “ಅಪ್ಪಣೆಯ ಪತ್ರವನ್ನು ತಂದಿದ್ದೇವೆ ನೋಡು” ಎಂದು ಕೂಗಿಕೊಂಡವು.

ದಿನನಾಥನು ಆಶ್ಚರ್ಯಚಕಿತನಾಗಿ ಅಪ್ಪಣೆಯ ಚೀಟಿಯನ್ನು ತೆಗೆದುಕೊಂಡು, ಅದನ್ನೋದಿಕೊಂಡನು. ಬಳಿಕ ಗಟ್ಟಿಯಾಗಿ ಹೇಳತೊಡಗಿದನು :—“ ಈ ಚೀಟಿಯನ್ನು ಕೊಟ್ಟಿರುವವರೇ ನಿಜವಾಗಿ ರಮಾನಾಥನ ಹತ್ಯಾಕಾರಿಗಳು. ನನ್ನ ಕೈಗಳೆರಡನ್ನೂ ಕತ್ತರಿಸಿಹಾಕಲು ಬೇಕಾದರೂ ಒಪ್ಪುತ್ತಿದ್ದೆನು. ಇಂತಹ ತುಚ್ಛವಾದ ಅಪ್ಪಣೆಯನ್ನೆಂದಿಗೂ ಬರೆಯುತ್ತಿರಲಿಲ್ಲ. ”

ಪುರಜನಗಳಲ್ಲೊಬ್ಬನು ಆ ಚೀಟಿಯನ್ನು ಪುನಃ ತೆಗೆದುಕೊಳ್ಳಲು ಮುಂದೆಹೋದನು ದಿನನಾಥನು ತನ್ನ ಒರೆಯಿಂದ ಅವನನ್ನು ದೂರ ತಳ್ಳಿ, “ಸ್ವಲ್ಪ ನಿಧಾನಿಸು ಇಂತಹ ಪತ್ರಗಳನ್ನು ಹಿಂಸಕ್ಕೆ ಕೊಡಲಾಗದು. ಭದ್ರವಾಗಿಟ್ಟಿರಬೇಕು” ಎನ್ನುತ್ತ ಅದನ್ನು ಮಡಿಸಿ ತನ್ನ ಕಿಸೆಯಲ್ಲಿಟ್ಟುಕೊಂಡನು. ಬಳಿಕ ತನ್ನ ಸೈನಿಕರಕಡೆಗೆ ತಿರುಗಿ, “ಸೈನಿಕರೆ! ಬಲಗಡೆಗೆ ತಿರುಗಿ ಮುಂದರಿಯಿರಿ” ಎಂದು ಹೇಳಿ, ತನ್ನಬಳಿ ಇದ್ದ ಪುರಜನರಿಗೆ ಕೇಳಿಬರುವಂತೆ ಸ್ವಲ್ಪ ಗಟ್ಟಿಯಾಗಿ, “ಕಟುಕರೆ! ನಿಮ್ಮ ಕೆಲಸವನ್ನು ಪೂರ್ತಿಗೊಳಿಸಿ!” ಎಂದನು.

ಸೈನಿಕರು ಹೊರಟುಹೋಗುತ್ತಿದ್ದಂತೆ ಪುರಜನರ ಕೂಗುಗಳೂ

ಹೆಚ್ಚಾಗುತ್ತಿದ್ದುವು. ಸೈನಿಕರೆಲ್ಲರೂ ಹೊರಟುಹೋದಮೇಲೆ ಕಡೆಯಲ್ಲಿ ದಿನನಾಥನು ವಿಷಣ್ಣವದನನಾಗಿ ಹೊರಟುಹೋದನು.

. . . . . .

ಉಮಾನಾಥನು ತನಗೂ ತನ್ನ ತಮ್ಮನಿಗೂ ಇದ್ದ ಅಪಾಯವನ್ನು ಚೆನ್ನಾಗಿ ಮನಗಂಡಿದ್ದನು. ಅವನು ತನ್ನ ತಮ್ಮನನ್ನು ಅವಸರಪಡಿಸುತ್ತೆ ಅವನನ್ನು ಬೇಗ ಏಳುವಂತೆ ಹೇಳಿ ಅವನನ್ನು ಕರೆದುಕೊಂಡು ಹೊರಟನು. ರಮಾನಾಥನು ಅಣ್ಣನ ಕೈಮೇಲೆ ಭಾರವನ್ನು ಬಿಟ್ಟು ಕಾರಾಗೃಹದ ಮೆಟ್ಟಲುಗಳನ್ನಿಳಿದು ಅಲ್ಲಿದ್ದ ಅಂಗಳಕ್ಕೆ ಬಂದನು. ಮೆಟ್ಟಲುಗಳ ಬಳಿ ಪುಷ್ಪಲತೆಯು ನಡುಗುತ್ತೆ ನಿಂತಿದ್ದಳು. ಅವಳು, "ಉಮಾನಾಥ ಬಾಬುಗಳೆ! ಎಂತಹ ಸಂಕಟವೊದಗಿದೆ!" ಎಂದಳು.

ಉಮಾನಾಥನು, "ಏನೆ! ಮಗು!" ಎಂದು ಕೇಳಿದನು.

ಪುಷ್ಪಲತಾ:—ಪುರಜನರು ಪೌರಭವನಕ್ಕೆ ಹೋಗಿದ್ದಾರಂತೆ! ದಿನನಾಥನ ಸೈನಿಕರನ್ನು ಕಳುಹಿಬಿಡುವ ಅಪ್ಪಣೆಯನ್ನು ತರಬೇಕೆಂದಿದ್ದಾರಂತೆ!

ಉಮಾ:—ನಿಜವೇನೆ ತಾಯಿ! ಸೈನಿಕರು ಹೊರಟುಹೋದರೆ ನಮ್ಮ ಅವಸ್ಥೆಯು ತೀರ ಶೋಚನೀಯವಾಗುವುದಮ್ಮ!

ಪುಷ್ಪಲತೆಯು ಮೊದಲಿಗಿಂತಲೂ ಹೆಚ್ಚಾಗಿ ನಡುಗುತ್ತೆ "ನಾನು ತಮಗೊಂದು ವಿಷಯವನ್ನು ಹೇಳಬೇಕೆಂದಿದ್ದೇನೆ" ಎಂದಳು.

ಉಮಾನಾಥನು, "ಹೇಳು ತಾಯಿ! ನಿನ್ನ ಮೂಲಕ ದೇವದೇವನು ಮಾತನಾಡುತ್ತಿರುವನೆಂದು ಭಾವಿಸುತ್ತೇನಮ್ಮ" ಎಂದನು. ಆಗವಳು, "ತಾವು ನನ್ನ ಮಾತನ್ನು ಕೇಳೋಣಾಗುವುದೆ?" ಎಂದಳು.

ಉಮಾನಾಥನು "ಅದೇನಮ್ಮ ಮಗು ಹೇಳು" ಎಂದನು.

ಮುಂದೆ ನಡೆದ ಸಂಭಾಷಣೆಯನ್ನು ಪಾಠಕರು ಈಗಾಗಲೇ ಉಪಕ್ರಮಣಿಕೆಯಲ್ಲಿ ಅರಿತಿರುವರು. ಉಪಕ್ರಮಣಿಕೋಕ್ತರಾದವರಲ್ಲಿ ಯುವತಿಯೇ ಪುಷ್ಪಲತೆ—ಹಿರಿಯವನು ಉಮಾನಾಥ—ಕಿರಿಯವನು ರಮಾನಾಥ—ಬಾಗಿಲುತೆರೆಯುವುದೆ ಬೇಡವೆ ಎಂದು ಯೋಚಿಸುತ್ತಿದ್ದ ಜೈಲರನೇ ಪುಷ್ಪಲತೆಯ ತಂದೆ ಕಾಳೀಚರಣ. ಕಾಳೀಚರಣನೂ ಪುಷ್ಪ

ಲತೆಯೂ ಏಕಾಂತವಾಸದ ಗುಹೆಯೊಂದರಲ್ಲಿ ಹೋಗಿ ಬಾಗಿಲನ್ನು ಮುಚಿಕೊಂಡುದನ್ನೂ ಅದಾದಬಳಿಕ ಪುರಜನರು ಕಾರಾಗೃಹದ ಬಾಗಿಲನ್ನು ಭೇದಿಸಿಕೊಂಡು ಒಳಕ್ಕೆ ನುಗ್ಗಿದುದನ್ನೂ ಉಪಕ್ರಮಣಿಕೆಯಲ್ಲಿ ಹೇಳಿರುವೆವು. ಮುಂದೆ ನಡೆದ ಘಟನಾವಳಿಗಳನ್ನೀಗ ವಿವರಿಸುವೆವು.

## ಚತುರ್ಥ ಪರಿಚ್ಛೇದ

---

### ಪುರಜನರ ನ್ಯಾಯ

ಪುರಜನರು ಕಾರಾಗೃಹವನ್ನು ಪ್ರವೇಶಿಸುತ್ತಿದ್ದ ಸಮಯದಲ್ಲಿ ಪೂರ್ವಪರಿಚ್ಛೇದೋಕ್ತನಾದ ಅಪರಿಚಿತನು ಅಧಿಕಾರಿಯೊಡನೆ ಕಾರಾಗಾರಕ್ಕೆ ಸ್ವಲ್ಪ ದೂರದಲ್ಲಿ ನಿಂತು ಎಲ್ಲವನ್ನೂ ನೋಡುತ್ತಿದ್ದನು. ಅವನು ಅಧಿಕಾರಿಯನ್ನು ನೋಡಿ, 'ಸರದಾರ ಸಾಹೇಬ! ನೀನು ಹೇಳಿದುದು ನಿಜ. ಮಂತ್ರಿಗಳು ನಿಜವಾಗಿ ರಮಾನಾಥನ ಮರಣದಂಡನೆಯನ್ನೇ ಜಾರಿಗೆ ತಂದಂತಿದೆ. ಈ ಪುರಜನರು ಕೂಗುತ್ತಿರುವುದನ್ನು ಕೇಳಿದೆಯಾ? ಅವರಿಗೆ ಉಮಾನಾಥ ರಮಾನಾಥರಮೇಲೆ ಬಹಳ ದ್ವೇಷವಿರುವಂತಿದೆ'' ಎಂದನು

ಅಧಿಕಾರಿ —"ಇದೇನು! ಇಂತಹ ಹುಚ್ಚು ಕೂಗುಗಳನ್ನು ನಾನೆಂದಿಗೂ ಕೇಳಿರಲಿಲ್ಲ!"

ಅಪರಿಚಿತ.—ಅವರು ರಮಾನಾಥನಿದ್ದ ಕಾರಾಗಾರ ಭಾಗವನ್ನು ಕಂಡುಹಿಡಿದಂತಿದೆ, ನೋಡು. ರಮಾನಾಥನಿದ್ದ ಕೊಟಡಿಯ ಕಿಟಕಿಯ ಬಾಗಿಲಲ್ಲವೆ ಇಲ್ಲಿಗೆ ಕಾಣಬರುತ್ತಿರುವುದು?

ಅಧಿಕಾರಿ.—ಅದಾರೋ ಆ ಕಿಟಕಿಯ ಬಾಗಿಲನ್ನು ತೆರೆದಿದ್ದಾರೆ!

ಆ ಸಮಯದಲ್ಲಿ ಪುರಜನರಲ್ಲೊಬ್ಬನು ಕಿಟಕಿಯ ಸಲಾಕಿಗಳನ್ನು ಬಲವಾಗಿ ಅಲ್ಲಾಡಿಸುತ್ತಿದ್ದುದು ಕಂಡುಬಂದಿತು. ಉತ್ತರಕ್ಷಣದಲ್ಲಿಯೇ ಅವನು, "ಓಹೋ! ಓಡಿಹೋಗಿದ್ದಾನೆ!" ಎಂದು ಕೂಗಿಕೊಳ್ಳುತ್ತಿದ್ದುದು

ಕೇಳಿಬಂದಿತು. ಕಾರಾಗೃಹದ ಹೊರಗಡೆ ಇದ್ದ ಪುರಜನರಲ್ಲಿ ಕೆಲವರು, "ಅದು ಹೇಗೆ? ಹೊರಟುಹೋದನೆಂದರೇನು?" ಎಂದು ಕೇಳುತ್ತಿದ್ದರು.

ಆ ವೇಳೆಗೆ ರಮಾನಾಥನು ಕಾರಾಗಾರವನ್ನು ತ್ಯಜಿಸಿ ಹತ್ತುನಿಮಿಷಗಳಾಗಿದ್ದುವು. ರಮಾನಾಥನಿದ್ದ ಕೊಟಡಿಯನ್ನು ಪ್ರವೇಶಿಸಿದ್ದವನು, "ಹೊರಟುಹೋಗಿದ್ದಾನೆ! ಹಕ್ಕಿಯು ಹಾರಿಹೋಗಿದೆ!" ಎಂದು ಕೂಗುತ್ತಿದ್ದನು ಇದೆಲ್ಲವನ್ನೂ ಕೇಳುತ್ತಿದ್ದ ಅಪರಿಚಿತನು ಶುಷ್ಕವದನನಾಗಿ, "ಅವನು ಹೇಳುತ್ತಿರುವುದೇನು?" ಎಂದು ಅಧಿಕಾರಿಯನ್ನು ಪ್ರಶ್ನಿಸಿದನು.

ಅಧಿಕಾರಿ :—ಮಹಾಪ್ರಭುಗಳೆ! ಅವನು ಹೇಳುತ್ತಿರುವುದು ನಿಜವಾದರೆ ಬಹಳ ಅದೃಷ್ಟವಿಷಯವನ್ನು ಕೇಳಿದಂತಾಗುವುದು.

ಅಪರಿಚಿತ :—ನಿಜವಾದರೆ ಅದೃಷ್ಟವಿಷಯವನ್ನು ಕೇಳಿದಂತೆಯೇ ಸರಿ. ಆದರೆ ದುರದೃಷ್ಟವಶಾತ್ ಅದು ನಿಜವಾಗುವಂತಿಲ್ಲವಲ್ಲಾ!

ಅಧಿಕಾರಿ .—ನೋಡಿ ....

ಆ ಸಮಯದಲ್ಲಿ ಇನ್ನೂ ಅನೇಕರು ಕಾರಾಗೃಹದ ಕಿಟಕಿಯಬಳಿ ನಿಂತು ಕೋಪಾವಿಷ್ಟರಾಗಿ, "ಹೊರಟುಹೋಗಿದ್ದಾನೆ! ತಪ್ಪಿಸಿಕೊಂಡು ಬಿಟ್ಟಿದ್ದಾನೆ! ಯಾರೋ ಅವನಿಗೆ ಸಹಾಯಮಾಡಿದ್ದಾರೆ!" ಎಂದು ಕೂಗುತ್ತಿದ್ದರು. ಬೀದಿಯಲ್ಲಿದ್ದ ಜನಗಳು, "ಹೊರಟುಹೋದನೆ? ತಪ್ಪಿಸಿಕೊಂಡನೆ? ಅವನನ್ನು ಹಿಂಬಾಲಿಸಿ! ನಡೆಯಿರಿ!" ಎಂದು ಕೂಗತೊಡಗಿದರು. ಅಧಿಕಾರಿಯು ಆ ಸಮಯದಲ್ಲಿ ಅಪರಿಚಿತನನ್ನು ನೋಡಿ, "ಮಹಾಪ್ರಭುಗಳೆ! ರಮಾನಾಥನು ನಿಜವಾಗಿ ತಪ್ಪಿಸಿಕೊಂಡಿದ್ದಾನೆ!" ಎಂದು ಹೇಳಿದನು.

ಅಪರಿಚಿತ :—ನಿಜ. ಕಾರಾಗೃಹದಿಂದ ತಪ್ಪಿಸಿಕೊಂಡಿದ್ದಾನೆ. ಆದರೆ ಪಟ್ಟಣದಿಂದ ಹೊರಕ್ಕೆ ಹೋಗಲಾರನು. ಪಾಪ! ಪಟ್ಟಣದ ಹೆಬ್ಬಾಗಿಲು ಹಾಕಿರುವುದನ್ನು ಅವನೇ ನೋಡುತ್ತಾನೆ!

ಅಧಿಕಾರಿ :—ಪ್ರಭುಗಳೆ! ಪಟ್ಟಣದ ಹೆಬ್ಬಾಗಿಲುಗಳನ್ನು ಹಾಕಿಬಿಟ್ಟಿರಬೇಕೆಂದು ಯಾರಾದರೂ ಆಜ್ಞೆ ಮಾಡಿರುವರೇನು?

ಅಪರಿಚಿತ:—ಇಲ್ಲ. ನನಗೆ ತಿಳಿದಂತೆ ಇಲ್ಲ. ಅಂತಹ ಆಜ್ಞೆಯನ್ನು ಕೊಡುವವರಾರು ?

ಅಧಿಕಾರಿ :—ಹಾಗಾದರೆ ಮಹಾಪ್ರಭುಗಳು ಈಗ ಹೇಳಿದಂತೆ.... ಬಾಗಿಲನ್ನು. ....

ಅಪರಿಚಿತನು ಅರ್ಧೋಕ್ತಿಯಲ್ಲಿಯೇ, "ದುರದೃಷ್ಟವು ಕೆಲವರನ್ನು ಹಿಂಬಾಲಿಸಿಬರುವುದು. ಎಷ್ಟೋಜನ ಪ್ರಮುಖರು ದುರದೃಷ್ಟಕ್ಕೆ ಸಿಲುಕಿ ಸರ್ವನಾಶಹೊಂದಿರುವರು" ಎಂದನು

ಆ ಮಾತುಗಳನ್ನು ಕೇಳಿ ಅಧಿಕಾರಿಯು ನಡುಗಿದವನಾದನು. ಅವನ ಅಂಗಾಂಗಗಳು ತಣ್ಣಗಾದುವು ಅವನ ರಕ್ತವು ಹೆಪ್ಪುಕಟ್ಟಿದಂತಾಯಿತು ರಮಾನಾಥನು ಮಾಡಿದಂತೆಯೇ ಸರಿಯೆಂದು ಅದೇಕೋ ಅವನು ಭಾವಿಸಿದನು.

ಆ ಸಮಯದಲ್ಲಿ ಜನಗಳ ಕೂಗುಗಳು ಗುಡುಗು ಸಿಡಿಲುಗಳ ನಿನಾದಗಳನ್ನು ಮೀರಿಸಿದ್ದುವು.

.. .. ..

ಉಮಾನಾಥ ರಮಾನಾಥರು ಕಾರಾಗೃಹದ ಹಿಂಬಾಗಿಲಿನಿಂದ ಹೊರಟು ಸಣ್ಣವೀಧಿಯಲ್ಲಿಯೇ ಗಾಡಿಯನ್ನು ಹೊಡೆಸಿಕೊಂಡು ಸ್ವಲ್ಪ ದೂರ ಹೋದರು. ಬಳಿಕ ಪಟ್ಟಣದ ಹೆಬ್ಬಾಗಿಲಿನ ಕಡೆಗೆ ಹೋಗುವ ದೊಡ್ಡವೀಧಿಯೊಂದನ್ನು ಸೇರಿದರು. ಸಂದೇಹಕ್ಕಾಸ್ಪದವಿಲ್ಲದಿರಲೆಂದು ಗಾಡಿಯನ್ನು ಮೆಲ್ಲನೆ ಬಿಡುವಂತೆ ಬಂಡಿಯವನಿಗೆ ಆಜ್ಞೆಮಾಡಿದರು. ಗಾಡಿಯು ದೊಡ್ಡವೀಧಿಯಲ್ಲಿ ಅರ್ಧದಾರಿಯನ್ನು ದಾಟುತ್ತಲೇ ಬಂಡಿಯವನಿಗೆ ಧೈರ್ಯವಾಯಿತು. ಕಾರಾಗಾರವೂ ಮೃತ್ಯುವೂ ಹಿಂದೆ ನಿಂತುವೆಂದವನು ಭಾವಿಸಿದನು. ಎದುರಿಗೆ ಸ್ವಾತಂತ್ರ್ಯವೂ ಸೌಖ್ಯವೂ ಬರುತ್ತಿರುವುವೆಂದು ಭಾವಿಸಿದನು. ಹೀಗಾಗಿ ಅವನು ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸತೊಡಗಿದನು.

ತಟ್ಟನೆ ಗಾಡಿಯು ನಿಂತುಹೋಯಿತು !

ಉಮಾನಾಥನು ಬಂಡಿಯ ಕಿಟಕಿಯಮೂಲಕವಾಗಿ ನೋಡುತ್ತೆ, ಸಮಾಚಾರವೇನೆಂದು ಕೇಳಿದನು.

ಗಾಡಿಯವನು, "ಮಹಾಸ್ವಾಮಿ! ಅಲ್ಲಿ....ನೋಡೋಣಾಗಲಿ...." ಎನ್ನುತ್ತಿದ್ದನು. ಅವನ ಧ್ವನಿಯು ಭೀತಿಯಿಂದ ನಡುಗುತ್ತಿತ್ತು.

ಉಮಾನಾಥ.—ಅದೇನು ನೀನು ಹೇಳುತ್ತಿರುವುದು?

ಗಾಡಿಯವನು :—ಹೆಬ್ಬಾಗಿಲನ್ನು ಹಾಕಿಬಿಟ್ಟಿದ್ದಾರೆ!

ಉಮಾನಾಥ:—ಅದು ಹೇಗೆ? ಪ್ರಾತಃಕಾಲದಲ್ಲಿ ಬಾಗಿಲನ್ನು ಹಾಕುವುದಿಲ್ಲವಲ್ಲಾ!

ಗಾಡಿಯವನು :—ತಾವೇ ನೋಡೋಣಾಗಲಿ.

ಉಮಾನಾಥನು ಬಗ್ಗಿನೋಡಿ ಅವನು ಹೇಳಿದುದು ನಿಜವೆಂದರಿತುಕೊಂಡವನು, "ಚಿಂತೆಯಿಲ್ಲ ನಡೆ, ಗಡೀಪಾರಿನಆಜ್ಞೆಮಾಡಿರುವ ಚೀಟಿಯು ನನ್ನಲ್ಲಿದೆ. ಬಾಗಿಲು ಕಾಯುವವನು ನಮ್ಮನ್ನು ಬಿಡುತ್ತಾನೆ" ಎಂದನು.

ಗಾಡಿಯು ಮುಂದೆ ಹೊರಟಿತು ಆದರೆ ಗಾಡಿಯವನಿಗೆ ಮೊದಲಿದ್ದ ಹುರುಪೂ ಉತ್ಸಾಹವೂ ಕಂಡುಬರುತ್ತಿರಲಿಲ್ಲ

ಉಮಾನಾಥನು ಬಂಡಿಯ ಕಿಟಕಿಯಮೂಲಕ ನೋಡುತ್ತಿದ್ದಾಗ ಸಮೀಪದಲ್ಲಿದ್ದ ಅಂಗಡಿಯವನೊಬ್ಬನು ಅವನನ್ನು ಗುರುತಿಸಿದನು. ಇವನು ಪುರಜನರೊಡನೆ ಸೇರಬೇಕೆಂದಿದ್ದವನು ಕಾರ್ಯಾರ್ಥಿಯಾಗಿ ಹಿಂದೆ ನಿಂತಿದ್ದನು. ಈಗ ಹೊರಡಬೇಕೆಂದು ಹವಣಿಸಿಕೊಳ್ಳುವಷ್ಟರಲ್ಲಿ ಉಮಾನಾಥನನ್ನೇ ಗಾಡಿಯಲ್ಲಿ ಕಂಡು ಆಶ್ಚರ್ಯಾನ್ವಿತನಾಗಿ ಸಮೀಪದಲ್ಲಿದ್ದವರಿಬ್ಬರನ್ನು ಕೂಗಿ ತಾನು ನೋಡಿದುದೆಲ್ಲವನ್ನೂ ಹೇಳಿದನು ಮೂವರೂ ನಿಂತು ಗಾಡಿಯಕಡೆಗೆ ನೋಡತೊಡಗಿದರು. ಅದರಲ್ಲಿದ್ದವ ನಾರೆಂಬುದು ಅವರೆಲ್ಲರಿಗೂ ಸರಿಯಾಗಿನ್ನೂ ತಿಳಿದಿರಲಿಲ್ಲ.

ಈ ವೇಳೆಗೆ ಗಾಡಿಯು ಸುರನಗರಿಯ ಹೆಬ್ಬಾಗಿಲಿನ ಬಳಿಗೆ ಬಂದುದು ಗಾಡಿಯವನು, "ಬಾಗಿಲು ತೆಗೆ" ಎಂದನು.

ಕಾವಲುಗಾರನು, "ಬಾಗಿಲನ್ನು ತೆಗೆಯಲೆ? ತೆಗೆ ಎಂದು ಹೇಳುವುದು ಸುಲಭ. ಆದರೆ ನಾನಾವುದರಿಂದ ಬಾಗಿಲು ತೆಗೆಯಲಿ" ಎಂದು ಹೇಳಿದನು.

ಗಾಡಿಯವನು :—ಅದೇಕೆ? ಬರಿಯಗದ ಕೈಯಿಂದ ತೆಗೆ.

ಕಾವಲುಗಾರ:—ಬಿಯಗದ ಕೈಯಿಂದ! ನಿಜ. ಆದರೆ ಅದಿಲ್ಲ ದಿದ್ದರೆ?

" ಅದಿಲ್ಲವೆಂದರೇನು? ನಿನ್ನಲ್ಲಿಲ್ಲವೆ?"

" ಇಲ್ಲ"

" ಅದೇನಾಯಿತು?"

" ನನ್ನಿಂದ ತೆಗೆದುಕೊಂಡು ಹೋದರಲ್ಲಾ!"

" ಯಾರು?"

" ಪಟ್ಟಣವನ್ನಾರೂ ಬಿಟ್ಟುಹೋಗಕೂಡದೆಂದು ಅದಾರವುನಸ್ಸಿ ನಲ್ಲಿತ್ತೋ ಅವರು ತೆಗೆದುಕೊಂಡುಹೋದರು."

ಆ ಸಮಯದಲ್ಲಿ ಉಮಾನಾಥನು ಪುನಃ ಕಿಟಕಿಯ ಮೂಲಕ ನೋಡುತ್ತಿ, "ಅಣ್ಣಾ! ನಾನು ಉಮಾನಾಥ! ನನ್ನ ತಮ್ಮ ರಮಾ ನಾಥನಿಗೆ ಗಡೀವಾರಾಗಿದೆಯಷ್ಟೆ. ಅವನನ್ನು ಕರೆದುಕೊಂಡು ಹೋಗ ಬೇಕು. ಬಾಗಿಲು ತೆಗೆ'' ಎಂದನು.

ಕಾವಲುಗಾರನು ಗಾಡಿಯಬಳಿಗೆ ನುಗ್ಗಿ ಉಮಾನಾಥನನ್ನು ಗುರು ತಿಸಿ, ''ಸ್ವಾಮಿ! ಕ್ಷಮಿಸಬೇಕು. ನಿಜವಾಗಿ ಬಿಯಗದ ಕೈಯನ್ನು ತೆಗೆದುಕೊಂಡುಹೋಗಿ ಬಿಟ್ಟಿದ್ದಾರೆ'' ಎಂದನು.

'' ಯಾವಾಗ?''

'' ಈದಿನ ಬೆಳಿಗ್ಗೆ''

'' ಯಾರು ತೆಗೆದುಕೊಂಡು ಹೋದರು?''

'' ಸುಮಾರು ಇಪ್ಪತ್ತೆರಡು ವರ್ಷಗಳ ಯುವಕನೊಬ್ಬನು. ಅವನು ಸಣ್ಣಗಿದ್ದು ಶುಷ್ಕವದನವುಳ್ಳವನಾಗಿದ್ದನು.''

'' ಅವನಿಗೆ ಅದನ್ನು ಕೊಟ್ಟುದೇಕೆ?"

'' ಅವನು ಚೀಟಿಯೊಂದನ್ನು ತೋರಿಸಿದನು. ಅದಕ್ಕೆ ಸಹಿಯೂ ಮೊಹರೂ ಇದ್ದುವು."

'' ಯಾರು ಸಹಿ ಮಾಡಿದ್ದರು?"

'' ಪೌರಭವನದ ಮಂತ್ರಿಗಳು"

ಆ ಸಮಯದಲ್ಲಿ ರಮಾನಾಥನು, ಶಾಂತಚಿತ್ತದಿಂದಲೇ, '' ಸರಿ,

ನಮ್ಮ ವಿನಾಶವು ಸನ್ನಿಹಿತವಾದಂತೆಯೇ ಆಯಿತು" ಎಂದನು. ಉಮಾನಾಥನು ಕಾವಲುಗಾರನನ್ನು ನೋಡಿ, "ಪಟ್ಟಣದ ಇತರ ಹೆಬ್ಬಾಗಿಲುಗಳಲ್ಲಿಯೂ ಇದೇ ರೀತಿಯಲ್ಲಿ ಮುಂಜಾಗ್ರತೆಯನ್ನು ವ್ಯಕ್ತಪಡಿಸಿರುವರೆ? ನೀನು ಬಲ್ಲೆಯಾ?" ಎಂದು ಕೇಳಿದನು.

ಅವನು, "ನಾನರಿಯೆ" ಎಂದನು.

ಉಮಾನಾಥನು ಗಾಡಿಯವನನ್ನು ನೋಡಿ, "ಮಾನವನು ಸರ್ವ ಪ್ರಯತ್ನವನ್ನೂ ಮಾಡಿ ಪ್ರಾಣಸಂರಕ್ಷಣೆಮಾಡಿಕೊಳ್ಳಬೇಕೆಂದು ಪರಮಾತ್ಮನ ಆಜ್ಞೆ. ನಡೆ, ಬೇರೊಂದು ಬಾಗಿಲಿನ ಬಳಿಗೆ ಗಾಡಿಯಲ್ಲಿಯೇ ಬೇಗ ಹೋಗೋಣ" ಎಂದನು.

ಬಂಡಿಯವನು ಗಾಡಿಯನ್ನು ತಿರುಗಿಸುತ್ತಿದ್ದಾಗ ಉಮಾನಾಥನು ಕಾವಲುಗಾರನನ್ನು ನೋಡಿ, "ನಿನ್ನ ಮನಸ್ಸು ಒಳ್ಳೆಯದಪ್ಪಾ! ನಿನಗೆ ದೇವರು ಒಳ್ಳೆಯದನ್ನು ಮಾಡಲಿ! ನಮ್ಮನ್ನುಳಿಸುವ ಇಚ್ಛೆಯುಳ್ಳನಾಗಿದ್ದೆಯಾದುದರಿಂದ ದೇವದೇವನ ಮನಸ್ಸಿನಲ್ಲಿ ನೀನು ಜಯಶಾಲಿಯಾದಂತೆಯೇಸರಿ" ಎಂದನು

ಕಾವಲುಗಾರನು ದುಃಖಸೂಚಕಧ್ವನಿಯಿಂದ, "ಅಯ್ಯೋ! ಅಲ್ಲಿ ನೋಡಿ!" ಎಂದನು.

ಎದುರಿಗೆ ಏಳೆಂಟು ಜನರು ಗಾಡಿಯಕಡೆಗೇ ಬೇಗಬೇಗನೆ ಬರುತ್ತಿದ್ದುದು ಕಂಡುಬಂದಿತು. ಅವರು ತೊಂದರೆಯುಂಟುಮಾಡಲಿಷ್ಟವುಳ್ಳವರಂತೆಯೇ ಕಂಡುಬರುತ್ತಿದ್ದರು. ಅವರನ್ನು ನೋಡುತ್ತಲೇ ಉಮಾನಾಥನು ಗಾಡಿಯವನ ಕಡೆಗೆ ತಿರುಗಿ, "ಅವರ ಮಧ್ಯೆ ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸು. ಬಳಿಕ ಎಡಗಡೆಗೆ ತಿರುಗು. ಅದೊಂದೇ ಉಳಿದಿರುವಮಾರ್ಗ" ಎಂದನು.

ಗಾಡಿಯವನು ಕುದುರೆಗಳನ್ನು ನಾಗಾಲೋಟದಲ್ಲಿ ಓಡಿಸಿದನು. ಎದುರಿಗಿದ್ದ ಜನರು ತಮಗುಂಟಾಗುತ್ತಿದ್ದ ಪರಾಭವವನ್ನು ಸಹಿಸಲಾರದವರಾಗಿ, ತಮ್ಮ ಕೈಯಲ್ಲಿದ್ದ ದೊಣ್ಣೆಗಳನ್ನು ಮೇಲೆತ್ತಿಹಿಡಿದು, "ನಿಲ್ಲು! ನಿಲ್ಲು!" ಎಂದು ಕೂಗತೊಡಗಿದರು. ಗಾಡಿಯವನು ಮತ್ತಷ್ಟು

**ವೇಗವಾಗಿ ಮುಂದುವರಿದನು. ಜನರಿಗೂ ಗಾಡಿಗೂ ಘರ್ಷಣೆ ಯುಂಟಾಯಿತು.**

ಉಮಾನಾಥ ರಮಾನಾಥರು ಗಾಡಿಯೊಳಗೆ ಆಚ್ಛಾದಿತರಾಗಿ ಕುಳಿತಿದ್ದರು. ಅವರು ಯಾವುದನ್ನೂ ನೋಡಲಾಗುತ್ತಿರಲಿಲ್ಲ. ತಟ್ಟನೆ ಕುದುರೆಗಳು ಬೆದರಿದುವು. ಗಾಡಿಯು ಕ್ಷಣಮಾತ್ರದವರೆಗೆ ನಡುಗಿದುದು. ಉತ್ತರಕ್ಷಣದಲ್ಲಿ ನಿಂತುಹೋಯಿತು ಮತ್ತೊಂದು ನಿಮಿಷವು ಕಳೆಯುವಷ್ಟರಲ್ಲಿ ಗಾಡಿಯು ಪುನಃ ಹೊರಟು ಅದಾವುದೋ ಭಾರವಾದ ಪದಾರ್ಥದ ಮೇಲೆ ಹರಿಯಿತು ಒಳಗೆ ಕುಳಿತಿದ್ದವರು ಯಾವನ ದೇಹದಮೇಲೆಯೋ ಗಾಡಿಯು ಹರಿಯಿತೆಂದುಕೊಂಡರು ಮಾರುಕ್ಷಣವೇ ಬಂಡಿಯು ಓಡತೊಡಗಿತು ಗಾಡಿಯ ಹಿಂಭಾಗದಲ್ಲಿ ಅನೇಕರು ದುರ್ಭಾಷೆಗಳಿಂದ ಬೈಯುತ್ತಿದ್ದುದು ಕೇಳಿಬರಲಾರಂಭವಾಯಿತು. ಅದನ್ನು ಕೇಳಿ ರಮಾನಾಥನು, "ಅಯ್ಯೋ! ಯಾರಿಗೋ ಗಾಯವಾದಂತೆ ತೋರುತ್ತಿದೆ!" ಎಂದನು.

ಉಮಾನಾಥನು ಬಂಡಿಯವನಿಗೆ, "ಓಡು! ಓಡು! ಎಂದು ಹೇಳಿದನು.

ಈ ಆಜ್ಞೆಯನ್ನು ಕೇಳಿದರೂ ಬಂಡಿಯವನು ತಟ್ಟನೆ ಗಾಡಿಯನ್ನು ನಿಲ್ಲಿಸಿದನು ಉಮಾನಾಥನು ಪುನಃ ಬಂದುದೇನೆಂದು ಕೇಳಿದನು. ಬಂಡಿಯವನು, "ಅಲ್ಲಿ ನೋಡಿ!" ಎಂದನು.

ಉಮಾನಾಥನು ನೋಡಿದನು. ಯಾವವೀಧಿಯಲ್ಲಿ ಗಾಡಿಯು ಹೋಗಬೇಕಾಗಿದ್ದಿತೋ ಅದರಲ್ಲಿ ಕಾರಾಗೃಹದಿಂದ ಹೊರಟುಬಂದಿದ್ದ ಜನರೆಲ್ಲರೂ ಇದ್ದರು. ಉಮಾನಾಥನು ಬಂಡಿಯವನನ್ನು ನೋಡಿ, "ಗಾಡಿಯನ್ನು ನಿಲ್ಲಿಸಿಬಿಡು, ನೀನು ಓಡಿಹೋಗು. ಮುಂದಕ್ಕೆ ಹೋದರೆ ಪ್ರಯೋಜನವೇನೂ ಇಲ್ಲ. ನಮ್ಮ ಆಸೆಯು ಪೂರ್ತಿಯಾದಂತೆಯೇ ಸರಿ" ಎಂದನು.

ಹಿಂದೆ ಓಡಿಬರುತ್ತಿದ್ದ ಜನರು ಮುಂದೆ ಕಂಡು ಬಂದ ಜನರನ್ನು ನೋಡಿ, "ದ್ರೋಹಿಗಳು ಇಲ್ಲಿಯೇ ಇದ್ದಾರೆ ನೋಡಿ. ಖೂನಿಕಾರರು!

ಕೊರಮರು!" ಎಂದು ಮುಂತಾಗಿ ಕೂಗುತ್ತಿದ್ದರು. ಹಿಂದೆ ಬರುತ್ತಿದ್ದವರು ತಮ್ಮ ಭುಜಗಳ ಮೇಲೆ ತಮ್ಮ ಸ್ನೇಹಿತರಲ್ಲೊಬ್ಬನ ದೇಹವನ್ನು ಹಾಕಿಕೊಂಡು ಬರುತ್ತಿದ್ದರು ಅವರ ಮಿತ್ರನು ಕುದುರೆಯ ಕಡಿವಾಣವನ್ನು ಹಿಡಿಯಲು ಹೋಗಿ, ಕೆಳಗೆಬಿದ್ದು, ಕುದುರೆಗಳಿಂದಲೂ ಬಂಡಿಯಿಂದಲೂ ಆಹತನಾಗಿಬಿಟ್ಟಿದ್ದನು.

ಬಂಡಿಯವನು ಕುದುರೆಗಳನ್ನು ಹಿಡಿದು ನಿಲ್ಲಿಸಿದನು. ಉಮಾನಾಥನು ಎಷ್ಟು ವಿಧವಾಗಿ ಹೇಳಿದರೂ ಗಾಡಿಯವನು ಓಡಿ ಹೋಗಲೆತ್ನಿಸಲಿಲ್ಲ.

ಹಿಂದೆ ಬರುತ್ತಿದ್ದವರಿಗೂ ಮುಂದೆ ಬರುತ್ತಿದ್ದವರಿಗೂ ಮಧ್ಯೆ ಗಾಡಿಯು ಸಿಕ್ಕಿಬಿದ್ದಿತು. ಕಮ್ಮಾರನೊಬ್ಬನು ತನ್ನ ಬಳಿಯಿದ್ದ ಸುತ್ತಿಗೆಯಿಂದ ಕುದುರೆಯೊಂದನ್ನು ಹೊಡೆದನು. ಅದು ಕಾಲುಮುರಿದುಕೊಂಡು ಅಲ್ಲಿಯೇ ಉರುಳಿದುದು.

∴ ∴ ∴

ಆ ಸಮಯದಲ್ಲಿ ಸಮೀಪದಲ್ಲಿದ್ದ ಕಿಟಕಿಯೊಂದು ತೆರೆಯಲ್ಪಟ್ಟಿತು. ಕಿಟಕಿಯಲ್ಲಿ ಅಪರಿಚಿತನ ಶುಷ್ಕವದನವು ಕಂಡುಬಂದುದು. ಅವನು ವೀಥಿಯಲ್ಲಿ ನಡೆಯುತ್ತಿದ್ದ ದೃಶ್ಯವನ್ನು ಬಹಳ ಉತ್ಸುಕತೆಯಿಂದ ನೋಡುತ್ತಿದ್ದನು. ಅವನ ಹಿಂದೆ ಅಧಿಕಾರಿಯ ವದನವು ಕಂಡಬರುತ್ತಿದ್ದಿತು. ಅವನ ಮುಖವೂ ವಿಶುಷ್ಕವಾಗಿದ್ದಿತು. ಅವನು, "ಮಹಾ ಪ್ರಭುಗಳೆ! ಅಲ್ಲೇನು ನಡೆಯುತ್ತಿದೆ?" ಎಂದನು.

ಅಪರಿಚಿತ.—ನಿಜವಾಗಿ ಮಹಾಭೀಕರಕೃತ್ಯವೊಂದು ನಡೆಯುತ್ತಿದೆ.

ಅಧಿಕಾರಿ:—ಕಾಣುವುದೆ ಮಹಾಪ್ರಭು! ಉಮಾನಾಥನನ್ನವರು ಗಾಡಿಯಿಂದ ಎಳೆಯುತ್ತಿದ್ದಾರೆ! ಅದಾರೋ ಅವನನ್ನು ಹೊಡೆದರಲ್ಲಾ!

ಅಪರಿಚಿತನು ಭಾವೋದ್ರೇಕವಿಹೀನನಾದ ವಿರಾಗಿಯಂತೆಯೇ ಮೊದಲಿನಿಂದಲೂ ತೋರಿಬರುತ್ತಿದ್ದನು. ಅವನು, "ನಿಜ, ಈ ಜನರು ಬಹಳ ಕೋಪಾನ್ವಿತರಾಗಿದ್ದಾರೆ" ಎಂದನು.

**ಅಧಿಕಾರಿ :—ನೋಡಿ, ಪಾಪ! ರಮಾನಾಥನನ್ನೂ ಗಾಡಿಯಿಂದ ಏಳಿಯುತ್ತಿದ್ದಾರೆ ಅವನು ಮೊದಲೇ ನಿಶ್ಶಕ್ತನಾಗಿದ್ದಾನೆ. ಕಾರಾಗಾರದ ಹಿಂಸೆಯಿಂದ ಕೈ ಬೆರಳುಗಳು ಪುಡಿಪುಡಿಯಾದಂತಿವೆ. ಕೈಗಳಿಗೆ ಬಟ್ಟೆಗಳನ್ನು ಸುತ್ತಿರುವಂತಿದೆ.**

ಅಪರಿಚಿತ .—ನಿಜ-ಅವನೇ ರಮಾನಾಥ

ಅಧಿಕಾರಿಯು ಮೆಲ್ಲನೆ ಕೂಗಿ ಮುಖವನ್ನು ಬೇರೆಯ ಕಡೆಗೆ ತಿರುಗಿಸಿಕೊಂಡನು ರಮಾನಾಥನು ನೆಲದಮೇಲೆ ಕಾಲಿಡುತ್ತಲೇ ಅದಾರೋ ಸಲಾಕಿಯೊಂದರಿಂದ ಅವನ ತಲೆಯಮೇಲೆ ಬಲವಾಗಿ ಹೊಡೆದರು. ಅವನ ಶಿರಸ್ಸೊಡೆದು ಅವನು ಕೆಳಕ್ಕೆ ಬಿದ್ದನು ಅವನು ಪುನಃ ಎದ್ದನು ಆದರೆ ಉತ್ತರಕ್ಷಣವೇ ಕೆಳಗೆ ಬಿದ್ದನು ಅವನ ಪ್ರಾಣಪಕ್ಷಿಯು ಆ ವೇಳೆಗೆ ಹಾರಿಹೋಗಿದ್ದಿತು ಕೆಲವರು ಕೂಗುತ್ತ ಅವನ ಸುತ್ತಲೂ ನಿಂತರು

ರಮಾನಾಥನ ಅವಸ್ಥೆಯನ್ನು ನೋಡುತ್ತಲೇ ಅಪರಿಚಿತನ ಮನಸ್ಸು ವಿಚಲಿತವಾಯಿತೆಂದು ತೋರುವುದು. ಅವನ ಮುಖವು ಮತ್ತಷ್ಟು ಶುಷ್ಕವಾಯಿತು ಅವನು ತನ್ನ ಕಣ್ಣುರೆಪ್ಪೆಗಳನ್ನು ಸ್ವಲ್ಪ ಹೊತ್ತು ಮುಚ್ಚಿಕೊಂಡನು

ಅಧಿಕಾರಿಯು ಅಪರಿಚಿತನಲ್ಲಿ ಲಂಕುರಿಸಿದ ದಯೆಯನ್ನು ಉಪಯೋಗವಡಿಸಿಕೊಳ್ಳಬೇಕೆಂದು ಅವನ ಕಡೆಗೆ ತಿರುಗಿ, "ಮಹಾ ಪ್ರಭುಗಳೆ! ನೋಡಿ ನಿಧಾನವಾದರೆ ಅವರು ಉಮಾನಾಥನನ್ನೂ ಖೂನಿಮಾಡಿ ಬಿಡುತ್ತಾರೆ" ಎಂದನು.

ಅಪರಿಚಿತನು ಆ ವೇಳೆಗಾಗಲೇ ಪುನಃ ಕಣ್ಣು ತೆರೆದು ಎಲ್ಲವನ್ನೂ ನೋಡತೊಡಗಿದ್ದವನು, "ನಿಜ ಈ ಜನರಿಗೆ ದಯೆಯೇ ಇಲ್ಲ. ಅವರಿಗೆ ಕೆಟ್ಟುದನ್ನಾವಾಗಲೂ ಎಣಿಸಬಾರದು" ಎಂದನು.

ಅಧಿಕಾರಿ .—ಮಹಾಪ್ರಭುಗಳೆ! ಆ ಮನುಷ್ಯನನ್ನಾರೂ ಉಳಿಸಲಾರರೆ? ಅವನು ಮಹಾಪ್ರಭುಗಳ ಗುರುವಾಗಿದ್ದವನು. ಅವನ ಪ್ರಾಣರಕ್ಷಣೆಯಾಗುವ ಉಪಾಯವಿದ್ದರೆ ಹೇಳೋಣಾಗಲಿ. ನಾನು ಆ ಪ್ರಯತ್ನದಲ್ಲಿ ಮಡಿದರೂ. ......... . ......

ವಿನಯಸಿಂಹನು (ಅಪರಿಚಿತನೇ ರಾಜಕುಮಾರ ವಿನಯಸಿಂಹ ನಾಗಿದ್ದನು) ಹುಬ್ಬುಗಂಟಿಕ್ಕಿ ನೋಡುತ್ತ, "ಕ್ಯಾಪ್ಟನ್ ಹರನಾಥಬಾಬು! ನೀನೀಗಲೇ ಹೋಗಿ ನನ್ನ ಸೈನ್ಯವನ್ನು ಸಜ್ಜುಗೊಳಿಸು ನಡೆ. ಯಾವ ಕ್ಷಣದಲ್ಲಿ ಅದರ ಸಹಾಯವೆನಗೆ ಬೇಕಾಗುವುದೋ ಹೇಳಲಾರೆ" ಎಂದನು.

ಅಧಿಕಾರಿ:—ಹಾಗಾದರೆ, ಖೂನಿಕಾರರ ಮಧ್ಯದಲ್ಲಿ ಮಹಾಪ್ರಭು ಗಳೊಬ್ಬರನ್ನೇ ಬಿಟ್ಟು ಹೊರಟುಹೋಗಲೆ?

ವಿನಯಸಿಂಹನು ಕರ್ಕಶಸ್ವರದಿಂದ, "ಹೋಗು, ನನ್ನ ವಿಪತ್ತು ಗಳನ್ನು ಕುರಿತು ನಾನು ಯೋಚಿಸುವುದಕ್ಕಿಂತ ಹೆಚ್ಚಾಗಿ ನೀನು ಯೋಚಿಸಬೇಕಾದುದಿಲ್ಲ" ಎಂದನು.

ಅಧಿಕಾರಿಯು ಅಲ್ಲಿಂದ ಬೇಗನೆ ಹೊರಟುಹೋದನು. ವಿನಯ ಸಿಂಹನ ಆಜ್ಞೆಯನ್ನು ಪಾಲಿಸುವ ಇಷ್ಟಕ್ಕಿಂತಲೂ ಆ ಸ್ಥಳದಿಂದ ಬೇಗನೆ ಪಾರಾಗಿಹೋಗಿ ಆ ಭೀಕರ ದೃಶ್ಯವನ್ನು ನೋಡದಿರಬೇಕೆಂಬುದೇ ಅವನ ತ್ವರಿತಗಮನಕ್ಕೆ ಹೆಚ್ಚು ಕಾರಣವಾಗಿದ್ದಿತು.

∴ ∴ ∴

ಅಧಿಕಾರಿಯು ಹೊರಟುಹೋಗುತ್ತಿದ್ದ ಸಮಯದಲ್ಲಿ ಉಮಾನಾಥನು ಬಹಳ ಕಷ್ಟಪಟ್ಟುಕೊಂಡು ಒಂದು ಮನೆಯ ಮೆಟ್ಟಲುಗಳ ಮೇಲೆ ಹತ್ತಲು ಆರಂಭಿಸಿದ್ದನು. ಯಾವ ಮನೆಯಿಂದ ವಿನಯಸಿಂಹನು ಎಲ್ಲವನ್ನೂ ನೋಡುತ್ತಿದ್ದನೋ ಆ ಮನೆಯ ಎದುರಿಗಿದ್ದ ಗೃಹದ ಮೆಟ್ಟಲುಗಳನ್ನೇ ಈಗ ಉಮಾನಾಥನು ಹತ್ತುತ್ತಿದ್ದನು. ಅವನಿಗೆ ಎಲ್ಲ ಕಡೆಗಳಿಂದಲೂ ಪೆಟ್ಟುಗಳು ಬೀಳುತ್ತಿದ್ದುವು. ಆದರೂ ಅವನ ಬಾಯಿಂದ ಕೆಟ್ಟಮಾತು ಗಳಾವುವೂ ಬರಲಿಲ್ಲ. ಅವನು, "ನನ್ನ ತಮ್ಮ—ನನ್ನ ತಮ್ಮನೆಲ್ಲಿ?" ಎಂದು ಮಾತ್ರ ಕೂಗಿಕೊಳ್ಳುತ್ತಿದ್ದನು. ಆ ಸಮಯದಲ್ಲೊಬ್ಬನು ಅವನ ಬೆನ್ನಿನ ಮೇಲೆ ತಿವಿದನು. ಅವನು, "ನನ್ನ ತಮ್ಮ—ತಮ್ಮನೆಲ್ಲಿ?" ಎಂದು ಪುನಃ ಕೂಗಿಕೊಂಡನು. ಆ ಪುರಜನರಲ್ಲೊಬ್ಬನು, "ಅವನನ್ನು ಗಲ್ಲಿಗೆ ಹಾಕು ತ್ತಿದ್ದಾರೆ. ನೀನೂ ಅಲ್ಲಿಗೆ ಹೋಗುವೆ" ಎಂದು ಪಿಸ್ತೂಲಿನಿಂದ ಹಣೆಗೆ ಗುರಿಯಿಟ್ಟು ಹೊಡೆದನು. ಉಮಾನಾಥನು ಕಡೆಯುಬಾರಿ, "ನನ್ನ ತಮ್ಮ

ನೆಲ್ಲಿ" ಎನ್ನುತ್ತ ಕೆಳಗೆ ಬಿದ್ದನು. ಅವನ ಪ್ರಾಣವಾಯುವು ಅನಂತಾಕಾಶದಲ್ಲಿ ಲೀನವಾಗಿ ಹೋಯಿತು.

ಪುರಜನರು ಆದೇಶಪ್ರೇಮಿಗಳ ದೇಹಗಳನ್ನು ಸಮೀಪದಲ್ಲಿಯೇ ತಾವು ನಿರ್ಮಿಸಿದ್ದ ವಧ್ಯಸ್ಥಾನದಲ್ಲಿ ಗಲ್ಲಿಗೇರಿಸಿದರು.

.·. .·. .·.

ಭಯಾನಕವಾದಾ ದೃಶ್ಯವನ್ನು ವಿನಯಸಿಂಹನು ಕಿಟಕಿಯ ಹಿಂಭಾಗದಿಂದ ಚೆನ್ನಾಗಿ ಕಂಡನೋ ಇಲ್ಲವೋ ಹೇಳಲಾಗದು. ಪುರಜನರು ತಮ್ಮ ಅಮಾನುಷಕೃತ್ಯದ ಅಂತ್ಯಭಾಗದಲ್ಲಿ ನಿರತರಾಗಿದ್ದಾಗ ವಿನಯಸಿಂಹನು ಸುರನಗರಿಯ ಹೆಬ್ಬಾಗಿಲಿನ ಬಳಿಗೆ ಹೋದನು. ಅದಿನ್ನೂ ಮುಚ್ಚಲ್ಪಟ್ಟಿತ್ತು. ಅವನನ್ನು ನೋಡಿ ಕಾವಲುಗಾರನು, "ಆಹಾ! ಬನ್ನಿ. ನನ್ನ ಬಿಯಗದ ಕೈಯನ್ನು ತಂದಿರಾ?" ಎಂದು ಕೇಳಿದನು.

ವಿನಯಸಿಂಹನು, "ಅಹುದಪ್ಪಾ! ತಂದಿದ್ದೇನೆ. ತೆಗೆದುಕೊ" ಎಂದನು

ಕಾವಲುಗಾರನು ದೀರ್ಘವಾಗಿ ನಿಟ್ಟುಸಿರಿಟ್ಟು, "ತಾವದನ್ನು ಕಾಲುಗಂಟೆಯ ಮುಂದೆ ತರದೆ ಹೋದುದು ಎಂತಹ ದುರದೃಷ್ಟವೆನ್ನಬೇಕು!" ಎಂದನು.

"ಅದೇಕೆ?"

"ಏಕೆಂದರೆ—ರಮಾನಾಥ ಉಮಾನಾಥರಿಗೋಸ್ಕರ ಬಾಗಿಲನ್ನು ತೆರೆಯಬಹುದಾಗಿತ್ತು. ಅದು ಹಾಕಲ್ಪಟ್ಟಿತ್ತಾಗಿ ಅವರು ಹಿಂದಿರುಗಬೇಕಾಯಿತು."

ಆ ಸಮಯದಲ್ಲೊಬ್ಬನು ದೂರದಿಂದಲೇ, "ಬಾಗಿಲು—ಬಾಗಿಲು ತೆಗೆ—ಬೇಗತೆಗೆ" ಎಂದು ಕೂಗುತ್ತಿದ್ದುದು ಕೇಳಿಬಂದಿತು. ವಿನಯಸಿಂಹನು ತಿರುಗಿ ನೋಡಲಾಗಿ ಸರದಾರ ಹರನಾಥಬಾಬುವು ಬೇಗಬೇಗನೆ ಕುದುರೆಯಮೇಲೆ ಬರುತ್ತಿದ್ದುದು ಕಂಡುಬಂದಿತು. ಅವನು ಸಮೀಪಕ್ಕೆ ಬರುತ್ತಲೇ ವಿನಯಸಿಂಹನು, "ಹರನಾಥಬಾಬು! ನೀನಿನ್ನೂ ಇಲ್ಲಿಯೇ ಇರುವೆಯಾ? ನನ್ನ ಆಜ್ಞೆಯನ್ನು ಹೀಗೆ ಪಾಲಿಸುವುದಾದರೆ ಬಹು ನಿಧಾನವಾಗಿ ಪಾಲಿಸಿದಂತಾಯಿತು" ಎಂದನು.

ಹರನಾಥ:—ಮಹಾಪ್ರಭುಗಳೆ! ನಾನೀಗ ಮೂರನೆಯ ಹೆಬ್ಬಾಗಿಲಿನಬಳಿ ಬಂದಿದ್ದೇನೆ. ಎರಡು ಕಡೆಗಳಲ್ಲಿ ಬಾಗಿಲುಗಳು ಬಂದಾಗಿದ್ದುವು.

ವಿನಯ:—ಇರಲಿ, ಈ ಮನುಷ್ಯನು ಇದನ್ನು ತೆಗೆಯುತ್ತಾನೆ—ಈ ಬಾಗಿಲನ್ನು ತೆಗೆಯಪ್ಪಾ!

ಕಡೆಯಮಾತುಗಳನ್ನು ಕೇಳಿ ಕಾವಲುಗಾರನು ಬೇಗ ಬೇಗನೆ ಬಾಗಿಲು ತೆರೆದನು. "ಮಹಾಪ್ರಭು" ಎಂದಾ ಅಪರಿಚಿತನನ್ನು ಆ ಗಂತುಕನು ಸಂಬೋಧಿಸಿದುದನ್ನು ಕೇಳಿ ಅವನಿಗೆ ಬಹಳ ಗಾಬರಿಯೂ ಆಶ್ಚರ್ಯವೂ ಉಂಟಾಗಿದ್ದುವು ಅಂತಹ ದೊಡ್ಡಮನುಷ್ಯನೊಡನೆ ಸಲಿಗೆಯಿಂದ ಮಾತನಾಡಿದುದಕ್ಕಾಗಿ ಕಾವಲುಗಾರನು ಭೀತಿಗೊಂಡಿದ್ದನು. ಅವನು ತನ್ನ ತಪ್ಪನ್ನು ಮುಚ್ಚಲೋಸುಗವೆಂಬಂತೆ ಬಾಗಿಲನ್ನು ಸರಸರನೆ ತೆಗೆದನು

ಹರನಾಥನು ವಿನಯಸಿಂಹನನ್ನು ನೋಡಿ, "ಮಹಾಸ್ವಾಮಿಯವರು ನನ್ನ ಕುದುರೆಯನ್ನು ತೆಗೆದುಕೊಂಡು ಹೋಗೋಣಾಗಲಿ" ಎಂದನು.

ವಿನಯಸಿಂಹನು, "ಬೇಡ ಹರನಾಥ! ನನ್ನ ಕುದುರೆಯಮೇಲೆಯೇ ನಾನು ಹೋಗುತ್ತೇನೆ. ಅದು ಸಮೀಪದಲ್ಲಿಯೇ ಇದೆ" ಎನ್ನುತ್ತ ಸುವರ್ಣದ ಶಿಳ್ಳೆಯೊಂದನ್ನು ತನ್ನ ಕಿಸೆಯಿಂದ ತೆಗೆದು ಗಟ್ಟಿಯಾಗಿ ಊದಿದನು. ಕೆಲವು ಕ್ಷಣಗಳಲ್ಲಿಯೇ ಸೇವಕನೊಬ್ಬನು ಕುದುರೆಯೊಂದರ ಮೇಲೆ ಕುಳಿತು ಮತ್ತೊಂದು ಕುದುರೆಯಕಡಿವಾಣವನ್ನು ಹಿಡಿದುಕೊಂಡು ಬಂದನು.

ವಿನಯಸಿಂಹನು ಅಶ್ವಾರೂಢನಾಗಿ ಕುಳಿತು ದಾರಿಯಲ್ಲಿ ಹೊರಟನು. ಸ್ವಲ್ಪದೂರ ಹೋಗುತ್ತಲೇ ಬಹಳ ಹಿಂದಿದ್ದ ಹರನಾಥನನ್ನು ಕರೆದನು. ಅವನು ಪಕ್ಕದಲ್ಲಿ ಕುದುರೆಯನ್ನು ಬಿಟ್ಟುಕೊಂಡು ಬರುತ್ತಲೇ, "ಹರನಾಥ! ನೀನು ನೋಡಲಿಲ್ಲವೆ? ಆ ಮೂರ್ಖರು ರಮಾನಾಥ ಉಮಾನಾಥರಿಬ್ಬರನ್ನೂ ಕೊಂದುಬಿಟ್ಟರು" ಎಂದನು.

ಹರನಾಥ:—ಮಹಾಪ್ರಭುಗಳೆ! ಅದೊಂದು ಶೋಚನೀಯವಿಚಾರ ನಿಜ. ತಾವು ಗವರ್ನರರಾಗಿ ಶಾಶ್ವತವಾಗಿ ನಿಲ್ಲಲು ಅವರಿಬ್ಬರೂ ಅಡಚಣೆ ಮಾಡುತ್ತಿದ್ದುದು ಮಾತ್ರ ಸತ್ಯವಾದರೆ ಅವರು ಮಡಿದುದೇ ಮೇಲೆಂದು ಭಾವಿಸುವೆನು.

ವಿನಯಸಿಂಹ :—ಈಗ ನಡೆದಿರುವ ಘಟನೆಗಳು ನಡೆಯದೆ ಇದ್ದಿದ್ದರೆ ಚೆನ್ನಾಗಿತ್ತು. ಆದರೆ ಈಗೇನೂ ಮಾಡುವಂತಿಲ್ಲ. ನಾವು ಕೊಲೆಯಲ್ಲಿ ಯಾವ ಭಾಗವನ್ನೂ ವಹಿಸಿಲ್ಲ. ನಡೆ, ನಮ್ಮ ಬಿಡಾರಕ್ಕೆ ಹೋಗೋಣ. ಎಲ್ಲ ವಿಷಯಗಳ ವಿಚಾರವಾಗಿಯೂ ಮಂತ್ರಿಗಳು ಅಲ್ಲಿಗೆ ವರದಿಯನ್ನು ಕಳುಹುವ ವೇಳೆಗೆ ನಾವು ಅಲ್ಲಿಗೆ ಹೋಗಿರಬೇಕು.

ಅಷ್ಟುಹೇಳಿ ವಿನಯಸಿಂಹನು ಕುದುರೆಯನ್ನು ಓ ಡಿ ಸು ತ್ತೆ, ತನ್ನಲ್ಲಿಯೇ, "ರಮಾನಾಥ ಉಮಾನಾಥರ ದುರ್ಗತಿಯ ವಿಷಯವನ್ನು ವಿಲಾಸನಗರಿಯ ದೊರೆಯು ಅರಿತರೆ ಅದೆಂತಹ ಸುಟ್ಟುಮೋರೆಯನ್ನು ಹಾಕಿಕೊಳ್ಳುವನೋ ನೋಡಬೇಕೆಂದಾಸೆಯಾಗಿದೆ" ಎಂದುಕೊಂಡನು

# ಪಂಚಮ ಪರಿಚ್ಛೇದ

## ಪುಷ್ಪಗಳನ್ನು ಬೆಳೆಯುವವನೂ ಅವನ ಪಕ್ಕದ ಮನೆಯವನೂ

ಪೂರ್ವಪರಿಚ್ಛೇದೋಕ್ತವಾದ ಘಟನೆಗಳು ನಡೆಯುತ್ತಿದ್ದ ಸಮಯ ದಲ್ಲಿ ಉಮಾನಾಥನ ಸೇವಕ ರಾಮವರ್ಮನು ಸುರನಗರಿಯ ಭೀಕರ ಕೃತ್ಯಗಳಾವುವನ್ನೂ ಅರಿಯದವನಾಗಿ ರತ್ನಗಿರಿಯ ಕಡೆಗೆ ಹೋಗು ತ್ತಿದ್ದನು. ಅವನು ಅಶ್ವಾರೂಢನಾಗಿ ಬೇಗ ಬೇಗನೆ ಮುಂದರಿಯುತ್ತ ಸುರನಗರಿಯನ್ನೂ ಅದರ ಸುತ್ತಮುತ್ತಲಿದ್ದ ಹಳ್ಳಿಗಳನ್ನೂ ದಾಟಿ ಹೋದೂ. ರತ್ನಗಿರಿಯು ಸಮೀಪಿಸುತ್ತಲೇ ಅವನು ಸಂದೇಹಕ್ಕಾಸ್ಪದ ವಿಲ್ಲದಿರಲೆಂದು ತನ್ನ ಸ್ನೇಹಿತನೊಬ್ಬನ ಬಳಿ ಕುದುರೆಯನ್ನು ಬಿಟ್ಟು ಪುರಪ್ರವೇಶಮಾಡಿದನು. ಬಳಿಕ ಸರಸರನೆ ಹೊರಟು ಕುಮುದಚಂದ್ರನಿದ್ದ ಮಹಡಿಯ ಮನೆಯ ಕಡೆಗೆ ನಡೆದನು. ಆ ಮನೆಯು ದೂರದಿಂದಲೇ ಬೆಳ್ಳಗೆ ಕಾಣಿಸುತ್ತಿತ್ತು. ಮನೆಯ ಮುಂಭಾಗದಲ್ಲಿ ಅನೇಕ ಮರ ಗಳಿದ್ದುವು. ವೃಕ್ಷಸಮೂಹಗಳ ಹಿಂದೆ ದಿವ್ಯವಾದ ಭವನವು ಪ್ರಕಾಶಿ ಸುತ್ತಿತ್ತು. ಆ ಮನೆಯಲ್ಲಿ ನಿಜವಾದ ಸೌಖ್ಯವನ್ನರಿತಿದ್ದ ಮಾನವ ನೊಬ್ಬನು ವಾಸಮಾಡುತ್ತಿದ್ದನು. ಅವನೇ ಕುಮುದಚಂದ್ರ—ನಮ್ಮ

ಕಥಾನಾಯಕ. ಅವನ ವಿಷಯವನ್ನೀಗ ವಿಶದವಾಗಿ ವಿವರಿಸುವೆವು.

ಕುಮುದಚಂದ್ರನಿಗೆ ಚಿಕ್ಕಂದಿನಿಂದಲೂ ರಮಾನಾಥನು ವಿದ್ಯಾವಿವೇಕಗಳನ್ನುಪದೇಶಿಸುತ್ತಿದ್ದನು. ಆದುದರಿಂದ ಅವನು ಕುಮುದಚಂದ್ರನನ್ನು ಸ್ವಂತಪುತ್ರನಿಗಿಂತ ಹೆಚ್ಚಾಗಿಯೇ ಪ್ರೀತಿಸುತ್ತಿದ್ದನು. ಕುಮುದಚಂದ್ರನೂ ರಮಾನಾಥನನ್ನು ಬಹಳವಾಗಿ ಪ್ರೀತಿಸುತ್ತಿದ್ದನು.

ಕುಮುದಚಂದ್ರನು ಹುಟ್ಟಿದಾಗಿನಿಂದಲೂ ಮೇಲೆ ಹೇಳಿದ ಭವನದಲ್ಲಿಯೇ ವಾಸಮಾಡುತ್ತಿದ್ದನು ಅವನ ತಂದೆಯೂ ಅವನ ತಾತನೂ ಅದೇಮನೆಯಲ್ಲಿ ಹುಟ್ಟಿಬೆಳೆದವರು ಅವರಿಬ್ಬರೂ ರತ್ನಗಿರಿಯ ವ್ಯಾಪಾರಿಗಳಲ್ಲಿ ಪ್ರಮುಖರಾಗಿದ್ದರು. ಅವರು ಅಪಾರವಾದ ಧನವನ್ನು ಗಳಿಸಿದ್ದರು.

ಕುಮುದಚಂದ್ರನ ತಂದೆಯು ಸುಮಾರು ಲಕ್ಷರೂಪಾಯಿಗಳನ್ನು ನಾಣ್ಯಗಳ ರೂಪದಲ್ಲಿಟ್ಟುಕೊಂಡಿದ್ದನು ತಂದೆಯು ಮೃತನಾದಮೇಲೆ ಕುಮುದಚಂದ್ರನು ಅವುಗಳನ್ನು ನೋಡಿದಾಗ ಅವಿನ್ನೂ ಹೊಸದಾಗಿ ಮಾಡಲ್ಪಟ್ಟವುಗಳಂತೆ ಕಂಡುಬರುತ್ತಿದ್ದುವು. ಕೆಲವು ನಾಣ್ಯಗಳಮೇಲೆ 1640ನೇ ಇಸವಿಯಿದ್ದಿತು. ಬೇರೆ ಕೆಲವು ನಾಣ್ಯಗಳ ಮೇಲೆ 1610ನೇ ಇಸವಿಯಿದ್ದಿತು. ಆದುದರಿಂದ ಆ ನಾಣ್ಯಗಳು ಕುಮುದಚಂದ್ರನ ತಂದೆಗೂ ತಾತನಿಗೂ ಸೇರಿದ್ದುವೆಂದು ಸುಲಭವಾಗಿ ಹೇಳಬಹುದಾಗಿದ್ದಿತು. ಈ ನಾಣ್ಯಗಳ ಜೊತೆಗೆ ಕುಮುದಚಂದ್ರನಿಗೆ ಅನೇಕ ಎಕರೆಗಳ ಜಮೀನು ದೊರೆತಿದ್ದಿತು. ಆ ಜಮೀನಿನಿಂದಲೇ ವರ್ಷಕ್ಕೊಂದುಬಾರಿ ಲಕ್ಷರೂಪಾಯಿಗಳ ಉತ್ಪತ್ತಿಯಾಗುತ್ತಿದ್ದಿತು. ಹೀಗಾಗಿ ಕುಮುದಚಂದ್ರನು ಬಹಳ ಧನಾಢ್ಯನಾಗಿದ್ದನು.

ಕುಮುದಚಂದ್ರನ ತಂದೆಯು ಸಾಯುವುದಕ್ಕೆ ಮೂರುತಿಂಗಳ ಹಿಂದೆಯೇ ಅವನ ಪತ್ನಿಯು ಪರಂಧಾಮವನ್ನೈದಿದಳು. ಸಂಸಾರಪಥದಲ್ಲಿ ತನ್ನ ಪತಿಗೆ ಮಾರ್ಗವನ್ನು ಸುಗಮಮಾಡಿದಂತೆಯೇ ಮೃತ್ಯುಮಾರ್ಗದಲ್ಲಿಯೂ ಸುಗಮಮಾಡಬೇಕೆಂದೆಣಿಸಿ ಆ ಪತಿವ್ರತೆಯು ಪತಿಗಿಂತ

ಮೊದಲೇ ಪರಲೋಕವನ್ನೈದಿದ್ದಳು. ಕುಮುದನ ತಂದೆಯು ಮಗನನ್ನು ಕಡೆಯ ಬಾರಿ ಅಪ್ಪಿಕೊಂಡಾಗ ಬುದ್ಧಿವಾದವನ್ನು ಹೇಳತೊಡಗಿದನು—"ಚೆನ್ನಾಗಿ ಊಟಮಾಡು, ಇತರರಿಗೆ ಊಟಕ್ಕಿಡು. ಹಣವನ್ನು ವ್ಯಯಮಾಡು. ಪ್ರಪಂಚವು ಹೇಗಿರುವುದೆಂಬುದನ್ನರಿಯಬೇಕಾದರೆ ಚೆನ್ನಾಗಿ ಹಣವ್ಯಯಮಾಡಬೇಕು ವ್ಯಾಪಾರಿಯಂತೆ ಕುರ್ಚಿಯ ಮೇಲೆ ಕುಳಿತರಾಗಲಿ, ವಿಜ್ಞಾನಿಯಂತೆ ಅನ್ವೇಷಣೆಯಲ್ಲಿ ಮಾತ್ರ ಇದ್ದರಾಗಲಿ ಪ್ರಪಂಚವನ್ನರಿಯಲಾಗುವುದಿಲ್ಲ ನೀನು ಸಾಯುವ ಸಮಯವೂ ಬರುವುದು ಆ ವೇಳೆಗೆ ನಿನಗೆ ಪುತ್ರನೊಬ್ಬನಿದ್ದರೆ ಸರಿ. ಇಲ್ಲವಾದರೆ ನನ್ನಲ್ಲಿರುವ ನಾಣ್ಯಗಳು ಅಪರಿಚಿತನೊಬ್ಬನ ಕೈಗೆ ಹೋಗುವುವು. ಅವುಗಳನ್ನು ನಾನು ನನ್ನ ತಂದೆ ಮತ್ತು ಆ ನಾಣ್ಯಗಳನ್ನು ಮಾಡಿದವನು ಇಷ್ಟು ಜನ ಮಾತ್ರ ಮುಟ್ಟಿದ್ದೇವೆ ಅವು ಅನ್ಯರ ಕೈಗೆ ಹೋದರೆ ಅವುಗಳಿಗೇ ಆಶ್ಚರ್ಯವಾಗುವುದು—ಒಂದು ವಿಷಯವನ್ನು ಮಾತ್ರ ಚೆನ್ನಾಗಿ ನೆನಪಿನಲ್ಲಿಡು ನಿನ್ನ ಗುರು ರಮಾನಾಥನಂತೆ ಮಾತ್ರ ರಾಜಕೀಯದಲ್ಲಿ ಎಂದಿಗೂ ಪ್ರವೇಶಿಸಬೇಡ ರಾಜಕೀಯ ವೃತ್ತಿಯಲ್ಲಿ ಒಳ್ಳೆಯದನ್ನೊಬ್ಬನು ಮಾಡಿದರೆ ಅವನಿಗೆ ಕೃತಜ್ಞತೆಯು ತೋರಿಸಲ್ಪಡುವುದೆಂದು ಎಂದಿಗೂ ತಿಳಿಯಬೇಡ. ರಮಾನಾಥನು ರಾಜಕೀಯದಲ್ಲಿ ಪ್ರವೇಶಿಸಿರುವುದರಿಂದ ಅನ್ಯಾಯವಾಗಿ ಅಕಾಲಮೃತ್ಯುವಿಗೀಡಾಗುವನು"

ಅಷ್ಟು ಬುದ್ಧಿವಾದವನ್ನು ಹೇಳಿ ಕುಮುದಚಂದ್ರನ ತಂದೆಯು ಪರಲೋಕವನ್ನೈದಿದನು ಕುಮುದಚಂದ್ರನಿಗೆ ಅತೀವ ದುಃಖವಾಯಿತು. ಏಕೆಂದರೆ ಅವನು ಹಣವನ್ನು ಸ್ವಲ್ಪವೂ ಪ್ರೀತಿಸುತ್ತಿರಲಿಲ್ಲ; ತಂದೆಯನ್ನು ಅತ್ಯಧಿಕವಾಗಿ ಪ್ರೀತಿಸುತ್ತಿದ್ದನು.

ಕುಮುದಚಂದ್ರನು ಆ ದೊಡ್ಡ ಮನೆಯಲ್ಲಿ ಒಬ್ಬಿಬ್ಬರು ಸೇವಕರೊಡನೆ ವಾಸಮಾಡತೊಡಗಿದನು. ರಮಾನಾಥನು ಅವನಿಗೆ ಸರ್ಕಾರದ ಕೆಲಸವೊಂದನ್ನು ಕೊಡಲೆತ್ನಿಸಿದನು. ಕುಮುದನು ಅದಕ್ಕೊಪ್ಪಲಿಲ್ಲ. ಪ್ರಖ್ಯಾತಿಯನ್ನು ಪಡೆಯಲು ರಮಾನಾಥನು ದಾರಿ ತೋರಿಸಿದಾಗಲೂ ಕುಮುದನು ಆ ಮಾರ್ಗವನ್ನು ದೂರೀಕರಿಸಿದನು. ಒಂದು ಬಾರಿ

ಕುಮುದನು ಹಡಗೊಂದರ ಮೇಲೆ ನಿಂತು ಯುದ್ಧವೊಂದನ್ನು ನೋಡಿ ಆ ದಿನದಿಂದ ಹಡಗಿಗೂ ರಮಾನಾಥನಿಗೂ ಪ್ರಖ್ಯಾತಿಗೂ ಒಟ್ಟಿಗೆ ನಮಸ್ಕಾರ ಮಾಡಿ ತನಗೆ ಸರ್ವಸೌಖ್ಯವನ್ನೀಯಬಲ್ಲ ಸ್ವಂತ ಮನೆಗೆ ಹಿಂತಿರುಗಿದನು.

ಅವನು ಸಸ್ಯವರ್ಗವನ್ನೂ ಪ್ರಾಣಿವರ್ಗವನ್ನೂ ಬಹಳ ಪ್ರೀತಿಸುತ್ತಿದ್ದನು. ಅವನು ಅವುಗಳ ಸಂಬಂಧವಾದ ಪುಸ್ತಕಗಳನ್ನು ಚೆನ್ನಾಗಿ ಓದತೊಡಗಿದನು. ಅವನು ರಾಜ್ಯದಲ್ಲಿದ್ದ ಮರಗಳನ್ನೂ ಗಿಡಬಳ್ಳಿಗಳನ್ನೂ ನೋಡಿ ಅವುಗಳ ವಿಷಯವಾಗಿ ಓದಿ, ಚರ್ಚಿಸಿ, ಕಡೆಗೆ ಅವುಗಳ ಮೇಲೊಂದು ಪುಸ್ತಕವನ್ನು ಪ್ರಕಟಿಸಿದನು. ಅದಕ್ಕಾಗಿ ಸ್ವಹಸ್ತದಿಂದ ಅನೇಕ ಚಿತ್ರಪಟಗಳನ್ನು ಬರೆದು ಪ್ರಕಟಿಸಿದನು. ಆದರೂ ಅವನಿಗೆ ಸಮಯ ವ್ಯಯಮಾಡುವುದೂ ಹಣ ವ್ಯಯಮಾಡುವುದೂ ಹೇಗೆನ್ನುವುದು ತಿಳಿಯದೆ ಹೋಯಿತು. ಅವನ ಹಣವಂತೂ ಬಡ್ಡಿಯೊಡನೆ ಸೇರಿ ಅಸಂಖ್ಯಾತವಾಗಿ ಬೆಳೆದುಹೋಗುತ್ತಿದ್ದಿತು. ಕಡೆಗವನು ಯೋಚಿಸಿ ಬಹಳ ಹಣ ವ್ಯಯದಿಂದ ಮಾತ್ರ ಸಾಧ್ಯವಾದ ಕೆಲಸವೊಂದನ್ನು ಪ್ರಾರಂಭಿಸಿದನು. ಆಗಿನ ಕಾಲದಲ್ಲಿ ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವುದು ಬಹಳವಾಗಿ ರತ್ನಗಿರಿಯಲ್ಲೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ ವಾಡಿಕೆಯಾಗಿತ್ತು. ಅವುಗಳನ್ನು ಬೆಳೆಸುವವರಿಗೆ ಅದೊಂದು ಗೌರವವೂ ಸಲ್ಲುತ್ತಿತ್ತು. ಆದರೆ ಹಣವು ಬಹಳವಾಗಿ ಆ ಕೆಲಸಕ್ಕೆ ಬೇಕಾಗುತ್ತಿದ್ದುದರಿಂದ ಕೆಲವರು ಮಾತ್ರ ಅದಕ್ಕೆ ಕೈಹಾಕುತ್ತಿದ್ದರು. ಆ ಪುಷ್ಪವನ್ನು ಜನರು ಬಹಳ ಪ್ರೀತಿಸುತ್ತಿದ್ದರಾಗಿ ಅದನ್ನು ಬೆಳೆಯುವವರ ಮೇಲೆ ಎಲ್ಲರಿಗೂ ವಿಶ್ವಾಸಗೌರವಗಳಿದ್ದುವು. ಕುಮುದಚಂದ್ರನು ಟ್ಯೂಲಿಪ್ ಪುಷ್ಪಗಳನ್ನು ಬೆಳೆಯತೊಡಗಿದನು.

ಕಾಲಾನುಕ್ರಮದಲ್ಲಿ ರತ್ನಗಿರಿಯವರೂ ಮತ್ತು ಸುತ್ತಮುತ್ತಲಿದ್ದವರೂ ಕುಮುದಚಂದ್ರನ ಹೂವುಗಳ ವಿಷಯವಾಗಿಯೇ ಮಾತನಾಡತೊಡಗಿದರು. ಎಲ್ಲರೂ ಅವನ ಮನೆಗೆ ಭೇಟಿಯಿತ್ತು, ಪುಷ್ಪಗಳನ್ನು ಬಿಡುವ ಗಿಡಗಳಿಗಾಗಿ ಅವನು ನಿರ್ಮಿಸಿದ್ದ ಸ್ಥಾನಗಳನ್ನೂ ಅವುಗಳ ಸುತ್ತಲೂ ನಿರ್ಮಿಸಿದ್ದ ಪಾತಿಗಳನ್ನೂ ಪುಷ್ಪ-ವೃಕ್ಷಗಳು ಹೆಚ್ಚು ಗಾಳಿ

ಯಲ್ಲಾಗಲಿ ಬಿಸಿಲಿನಲ್ಲಾಗಲಿ ಇಲ್ಲದಿರುವಂತೆ ಮಾಡುವುದಕ್ಕಾಗಿ ನಿರ್ಮಿಸಿದ್ದ ಕೊಟಡಿಗಳನ್ನೂ, ಸಸಿಗಳನ್ನಿಟ್ಟಿದ್ದ ಮೇಜುಗಳನ್ನೂ ನೋಡಿ ನೋಡಿ ಪ್ರಶಂಸಿಸತೊಡಗಿದರು. ಪ್ರಖ್ಯಾತ ಪುಸ್ತಕಭಂಡಾರಗಳನ್ನೂ ಆಟದ ಸ್ಥಳಗಳನ್ನೂ ದೇಶಾಂತರಗಳಿಂದ ಬಂದು ನೋಡಿಕೊಂಡು ಹೋಗುವಂತೆ ಜನರು ಕುಮುದಚಂದ್ರನ ಸಸ್ಯಗಳನ್ನು ನೋಡಿಕೊಂಡು ಹೋಗತೊಡಗಿದರು.

ಟ್ಯೂಲಿಪ್ ಪುಷ್ಪವು ಗಂಟೆಯಾಕಾರವಾಗಿರುವುದು. ಅನೇಕ ವರ್ಣಗಳಿಂದ ಕೂಡಿರುವುದು. ಕುಮುದಚಂದ್ರನು ಅವುಗಳ ಸಂಶೋಧನೆಯಲ್ಲಿ ನಿರತನಾಗಿ, ವರ್ಷದ ಉತ್ಪತ್ತಿಯನ್ನು ವ್ಯಯಮಾಡಿ, ನೂತನ ನಾಣ್ಯಗಳನ್ನೂ ಖರ್ಚುಮಾಡಿ, ಹೊಸ ಮಾದರಿಯ ಮೂರು ಪುಷ್ಪಗಳನ್ನು ಬೆಳೆದನು. ಒಂದಕ್ಕೆ, "ಸ್ವರ್ಣಲತಾ" ಎಂದು ಹೆಸರಿಟ್ಟನು. ಅದು ಅವನ ತಾಯಿಯ ಹೆಸರಾಗಿತ್ತು ಮತ್ತೊಂದಕ್ಕೆ ತನ್ನ ತಂದೆಯ ಹೆಸರಿಡಬೇಕೆಂದು ಇಚ್ಛಿಸಿ ಅದನ್ನು, "ಶ್ರೀಶಚಂದ್ರ"ನೆಂದು ಕರೆದನು. ಉಳಿದುದಕ್ಕೆ ತನ್ನ ಗುರುವಾದ "ರಮಾನಾಥ"ನ ಹೆಸರಿಟ್ಟನು. ಹೀಗೆಯೇ ಅವನು ಹೊಸ ಪುಷ್ಪಗಳನ್ನು ತಯಾರಿಸಿದಂತೆಲ್ಲಾ ತನ್ನ ಸಂಶೋಧನೆಯನ್ನು ಮುಂದುವರಿಸುತ್ತೆ ಹೊಸ ಹೆಸರುಗಳನ್ನವುಗಳಿಗೆ ಕೊಡತೊಡಗಿದನು. ಆ ಹೆಸರುಗಳನ್ನು ಆ ಕಾಲದಲ್ಲಿ ಪ್ರಕಟಿತವಾದ ಪುಷ್ಪಪಟ್ಟಿಯನ್ನು ನೋಡಿ ತಿಳಿಯುವುದೇ ಮೇಲು.

೧೬೭೨ನೇ ಇಸವಿಯು ಪ್ರಾರಂಭವಾದಾಗ ರಮಾನಾಥನು ರತ್ನಗಿರಿಯಲ್ಲಿ ಮೂರು ತಿಂಗಳು ವಾಸಮಾಡಲು ಅಲ್ಲಿದ್ದ ಸ್ವಗೃಹಕ್ಕೆ ಬಂದನು. ಅವನು ಅಲ್ಲಿಯೇ ಹುಟ್ಟಿ ಬೆಳೆದವನಾಗಿದ್ದನು. ಅಲ್ಲದೆ ಅವನ ವಂಶಜರು ಅಲ್ಲಿ ನೂರಾರು ವರ್ಷಗಳಿಂದ ವಾಸಮಾಡುತ್ತಿದ್ದರು.

ಅದೇ ಸಮಯದಲ್ಲಿ ರಮಾನಾಥನು ಜನಗಳಲ್ಲಿ ಕೆಟ್ಟ ಹೆಸರನ್ನು ಪಡೆಯತೊಡಗಿದ್ದುದು. ಅವನು ಸುರನಗರಿಯವರಿಗೆ ಎಷ್ಟು ಕೆಟ್ಟವನಾದರೂ ರತ್ನಗಿರಿಯವರಿಗೆ ಮಾತ್ರ ಪ್ರಶಂಸಾರ್ಹನಾಗಿಯೇ ಉಳಿದಿದ್ದನು. ಆದುದರಿಂದ ಅವನು ರತ್ನಗಿರಿಗೆ ಬರುತ್ತಲೇ ಜನರು ಅವನಿಗೆ ಪ್ರಶಸ್ತಪತ್ರಿಕೆಯೊಂದನ್ನು ಕೊಟ್ಟರು. ಅವನು ಜನರಿಗೆ ವಂದನೆಯನ್ನರ್ಪಿಸಿ

ತನ್ನ ವಂಶಜರ ಮನೆಗೆ ಹೊರಟುಹೋದನು. ಅಲ್ಲಿ ಮನೆಗೆ ನಡೆಯ ಬೇಕಾಗಿದ್ದ ಕಾಮಗಾರಿಯ ವಿಷಯವಾಗಿ ಆಜ್ಞೆಯಿತ್ತು ತನ್ನ ಸ್ವಂತ ಪುತ್ರನಂತಿದ್ದ ಕುಮುದಚಂದ್ರನ ಮನೆಯ ಕಡೆಗೆ ನಡೆದನು. ರತ್ನಗಿರಿಯಲ್ಲಿ ಅವನೊಬ್ಬನಿಗೆ ಮಾತ್ರ ರಮಾನಾಥನು ಬಂದುದು ತಿಳಿದಿರಲಿಲ್ಲವೆಂದು ತೋರುವುದು.

ರಮಾನಾಥನು ರಾಜಕೀಯದಲ್ಲಿ ಪ್ರವೇಶಿಸಿ ಕಾಲಾನುಕ್ರಮದಲ್ಲಿ ಜನರ ದ್ವೇಷವನ್ನು ಎಷ್ಟರ ಮಟ್ಟಿಗೆ ಸಂಪಾದಿಸಿದ್ದನೋ, ಅಷ್ಟರಮಟ್ಟಿಗೆ ಪುರಜನರ ಪ್ರೇಮವನ್ನು ರಾಜಕೀಯವನ್ನು ತ್ಯಜಿಸಿದುದರಿಂದ ಕುಮುದನು ಸಂಪಾದಿಸಿದ್ದನು. ಅವನು ಪುಷ್ಪಗಳನ್ನು ಬೆಳೆಯುವುದರಲ್ಲಿಯೇ ತನ್ನ ಕಾಲವೆಲ್ಲವನ್ನೂ ಕಳೆಯುತ್ತಿದ್ದುದರಿಂದ ಬೇರೆ ಕಾರ್ಯಗಳ ಕಡೆಗೆ ಗಮನವೀಯುವುದು ಅವನಿಗೆ ಸಾಧ್ಯವಿರಲಿಲ್ಲ.

ಕುಮುದಚಂದ್ರನನ್ನು ಅವನ ಸೇವಕರೂ ಅವನ ಕೆಲಸಗಾರರೂ ನಿಜವಾಗಿ ಪ್ರೀತಿಸುತ್ತಿದ್ದರು. ಈ ಪ್ರಪಂಚದಲ್ಲಿ ಯಾರೂ ಅವನನ್ನು ದ್ವೇಷಿಸುತ್ತಿರಲಿಲ್ಲವೆಂದೇ ಅವನ ನಂಬಿಕೆಯಾಗಿತ್ತು. ಆದರೂ—ಮಾನವ ಜಾತಿಗೇ ಲಜ್ಜೆಯನ್ನುಂಟುಮಾಡುವಂತೆ—ಅವನಿಗೆ ಮಹಾಭೀಕರನೂ ಕ್ರೂರಿಯೂ ಆದ ಶತ್ರುವೊಬ್ಬನಿದ್ದನು.

ಯಾವ ಸಮಯದಲ್ಲಿ ಕುಮುದಚಂದ್ರನು ತನ್ನ ಜಮೀನಿನ ವರ್ಷೋತ್ಪತ್ತಿಯನ್ನೂ ತನ್ನ ತಂದೆಯು ಶೇಖರಿಸಿದ್ದ ಹೊಸ ನಾಣ್ಯ ಗಳನ್ನೂ ಪುಷ್ಪಗಳಿಗಾಗಿ ಖರ್ಚು ಮಾಡತೊಡಗಿದ್ದನೋ ಅದೇ ಸಮಯ ದಲ್ಲಿ ಅವನ ನೆರೆಮನೆಯವನಾಗಿ ವಿಷಕಂಠನೆಂಬುವನೊಬ್ಬನು ವಾಸ ಮಾಡುತ್ತಿದ್ದನು. ಅವನಿಗೂ ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವ ಹುಚ್ಚು ಹಿಡಿದಿದ್ದಿತು. ಆ ಪುಷ್ಪದ ಹೆಸರನ್ನು ಹೇಳುತ್ತಲೇ ಅವನಿಗೆ ಅಪಾರವಾದ ಸಂತೋಷ ಉಂಟಾಗಿಬಿಡುತ್ತಿತ್ತು.

ವಿಷಕಂಠನಿಗೆ ಕುಮುದಚಂದ್ರನಿಗಿದ್ದಂತೆ ಧನಬಲವಿರಲಿಲ್ಲ. ಆದುದರಿಂದ ಅವನು ಬಹಳ ಜಾಗರೂಕತೆಯಿಂದ ತನ್ನ ಹಣವನ್ನು ವ್ಯಯ ಮಾಡುತ್ತ ತನ್ನ ಮನೆಯಲ್ಲಿಯೇ ತನ್ನ ಚಿಕ್ಕ ಉದ್ಯಾನವನ್ನು

ನಿರ್ಮಿಸಿ ಸಸ್ಯವರ್ಗದ ನಿಯಮಗಳನ್ನು ಅಕ್ಷರಶಃ ಪಾಲಿಸುತ್ತಿದ್ದನು. ಸಸ್ಯಗಳಿಗೆ ಎಷ್ಟು ಶಾಖವು ಅವಶ್ಯಕವೋ ಅಷ್ಟು ಮಾತ್ರ ದೊರಕುವಂತೆ ಎಲ್ಲವನ್ನೂ ವ್ಯವಸ್ಥೆ ಮಾಡಿದ್ದನು. ಉಷ್ಣಾಂಶದಲ್ಲಿ ಒಂದು ಡಿಗ್ರಿಯ ಇಪ್ಪತ್ತು ಭಾಗಗಳಲ್ಲೊಂದು ಭಾಗವು ವ್ಯತ್ಯಾಸವಾದರೂ ಅವನಿಗೆ ತಿಳಿದು ಹೋಗುತ್ತಿದ್ದಿತು. ಗಾಳಿಯ ವೇಗವನ್ನವನು ಕಂಡುಹಿಡಿದು ತನ್ನ ಗಿಡ ಬಳ್ಳಿಗಳ ಮೇಲೆ ಬೀಸುವ ಗಾಳಿಯ ವೇಗವನ್ನು ಇಚ್ಛಾನುಸಾರವಾಗಿ ಬದಲಾಯಿಸಿಬಿಡುತ್ತಿದ್ದನು ಪುಷ್ಪಗಳನ್ನು ಬೆಳೆಯುವವರನೇಕರು ವಿಷ ಕಂಠನ ಟ್ಯೂಲಿಪ್ ಪುಷ್ಪಗಳನ್ನು ನೋಡಿಕೊಂಡು ಹೋಗಲಾರಂಭಿಸಿದರು. ಅವನು ತನ್ನ ಹೆಸರಿನ ನೂತನ ಪುಷ್ಪವೊಂದನ್ನು ತಯಾರಿಸಲೆತ್ನಿಸಿ ಸ್ವಲ್ಪ ಮಟ್ಟಿಗೆ ಜಯವನ್ನೂ ಪಡೆದಿದ್ದನು ಅದನ್ನು ನೋಡಿ ಅನೇಕರು, "ಭಲೆ! ಇದೇನು ಚೆನ್ನಾಗಿಲ್ಲದೇ ಇಲ್ಲ!" ಎಂದು ಒಂದು ವಿಧವಾಗಿ ಪ್ರಶಂಸಿಸುತ್ತಿದ್ದರು.

ಇಂತಹ ಸಮಯದಲ್ಲಿ ಇದ್ದುದಿದ್ದಂತೆಯೇ ಕುಮುದಚಂದ್ರನು ತನ್ನ ಮನೆಯಲ್ಲಿ ಸ್ವಲ್ಪ ಬದಲಾವಣೆ ಮಾಡಿಬಿಟ್ಟನು. ಅಂಗಳದ ಕಡೆಗಿದ್ದ ಕೊಟಡಿಯ ಮೇಲೆ ಕುಮುದಚಂದ್ರನು ಮಹಡಿಯೊಂದನ್ನು ಕಟ್ಟಿದನು. ಅದರಿಂದ ವಿಷಕಂಠನ ಉದ್ಯಾನದ ಮೇಲೆ ಬೀಳುತ್ತಿದ್ದ ಬಿಸಿಲು ಕಡಮೆ ಯಾಗಿ ಹೋಯಿತು. ಅಲ್ಲದೆ ಗಾಳಿಯ ವೇಗವೂ ಅದರಿಂದ ಸ್ವಲ್ಪ ಮಾತ್ರ ಕಡಮೆಯಾಗಿ ವಿಷಕಂಠನ ಯೋಚನೆಗಳೂ ಕಾರ್ಯಕ್ರಮಗಳೂ ಕೆಟ್ಟುಹೋಗತೊಡಗಿದುವು. ಸಸ್ಯವರ್ಗದ ಬೆಳವಣಿಗೆಗೆ ಬಹಳ ಅಡಚಣೆ ಯುಂಟಾಗಿ ಹೋಯಿತು.

ಆದರೆ ವಿಷಕಂಠನು ಮೊದಲು ಮೊದಲು ಈ ದುರ್ಘಟನೆಯನ್ನು ಹೆಚ್ಚಾಗಿ ಗಮನಿಸಲಿಲ್ಲ. ನೆರೆಮನೆಯವನಾದ ಕುಮುದಚಂದ್ರನು ಚಿತ್ರ ಪಟಗಳನ್ನು ಮಾತ್ರ ಬರೆಯುವವನೆಂದೂ ಪ್ರಕೃತಿಯ ಅನುಪಮ ಸೌಂದರ್ಯವನ್ನು ಕಾಗದಗಳ ಮೇಲೆ ಪ್ರತಿಬಿಂಬಿಸಲೆತ್ನಿಸಿ ಅವನು ಆ ಸೌಂದರ್ಯವನ್ನೇ ಹಾಳುಮಾಡುವವನೆಂದೂ ಭಾವಿಸಿ, ವಿಷಕಂಠನು ನಿರಾತಂಕದಿಂದಿದ್ದನು. ಚಿತ್ರಗಾರನು ಹೆಚ್ಚು ಬೆಳಕಿನ ಆವಶ್ಯಕತೆಯಿಂದ

ಮಹಡಿಯೊಂದನ್ನು ಕಟ್ಟಿದ್ದನಲ್ಲವೆ? ಅದರಿಂದ ಅವನು ಮಾಡಿದುದು ಸರಿಯೇ. ವಿಷಕಂಠನು ಹೇಗೆ ಪುಷ್ಪಗಳನ್ನು ಬೆಳೆಯುವನೋ ಹಾಗೆ ಕುಮುದನು ಚಿತ್ರಗಾರನು ಅಷ್ಟೆ. ಚಿತ್ರಗಳಿಗಾಗಿ ಅರ್ಧ ಡಿಗ್ರಿಯಷ್ಟು ಉಷ್ಣಾಂಶವನ್ನು ಕುಮುದನು ನೆರೆಯವನ ಟ್ಯೂಲಿಪ್ ಪುಷ್ಪಗಳಿಂದ ತೆಗೆದುಕೊಂಡರೇನು?

ನ್ಯಾಯವು ಕುಮುದಚಂದ್ರನ ಕಡೆಗಿತ್ತು. ಆದುದರಿಂದ ವಿಷಕಂಠನು ಉಸಿರೆತ್ತುವಂತಿರಲಿಲ್ಲ. ಅದಲ್ಲದೆ ಹೊಸ ಮಹಡಿಯನ್ನು ನೋಡುತ್ತಲೇ ವಿಷಕಂಠನಿಗೆ ಸ್ವಲ್ಪ ಹೊಸ ವಿಷಯವೊಂದು ಸ್ಫೂರ್ತಿಯಾಗತೊಡಗಿತು. ಬಹಳ ಬಿಸಿಲು ಪುಷ್ಪಗಳಿಗೆ ಕೆಡಕನ್ನುಂಟುಮಾಡುವುದೆಂದೂ ಪ್ರಾತಃ ಕಾಲದ ಸಾಮಾನ್ಯವಾದ ಉಷ್ಣಾಂಶವು ಮಧ್ಯಾಹ್ನದ ಬಿಸಿಲಿನ ಬೇಗೆ ಗಿಂತಲೂ ಉತ್ತಮವಾದುದೆಂದೂ ಅವನಿಗೆ ಭಾವನೆಯಾಗತೊಡಗಿದುದು ಅದರಿಂದ ಅವನು ಕುಮುದಚಂದ್ರನಿಗೆ ಕೃತಜ್ಞತೆಯನ್ನು ಮನಸ್ಸಿನಲ್ಲಿಯೇ ಸೂಚಿಸಿ, ತನ್ನ ಪುಷ್ಪಗಳಿಗೆ ತಡಿಕೆಯೊಂದನ್ನು ಪುಕ್ಕಟೆಯಾಗಿ ಕೊಟ್ಟು ದಕ್ಕಾಗಿ ಅವನನ್ನು ಪ್ರಶಂಸಿಸತೊಡಗಿದನು. ವಿಷಕಂಠನ ನಿಜವಾದ ಮನೋಭಾವವು ಹೇಗಿದ್ದಿತೋ ನಾವು ಖಂಡಿತವಾಗಿ ಹೇಳಲಾರೆವು. ಆದರೆ ವೇದಾಂತವನ್ನು ಸಹಾಯಕ್ಕೆ ಕರೆದು, ಅವನು ಪ್ರಕೃತ ವಿನ್ಯಮಾನಗಳಿ ಗಾಗಿ ಬಹಳ ದುಃಖಿಸದೆ ಇದ್ದುದೇನೋ ನಿಜ.

ಆದರೆ—ಇದೇನು!—ಹೊಸ ಮಹಡಿಯ ಕಿಟಕಿಗಳಲ್ಲಿ ಟ್ಯೂಲಿಪ್ ಪುಷ್ಪಗಳ ಸಸಿಗಳೂ, ಪುಷ್ಪಕುಂಡಗಳಲ್ಲಿ ಕೆಲವು ಟ್ಯೂಲಿಪ್ ಪುಷ್ಪಗಳೂ ಕಂಡುಬರುತ್ತಿರುವುವಲ್ಲಾ! ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವವನ ಚರ್ಯೆಗಳೆಲ್ಲವೂ ಕುಮುದಚಂದ್ರನ ಮಹಡಿಯ ಮೇಲೆ ಕಂಡು ಬರುತ್ತಿರುವುವಲ್ಲಾ! ಪಾಪ! ವಿಷಕಂಠನು ನೋಡಿ ದಿಗ್ಭ್ರಾಂತನಾದನು! ಅನೇಕ ಸಸಿಗಳ ಹೆಸರುಗಳನ್ನು ತೋರಿಸುವ ಪಟ್ಟಿಗಳು ಕಿಟಕಿಯ ಮೂಲಕ ಕಂಡು ಬಂದುವು. ಹಾಗೆಯೇ ಬೀರುಗಳು, ಡ್ರಾಯರುಗಳು, ಮೇಜುಗಳು, ಗಾಳಿಯನ್ನು ಒಳಕ್ಕೆ ಬಿಟ್ಟರೂ ಮೂಷಕಾದಿಗಳನ್ನು ಬಿಡದ ಕಂಬಿಯ ಗ್ರೇಟಿಂಗುಗಳು, ಎಲ್ಲವೂ ಕಿಟಕಿಯ ಮೂಲಕ ಕಂಡು

ಬಂದುವು. ನೋಡಿ ಇದೇನೆಂದು ವಿಷಕಂಠನು ಯೋಚಿಸತೊಡಗಿದನು. ಹಾಗಾದರೆ ಕುಮುದಚಂದ್ರನು ಚಿತ್ರಕಾರನು ಮಾತ್ರ ಅಲ್ಲವೆ? ಚಿತ್ರಗಳನ್ನು ಬರೆಯುವ ಸಲುವಾಗಿ ಟ್ಯೂಲಿಪ್ ಪುಷ್ಪಗಳ ಸಲಕರಣೆಗಳನ್ನೇ ಕುಮುದನು ಎದುರಿಗಿಟ್ಟುಕೊಂಡಿರುವನೋ ಏನೋ ಬಲ್ಲವರಾರು? ಇಷ್ಟೆಲ್ಲವನ್ನೂ ಯೋಚಿಸಿ ವಿಷಕಂಠನು ಪ್ರಕೃತ ವಿಷಯವಾಗಿ ಪರೀಕ್ಷಿಸಿಯೇ ತೀರಬೇಕೆಂದು ನಿರ್ಧರಿಸಿ ಎರಡು ಮನೆಗಳಿಗೂ ಮಧ್ಯೆ ಇದ್ದ ಗೋಡೆಯ ಬಳಿ ಏಣಿಯೊಂದನ್ನು ನಿಲ್ಲಿಸಿ ತಾನೇ ಮೇಲೆ ಹೋಗಿ ನೋಡಿದನು. ಹಾಗೆ ನೋಡಿದ ಬಳಿಕ ಅವನಿಗೆ ಇನ್ನಾವ ಸಂಶಯವೂ ಉಳಿಯಲಿಲ್ಲ. ಕುಮುದಚಂದ್ರನ ಉದ್ಯಾನದಲ್ಲಿ ಮೊದಲಿದ್ದ ಗಿಡಬಳ್ಳಿಗಳಾವುವೂ ಇರಲಿಲ್ಲ. ಭೂಮಿಯು ಅನೇಕ ಭಾಗಗಳಾಗಿ ವಿಂಗಡಿಸಲ್ಪಟ್ಟಿದ್ದಿತು. ನದಿಯ ಮಣ್ಣು ಆ ಭಾಗಗಳ ಮಣ್ಣಿನಲ್ಲಿ ಮಿಶ್ರವಾಗಿದ್ದಿತು. (ಟ್ಯೂಲಿಪ್ ಪುಷ್ಪಗಳ ಬೆಳವಣಿಗೆಗೆ ಹಾಗೆ ಮಿಶ್ರಮಾಡುವುದು ಅತ್ಯುತ್ತಮವೆಂದು ವಿಷಕಂಠನು ಬಲ್ಲವನಾಗಿದ್ದನು.) ಈ ಭಾಗಗಳಲ್ಲಿನ ಮಣ್ಣನ್ನು ಅಲ್ಲಿಯೇ ನಿಲ್ಲಿಸಲು ಅಂಚು ಕಟ್ಟುಗಳು ನಿರ್ಮಿತವಾಗಿದ್ದುವು. ಮಧ್ಯಾಹ್ನದ ಬಿಸಿಲಿನ ತಾಪವನ್ನು ಕಡಮೆ ಮಾಡಿ ಮಹಡಿಯು ಈ ಭಾಗಗಳಿಗೆ ಸಹಾಯವನ್ನೆಸಗುತ್ತಿದ್ದಿತು. ಗಾಳಿಯು ಸರಿಯಾದ ದಿಕ್ಕಿನಿಂದ ಬರಲು ಅನುಕೂಲವಾಗಿದ್ದಿತು. ಸಮೀಪದಲ್ಲಿಯೇ ನೀರಿನ ಸರಬರಾಜು ಅಧಿಕವಾಗಿದ್ದಿತು. ಒಂದು ಮಾತಿನಲ್ಲಿ ಹೇಳುವುದಾದರೆ ಪುಷ್ಪಗಳ ಬೆಳವಣಿಗೆಗೆ ಬೇಕಾದ ಸಲಕರಣೆಗಳೂ ಸಹಾಯಗಳೂ ಹೇರಳವಾಗಿ ಉದ್ಯಾನದಲ್ಲಿ ನಿರ್ಮಿಸಲ್ಪಟ್ಟಿದ್ದುವೆಂದು ಹೇಳಿಬಿಡಬೇಕು. ನೋಡಿ ವಿಷಕಂಠನಿಗೆ ತಲೆ ತಿರುಗುವಂತಾಯಿತು. ಲಕ್ಷಾಂತರ ರೂಪಾಯಿಗಳುಳ್ಳವನು ಈ ಕೆಲಸಕ್ಕೆ ಪ್ರಾರಂಭಿಸಿದರೆ ಗತಿಯೇನು? ಯೋಚಿಸುತ್ತಿದ್ದಂತೆ ವಿಷಕಂಠನ ಹೃದಯವು ಡವಡವನೆ ಬಡಿಯತೊಡಗಿದುದು. ಅವನ ಕೈಕಾಲುಗಳು ಸೋತವು. ಅವನು ನಿರಾಶಾಪರವಶನಾಗಿ ಏಣಿಯಿಂದ ಉರುಳಿಬಿದ್ದನು!

ಹಾಗಾದರೆ ಒಂದು ಡಿಗ್ರಿಯಲ್ಲಿ ಇಪ್ಪತ್ತನೆಯ ಭಾಗವಷ್ಟು ಉಷ್ಣಾಂಶವನ್ನು ಕುಮುದಚಂದ್ರನು ಕದ್ದುದು ನಿಜವಾದ ಹೂಗಳಿ

ಗಾಗಿಯೇ? ಚಿತ್ರಕಲೆಯ ಹೂಗಳಿಗಾಗಿ ಅಲ್ಲವೆ? ಹಾಗಾದರೆ ಇಂತಹ ಉತ್ತಮ ಸಾಧನಗಳನ್ನಿಟ್ಟುಕೊಂಡು ಈ ಲಕ್ಷಾಧಿಕಾರಿಯು ತನ್ನ ಸಸಿಗಳ ಬೆಳವಣಿಗೆಗೆ ಅಣಿಮಾಡಿಕೊಳ್ಳುತ್ತಿದ್ದನೆ? ಮೊಳೆತ ಸಸಿಗಳನ್ನೂ ಮೊಳೆಯಲಿರುವ ಸಸಿಗಳನ್ನೂ—ಚೆನ್ನಾಗಿ ಗಾಳಿಯಾಡುವ ಕೊಟಡಿಯಲ್ಲಿಟ್ಟುಕೊಳ್ಳಲು ಈ ಹೊಸ ಮಹಡಿಯನ್ನು ಕಟ್ಟಿಸಿದನೆ? ತಾನು ಮಾತ್ರ ತನ್ನ ಸಸಿಗಳಿಗೆ ಸರಿಯಾದ ಗಾಳಿಯೂ ಶಾಖವೂ ಇರಲೆಂದು ಮಲಗುವ ಕೊಟಡಿಯನ್ನು ಅವುಗಳಿಗೆ ಬಿಟ್ಟು ಹಳೆಯ ಗುಹೆಯೊಂದರಲ್ಲಿ ಕಾಲಯಾಪನ ಮಾಡುತ್ತಿರಬೇಕೆ?

ಇಷ್ಟು ವಿಷಯಗಳ ಯೋಚನೆಗಳೂ ವಿಷಕಂಠನ ಮನಸ್ಸಿನಲ್ಲಿ ಉದ್ಭವಿಸಿದುವು. ಅವನ ಪ್ರತಿಸ್ಪರ್ಧಿಯು ರಾಜಕಾರಣಪಟುವಿನ ಶಿಷ್ಯನಾಗಿ ಬೇರೆ ಇದ್ದುದರಿಂದ ಅವನನ್ನೆದುರಿಸಿ ನಿಲ್ಲುವುದು ಮತ್ತೂ ಕಷ್ಟವಾಗುವುದೆಂದು ಅವನು ಹೆದರತೊಡಗಿದನು. ಕುಮುದನು ಮತ್ತೊಂದು ನೂತನ ಟ್ಯೂಲಿಪನ್ನು ಕಂಡು ಹಿಡಿದುಬಿಟ್ಟರೆ ಅದಕ್ಕೆ "ಉಮಾನಾಥ"ನ ಹೆಸರನ್ನಿಟ್ಟುಬಿಡಬಹುದೆಂದೂ ವಿಷಕಂಠನು ಯೋಚಿಸತೊಡಗಿದನು. ಇಷ್ಟು ಯೋಚನೆಗಳಿಂದ ಪ್ರಾಮಾಣಿಕ ವಿಷಕಂಠನ ಕಂಠವು ರುದ್ಧವಾಗುವ ಸಂಭವವೊದಗಿತು. ವಿಷಕಂಠನು ವಿದ್ಯಮಾನಗಳೆಲ್ಲವನ್ನೂ ಅರಿತು ರಾತ್ರಿಯಲ್ಲಿ ನಿದ್ರಿಸಲಾರದೆ ಹೊರಳಾಡತೊಡಗಿದನು. ಅಸೂಯೆಯಿಂದ ಅವನ ಹೃದಯವು ತುಂಬಿಹೋಗಿತ್ತು.

## ಷಷ್ಠ ಪರಿಚ್ಛೇದ

### ಪುಷ್ಪಗಳನ್ನು ಬೆಳೆಯುವವನ ಅಸೂಯೆ

ಕುಮುದಚಂದ್ರನ ಟ್ಯೂಲಿಪ್ ಪುಷ್ಪಗಳನ್ನು ನೋಡಿದಾಗಿನಿಂದ ವಿಷಕಂಠನ ಮನಸ್ಸು ಅಸ್ಥಿರವಾಗತೊಡಗಿತು. ಅವನಿಗೆ ತನ್ನ ಪುಷ್ಪಗಳ ಮೇಲಿನ ಪ್ರೇಮವು ಮಾಯವಾಗತೊಡಗಿತು. ಅವನಿಗೆ ಅಧಿಕವಾದ ಆತಂಕಗಳೆದುರಿಗೆ ಕಂಡುಬಂದುವು. ಕುಮುದಚಂದ್ರನಿಂದ ತನಗೆ

ಎಂತೆಂತಹ ಕಷ್ಟಗಳೊದಗಬಹುದೆನ್ನುವ ಯೋಚನೆಯಲ್ಲಿಯೇ ವಿಷಕಂಠನು ಸಮಯವನ್ನು ಕಳೆಯತೊಡಗಿದನು. ಹೀಗಾಗಿ ಅವನಿಗೆ ಉಲ್ಲಾಸಕರವಾಗಿದ್ದ ವೃತ್ತಿಯು ಸರ್ವದಾ ದುಃಖದಾಯಕವಾಗತೊಡಗಿತು.

ಕುಮುದಚಂದ್ರನು ಸ್ವಬುದ್ಧಿಯನ್ನು ಪುಷ್ಪರಚನೆಯಲ್ಲಿ ಉಪಯೋಗಿಸತೊಡಗುತ್ತಲೇ ನೂತನಪುಷ್ಪಗಳನ್ನು ಬೆಳೆಯತೊಡಗಿದನು. ಪುಷ್ಪಗಳ ಬಣ್ಣಗಳನ್ನು ಬದಲಾಯಿಸುವುದನ್ನೂ ಅವುಗಳ ಆಕಾರಗಳನ್ನು ಬೇರೆ ಮಾಡುವುದನ್ನೂ ನೂತನ ಜಾತಿಯ ಕುಸುಮಗಳನ್ನು ಸೃಷ್ಟಿಸುವುದನ್ನೂ ಇತರರಿಗಿಂತ ಚೆನ್ನಾಗಿ ತಿಳಿದುಕೊಳ್ಳತೊಡಗಿದನು. ಹೀಗಾಗಿ ಎಲ್ಲರ ಬಾಯಲ್ಲಿಯೂ ಕುಮುದಚಂದ್ರನೂ ಅವನ ಪುಷ್ಪಗಳೂ ಸರ್ವದಾ ಪ್ರತಿಷ್ಠಿತವಾಗತೊಡಗಿದುವು. ಎಲ್ಲರೂ ವಿಷಕಂಠನ ಹೆಸರನ್ನು ಮರೆಯತೊಡಗಿದರು. ಕುಮುದಚಂದ್ರನು ಸರ್ವದಾ ಸಸಿಗಳನ್ನು ನೆಡುವುದರಲ್ಲಿಯೂ, ಗಿಡಗಳನ್ನು ಬೆಳೆಯುವುದರಲ್ಲಿಯೂ, ಪುಷ್ಪಸಂಗ್ರಹ ಮಾಡುವುದರಲ್ಲಿಯೂ ನಿರತನಾಗಿದ್ದುದರಿಂದ ತನ್ನ ಪಕ್ಕದ ಮನೆಯಲ್ಲಿದ್ದವನ ಸಿಂಹಾಸನವನ್ನು ತಾನು ಅಪಹರಿಸಿದ ವಿಷಯವೇ ಅವನಿಗೆ ತಿಳಿಯಲಿಲ್ಲ.

ಕುಮುದಚಂದ್ರನು ತನ್ನ ಸಂಶೋಧನೆಗಳನ್ನು ಮುಂದುವರಿಸುತ್ತಿ ಎರಡು ವರ್ಷಗಳೊಳಗಾಗಿ ಅನೇಕ ನೂತನ ಪುಷ್ಪಗಳನ್ನು ಕಂಡುಹಿಡಿದನು. ಕುಮುದಚಂದ್ರನು ಪುಷ್ಪಕ್ಷೇತ್ರಗಳ ಅಂಚಿನಲ್ಲಿ ಕುಳಿತು ನಿಷ್ಪ್ರಯೋಜಕವಾಗಬಹುದಾದ ಚಿಕ್ಕ ಸಸ್ಯವರ್ಗಗಳನ್ನು ಕಿತ್ತುಹಾಕುತ್ತ್ತೆ, ಸರಿಯಾಗಿ ಬೆಳೆಯುತ್ತಿರುವ ಸಸಿಗಳಿಗೆ ಸರಿಯಾದ ಗೊಬ್ಬರವನ್ನು ಹಾಕುತ್ತೆ, ಕ್ಷೇತ್ರಗಳಿಗೆ ನೀರು ಹಾಕುತ್ತೆ, ಸಸಿಗಳು ಬಿಟ್ಟದ್ದ ಕುಸುಮಗಳನ್ನು ಪರೀಕ್ಷಿಸುತ್ತೆ ಕಾಲ ಕಳೆಯುತ್ತಿದ್ದ ಸಮಯದಲ್ಲಿ ವಿಷಕಂಠನು ಗಿಡವೊಂದರ ಮರೆಯಲ್ಲಿ ನಿಂತು ತನ್ನ ಶತ್ರುವಿನ ಕೆಲಸಗಳೆಲ್ಲವನ್ನೂ ನಟ್ಟದೃಷ್ಟಿಯಿಂದ ನೋಡುತ್ತಿದ್ದನು. ನೋಡುತ್ತಿರುವಾಗ ಅವನ ಕಣ್ಣು ಹೊರಕ್ಕೆ ಬಂದು ಬಿಡುವಂತೆ ಕಾಣಿಸುವುದು ಅವನ ಬಾಯಲ್ಲಿ ಬುರುಗುಂಟಾಗಿಬಿಡುವುದು. ಕುಮುದನು ಪರೀಕ್ಷಿಸುವ ಸಮಯದಲ್ಲಿ

ಸ್ವಲ್ಪ ಸಂತೋಷದಿಂದ ಕಿರುನಗೆಯನ್ನು ತೋರುತ್ತಿದ್ದರೆ ವಿಷಕಂಠನು ಅವನನ್ನು ಮೆಲ್ಲನೆ ಬೈಯುತ್ತ ವಿಷವನ್ನು ಕಾರುತ್ತಿದ್ದನು. ಈ ವಿಷ ವಾತಾವರಣದಲ್ಲಿ ಆ ನಿರಪರಾಧಿಕುಸುಮಗಳು ಬಾಡಿಹೋಗದಿದ್ದುದು ಆಶ್ಚರ್ಯವೇ ಸರಿ!

ಯಾವನ ಮನಸ್ಸು ಕೆಟ್ಟ ಜೀವನದ ಕಡೆಗೆ ನಡೆಯುವುದೋ ಅವನು ಕ್ರಮೇಣ ಅಧಃಪಾತಾಳಕ್ಕಿಳಿದುಹೋಗತೊಡಗುವನು ವಿಷಕಂಠನಿಗೆ ಕುಮುದಚಂದ್ರನನ್ನು ನೋಡುವುದರಿಂದ ತೃಪ್ತಿಯಾಗಲಿಲ್ಲ ಅವನು ಕುಮುದನ ಪುಷ್ಪಗಳನ್ನೂ ನೋಡಲಾಶಿಸಿದನು. ಅವನೂ ಕಲೋಪಾಸಕ ನಷ್ಟೆ. ತನ್ನ ಪ್ರತಿಸ್ಪರ್ಧಿಯ ಉತ್ತಮಕೃತಿಗಳನ್ನು ನೋಡಲಾಸೆ ಪಟ್ಟನು ಅದಕ್ಕಾಗಿ ಅವನು ದೂರದರ್ಶಕಯಂತ್ರವೊಂದನ್ನು ಕೊಂಡು ಕೊಂಡನು. ಆ ದುರ್ಬೀನಿನ ಸಹಾಯದಿಂದ ಕುಮುದನ ಪುಷ್ಪಗಳನ್ನು ಮೊದಲಿನಿಂದಲೂ ನೋಡತೊಡಗಿದನು ಬೀಜವನ್ನು ನೆಟ್ಟಮೇಲೆ ಹೊರಡುವ ಎಲೆಯಿಂದ ಮೊದಲ್ಗೊಂಡು ಹೂಬಟ್ಟಲಿನಲ್ಲಿ ಪ್ರಕಾಶಿಸುವ ಕುಸುಮದಳಗಳವರೆಗೂ ಪರೀಕ್ಷಿಸತೊಡಗಿದನು. ಕುಮುದನ ಹೂಗಳು ಆ ಅಸೂಯಾಪರನ ಕಣ್ಣುಗಳನ್ನು ತಮ್ಮ ಕಾಂತಿಯಿಂದ ಕುಕ್ಕುತ್ತಿದ್ದುವು. ಅವುಗಳ ಪೂರ್ಣಪ್ರಕಾಶದಿಂದ ವಿಷಕಂಠನ ಕಂಠವು ಗದ್ಗದ ವಾಗುತ್ತಿದ್ದಿತು

ಮೊದಲು ಮೊದಲು ಅವನು ಹೂಗಳನ್ನು ನೋಡಿ ಆಶ್ಚರ್ಯ ಪಡುತ್ತಿದ್ದನು. ಬರುಬರುತ್ತ ಅಸೂಯೆಯು ಅವನನ್ನು ದಹಿಸ ಲಾರಂಭಿಸಿತು. ಅವನ ಹೃದಯದಲ್ಲಿ ಅನೇಕ ಯೋಚನೆಗಳುತ್ಪನ್ನ ವಾಗುತ್ತಿದ್ದುವು. ಒಂದೊಂದು ಬಾರಿ ತಾನು ಕುಳಿತ ಸ್ಥಳದಿಂದ ಹಾರಿ ಕುಮುದನ ಸಸಿಗಳನ್ನೂ ಗಿಡಗಳನ್ನೂ ಚೂರು ಚೂರು ಮಾಡಬೇಕೆಂದು ಅವನಿಗೆ ಆಸೆಯಾಗುತ್ತಿದ್ದಿತು. ಒಂದುವೇಳೆ ಕುಸುಮಗಳ ಮೇಲಲ್ಲದಿದ್ದರೆ ಅವುಗಳೊಡೆಯನ ಮೇಲೆಯೇ ಸೇಡು ತೀರಿಸಿಕೊಳ್ಳಬೇಕೆಂದವನಿಗೆ ತೋರುತ್ತಿದ್ದಿತು!

ಪುಷ್ಪಗಳನ್ನು ಬೆಳೆಯುವವನಿಗೆ ಪುಷ್ಪಗಳನ್ನು ಕೊಲ್ಲುವುದು

ಪಾಪಕರವೆಂದು ತೋರಿಬರುವುದು. ಆದರೆ ಮನುಷ್ಯನನ್ನು ಕೊಲ್ಲುವುದೇನೋ ಅಂತಹ ಪಾಪಕಾರ್ಯವೆಂದವನಿಗೆ ತೋರುವುದಿಲ್ಲ!

ಕುಮುದಚಂದ್ರನು ದಿನೇ ದಿನೇ ತನ್ನ ಕಾರ್ಯದಲ್ಲಿ ಅಭೂತಪೂರ್ವವಾದ ಜಯವನ್ನು ಗಳಿಸತೊಡಗಿದನು. ವಿಷಕಂಠನಿಗೆ ಅದನ್ನು ನೋಡಿ ಅಸೂಯೆಯು ವೃದ್ಧಿಯಾಗತೊಡಗಿತು. ಹೂಗಿಡಗಳ ಮೇಲೆ ಕಲ್ಲುಗಳನ್ನೂ ಕಟ್ಟಿಗೆಗಳ ಚೂರುಗಳನ್ನೂ ಎಸೆದುಬಿಡಬೇಕೆಂದವನಿಗೆ ತೋರತೊಡಗಿತು ಆದರೆ ನ್ಯಾಯಾಸ್ಥಾನದಲ್ಲಿ ತನಗೆ ಶಿಕ್ಷೆಯಾಗಬಹುದೆಂಬ ಭೀತಿಯಿಂದಲೂ, ಪುಷ್ಪಗಳನ್ನು ಬೆಳೆಯುವವರು ಜೈಯಲಾರಂಭಿಸಬಹುದೆಂಬ ಶಂಕೆಯಿಂದಲೂ ಅವನು ಸ್ವಲ್ಪ ಹಿಂತೆಗೆದನು. ಈ ಕಾರ್ಯವನ್ನು ಉಪಾಯಾಂತರದಿಂದ ನೆರವೇರಿಸಬೇಕೆಂದವನು ಯೋಚಿಸತೊಡಗಿದನು ಬಹಳ ದಿನಗಳವರೆಗೆ ಯೋಚಿಸಿದಬಳಿಕ ಯೋಚನೆಯೊಂದು ಅವನಿಗೆ ಹೊಳೆಯಿತು

ಒಂದು ದಿನ ರಾತ್ರಿ ವಿಷಕಂಠನು ಎರಡು ಬೆಕ್ಕುಗಳನ್ನು ತಂದು ಒಂದರ ಹಿಂಗಾಲಿಗೆ ಮತ್ತೊಂದರ ಹಿಂಗಾಲನ್ನು ಆರಡಿಯುದ್ದದ ದಾರವೊಂದರಿಂದ ಕಟ್ಟಿದನು ಬಳಿಕ ಗೋಡೆಯ ಮೇಲಿನಿಂದ ಅವುಗಳನ್ನು ಕುಮುದನ ಉದ್ಯಾನಕ್ಕೆ ಬಿಸುಟನು ಅವು ಪುಷ್ಪಭೂಮಿಗಳ ಮೇಲೆ ಬಿದ್ದುವು ಅಲ್ಲಿ "ರಮಾನಾಥ" ಪುಷ್ಪವೂ, "ಶ್ರೀಶಚಂದ್ರ" ಕುಸುಮವೂ, "ಸ್ವರ್ಣಲತಾ" ಕುಸುಮವೂ, ಈಚೆಗೆ ಕಂಡುಹಿಡಿಯಲ್ಪಟ್ಟಿದ್ದ ಒಂದೆರಡು ಹೂಗಳೂ, ಇನ್ನೂ ಅನೇಕ ಪುಷ್ಪಗಳೂ ರಾಜಠೀವಿಯಲ್ಲಿ ಮೆರೆಯುತ್ತಿದ್ದುವು. ಬೆಕ್ಕುಗಳಲ್ಲಿ ಒಂದೊಂದು ಒಂದೊಂದು ದಿಕ್ಕಿಗೆ ಎಳೆಯತೊಡಗಿತು. ದಾರವು ಅವುಗಳನ್ನು ಬಿಡದೆ ಬಂಧನದಲ್ಲಿಡತೊಡಗಿತು. ಮಾರ್ಜಾಲಗಳು ಹೃದಯವು ಕರಗುವಂತೆ ಮಿಯಾವ್ ಧ್ವನಿಮಾಡುತ್ತಿ ಈಕಡೆಯಿಂದ ಆಕಡೆಗೂ ಆಕಡೆಯಿಂದ ಈಕಡೆಗೂ ಎಳೆದಾಡತೊಡಗಿದುವು. ದಾರವು ಹೂಗಳ ಮೇಲೆ ಎಳೆಯಲ್ಪಟ್ಟಿತು ಕಾಲುಗಂಟೆಯವರೆಗೆ ಬೆಕ್ಕುಗಳು ಎಳೆದಾಡುತ್ತಿದ್ದು, ಕಡೆಗೆ ದಾರವು ಕತ್ತರಿಸಲ್ಪಟ್ಟಿತಾಗಿ ಯುದ್ಧಭೂಮಿಯಿಂದ ಪಲಾಯನಮಾಡಿದುವು.

ವಿಷಕಂಠನು ಮರದ ಹಿಂದೆ ನಿಂತಿದ್ದನು. ಕತ್ತಲೆಯಾಗಿದ್ದುದರಿಂದ ಆವುದನ್ನೂ ಅವನು ಸ್ಪಷ್ಟವಾಗಿ ನೋಡಲಾಗಲಿಲ್ಲ. ಮಾರ್ಜಾಲಗಳ ಹೃದಯವಿದ್ರಾವಕಕೂಗುಗಳು ಅರ್ಥಗರ್ಭಿತವಾಗಿದ್ದುವು. ಅವುಗಳನ್ನು ಕೇಳಿ ವಿಷಕಂಠನ ಹೃದಯುವು ಸಂತೋಷದಿಂದ ಡವಡವನೆ ಬಡಿಯ ತ್ತೊಡಗಿತು.

ನೆರೆಮನೆಯವನಿಗೆ ತಾನುಂಟುಮಾಡಿದ್ದ ನಷ್ಟವನ್ನರಿಯಬೇಕೆಂದು ವಿಷಕಂಠನು ರಾತ್ರಿಯಲ್ಲಿ ಮರದ ಹಿಂದೆಯೇ ಕಾಲ ಕಳೆದನು. ಪ್ರಾತಃಕಾಲ ವಾಗುತ್ತಲೇ ಬೆಕ್ಕುಗಳು ಮಾಡಿದ್ದ ನಷ್ಟವನ್ನು ಕಣ್ಣಾರೆ ನೋಡಿಬಿಡ ಬೇಕೆಂದು ಅವನು ಆತುರಪಡುತ್ತಿದ್ದನು. ಪ್ರಾತಃಕಾಲದ ಸಮಯದಲ್ಲಿ ಚಳಿಯು ಅವನ ದೇಹವನ್ನು ನಡುಗಿಸತೊಡಗಿತು ಆದರೂ ಅವನು ಕದಲಲಿಲ್ಲ. ಶತ್ರುಪರಾಭವವನ್ನು ನೋಡಿದರೆ ಸಾಕೆಂದು ಅವನು ತನ್ನ ಶರೀರದ ಕಷ್ಟಗಳನ್ನು ಗಣನೆಗೇ ತರಲಿಲ್ಲ.

ಪ್ರಾತಃಕಾಲವಾಗುತ್ತಲೇ ಕುಮುದಚಂದ್ರನು ಪುಷ್ಪಕ್ಷೇತ್ರಗಳನ್ನು ನೋಡಲು ಬಂದನು. ಇದ್ದುದಿದ್ದಂತೆಯೇ ಕ್ಷೇತ್ರಗಳ ಮೇಲೆ ಗುಣಿಗಳೂ ಅಲ್ಲಲ್ಲಿ ಮಣ್ಣಿನ ರಾಶಿಗಳೂ ಕಂಡುಬಂದುವು. ಹಿಂದಿನ ದಿನ ಸಾಯಂಕಾಲ ಕ್ಷೇತ್ರಗಳು ಕನ್ನಡಿಯಂತೆ ನುಣುಪಾಗಿದ್ದುವು. ಕುಮುದಚಂದ್ರನಿಗೆ ಗಾಬರಿಯಾಯಿತು. ಸಾಲುಸಾಲಾಗಿದ್ದ ಪುಷ್ಪಗಳು ಅಡ್ಡಾದಿಡ್ಡಿ ಯಾಗಿದ್ದುವು. ಸಾಲು ಸಾಲಾಗಿ ನಡೆದು ಹೋಗುತ್ತಿದ್ದ ಸೈನ್ಯದ ಮೇಲೆ ಬಾಂಬು ಸಿಡಿದಂತಾಗಿಬಿಟ್ಟಿದ್ದಿತು.

ಕುಮುದಚಂದ್ರನು ಶುಷ್ಕವದನದಿಂದೋಡಿದನು.

ವಿಷಕಂಠನು ಅದನ್ನು ನೋಡಿ ಸಂತೋಷಭರಿತನಾದನು. ಹದಿನೈದು ಇಪ್ಪತ್ತು ಟ್ಯೂಲಿಪ್ ಪುಷ್ಪಗಳು ಹರಿದುಹೋಗಿ ತುಳಿಯ ಲ್ಪಟ್ಟಿದ್ದುವು. ಅವು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಕೆಲವು ಗಿಡಗಳು ಬಗ್ಗಿಹೋಗಿದ್ದುವು. ಕೆಲವು ಪೂರ್ತಿಯಾಗಿ ಮುರಿದುಹೋಗಿ ಆಗಲೇ ಬಾಡಿಹೋಗತೊಡಗಿದ್ದುವು. ಸಸಿಗಳಿಂದ ರಸವು ಹರಿದು ಹೋಗುತ್ತಿತ್ತು. ನೋಡಿ ಕುಮುದನಿಗೆ ಬಹಳ ದುಃಖವಾಯಿತು. ಆ ಸಸ್ಯರಸವು ಪುನರು

ಜ್ಜೀವಿತವಾಗಲು ತನ್ನ ಸ್ವಂತ ರಕ್ತವನ್ನು ಕೊಡಲು ಕೂಡ ಅವನು ಸಿದ್ಧನಾಗಿದ್ದನು!

ಆದರೆ ಇದೇನು! ಕುಮುದನಿಗೆ ಎಂತಹ ಸಂತೋಷ! ವಿಷಕಂಠನಿಗೆ ಎಂತಹ ನಿರಾಶೆ! ವಿಷಕಂಠನು ಯಾವ ನಾಲ್ಕು ಟ್ಯೂಲಿಪ್ ಪುಷ್ಪಗಳನ್ನು ನಾಶಮಾಡಲೆತ್ನಿಸಿದನೋ ಅವು ಗರ್ವಿತಕಂಠಗಳನ್ನೆತ್ತಿಕೊಂಡು ನೋಡು ತ್ತಲೇ ಇದ್ದುವು. ತಮ್ಮ ಮಿತ್ರರು ಮೃತರಾದುದಕ್ಕಾಗಿ ಅವುಗಳು ಸ್ವಲ್ಪವೂ ಯೋಚಿಸಿದಂತೆ ಕಂಡುಬರುತ್ತಿರಲಿಲ್ಲ ಕುಮುದಚಂದ್ರನು ಅವನ್ನು ನೋಡಿ ಸಮಾಧಾನಚಿತ್ತನಾದನು. ಆದರೆ ಸಸ್ಯವರ್ಗದ ಖೂನಿಕಾರನಿಗೆ ಕೋಪವೂ ನಿರಾಶೆಯೂ ಮಿತಿಮೀರಿದುವು ಅವನು ತನ್ನ ಕೆಟ್ಟ ಕಾರ್ಯವು ವಿಫಲವಾದುದಕ್ಕಾಗಿ ತನ್ನ ಕೂದಲನ್ನು ಕೀಳುತ್ತಿ ವ್ಯಥೆಪಡತೊಡಗಿದನು!

ಕುಮುದಚಂದ್ರನಿಗೆ ಹೀಗಾದುದರ ಕಾರಣವು ತಿಳಿಯಲಿಲ್ಲ. ಹೆಚ್ಚು ನಷ್ಟವೇನೂ ಸಂಭವಿಸದಿದ್ದುದಕ್ಕಾಗಿ ಅವನು ಸಂತೋಷಪಟ್ಟುಕೊಂಡರೂ ಪುನಃ ಇಂತಹ ಕಾರ್ಯವು ನಡೆಯದಿರಲು ಪ್ರಯತ್ನಪಡಬೇಕೆಂದವನು ಹೇಳಿಕೊಂಡನು. ಅವನು ವಿಚಾರಿಸಿದುದರಲ್ಲಿ ಬೆಕ್ಕುಗಳು ರಾತ್ರಿಯಲ್ಲಿ ಗಲಾಟೆಮಾಡುತ್ತಿದ್ದುವೆಂದು ತಿಳಿಯಬಂದಿತು ಅಲ್ಲದೆ ಬೆಕ್ಕುಗಳ ಹೆಜ್ಜೆಗಳ ಗುರುತುಗಳೂ ಅವುಗಳ ಕೂದಲೂ ಯುದ್ಧಭೂಮಿಯಲ್ಲಿ ಕಂಡು ಬಂದುವು. ಆದುದರಿಂದ ಮುಂದೆ ಇಂತಹ ದುರ್ಘಟನೆಗಳು ನಡೆಯ ದಿರಲೆಂದವನು ರಾತ್ರಿಯಲ್ಲಿ ಕಾಯಲೋಸುಗ ಸೇವಕನೊಬ್ಬನನ್ನು ಅದೇ ದಿನವೇ ಗೊತ್ತುಮಾಡಿದನು.

ಕುಮುದಚಂದ್ರನು ಆಜ್ಞೆ ಮಾಡಿದುದನ್ನು ವಿಷಕಂಠನು ಕೇಳಿದನು. ಸೇವಕನು ಅದೇ ದಿನವೇ ಸಿದ್ಧನಾದನು. ತನ್ನ ಮೇಲೆ ಸಂಶಯ ವುಂಟಾಗಲಿಲ್ಲವೆಂದು ವಿಷಕಂಠನು ಹಿಗ್ಗಿದನು. ಸಮಯವರಿತು ಶತ್ರುವಿಗೆ ಮತ್ತಷ್ಟು ಕೆಡಕನ್ನುಂಟುಮಾಡಬೇಕೆಂದು ನಿರ್ಧರಿಸಿ ಸಮಯವನ್ನು ಕಾಯುತ್ತಿದ್ದನು.

ಆ ಸಮಯದಲ್ಲಿ ರತ್ನಗಿರಿಗೆ ಸ್ವಲ್ಪ ದೂರದಲ್ಲಿದ್ದ ಕಲ್ಯಾಣ ನಗರಿಯ ಟ್ಯೂಲಿಪ್ ಸಂಘದವರು ಕೃಷ್ಣವರ್ಣದ ಟ್ಯೂಲಿಪನ್ನು ಬೆಳೆದವರಿಗೆ ಒಂದು

ಲಕ್ಷ ರೂಪಾಯಿಗಳ ಬಹುಮಾನವನ್ನು ಕೊಡುವುದಾಗಿ ಪ್ರಕಟಿಸಿದರು. ಬೇರೆ ಯಾವ ಬಣ್ಣದ ಸೋಂಕೂ ಇಲ್ಲದಂತೆ ಕರಿಯ ಟ್ಯೂಲಿಪನ್ನು ಇದುವರೆಗೆ ಯಾರೂ ತಯಾರಿಸಿರಲಿಲ್ಲ. ಹಾಗೆ ತಯಾರಿಸುವುದು ಸಾಧ್ಯವೆಂದಾರೂ ನಂಬಿರಲಿಲ್ಲ ಆದುದರಿಂದ ಸಂಘದವರು ಒಂದು ಲಕ್ಷರೂಪಾಯಿಗಳ ಬದಲು ಹತ್ತುಲಕ್ಷ ರೂಪಾಯಿಗಳ ಬಹುಮಾನವನ್ನು ಕೊಡುವುದಾಗಿ ಹೇಳಿದ್ದರೂ ಅವರಿಗೇನೂ ನಷ್ಟವುಂಟಾಗುತ್ತಿರಲಿಲ್ಲವೆಂದು ಎಲ್ಲರೂ ಹೇಳತೊಡಗಿದರು ಆ ಬಹುಮಾನವನ್ನು ಗೆಲ್ಲಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲವೆಂದು ಎಲ್ಲರೂ ಹೇಳತೊಡಗಿದರು

ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುತ್ತಿದ್ದವರಿಗೆಲ್ಲರಿಗೂ ಈ ಬಹುಮಾನದ ವಿಷಯವನ್ನು ಕೇಳುತ್ತಲೇ ಅತೀವ ಕೌತುಕವುಂಟಾಯಿತು. ಎಲ್ಲರೂಕರಿಯ ಟ್ಯೂಲಿಪನ್ನು ತಯಾರಿಸಲು ಪ್ರಯತ್ನಪಡತೊಡಗಿದರು ಕಪ್ಪುಹಂಸವನ್ನೂ ಬಿಳಿಯ ಕಾಗೆಯನ್ನೂ ಕಂಡುಹಿಡಿಯುವುದು ಹೇಗೆ ಅಸಾಧ್ಯವೋ ಹಾಗೆಯೇ ಕೃಷ್ಣವರ್ಣದ ಟ್ಯೂಲಿಪನ್ನು ತಯಾರಿಸುವುದು ಅಸಾಧ್ಯವೆಂದು ತಿಳಿದಿದ್ದರೂ ಜನರು ಪ್ರಯತ್ನಪಡುವುದನ್ನು ಮಾತ್ರ ಡಬಿಲಿಲ್ಲ.

ಎಲ್ಲರಂತೆಯೇ ಕುಮುದಚಂದ್ರನೂ ಪುಷ್ಪವನ್ನು ತಯಾರಿಸ ಲೆತ್ನಿಸಿದನು. ವಿಷಕಂಠನೂ ಬಹುಮಾನದ ಆಸೆಯನ್ನು ಅಡಗಿಸಲಾರ ದವನಾಗಿ ಪುಷ್ಪವನ್ನು ತಯಾರಿಸಲು ಪ್ರಯತ್ನಪಡತೊಡಗಿವನು ಕುಮುದಚಂದ್ರನು ಪ್ರಯತ್ನ ಮಾಡಲಾರಂಭಿಸಿದುದೇ ತಡ ಅವನು ತನ್ನ ಬುದ್ಧಿಯೆಲ್ಲವನ್ನೂ ಉಪಯೋಗಿಸುತ್ತೆ ತಾನು ತಯಾರಿಸಿದ್ದ ಪುಷ್ಪಗಳ ಬಣ್ಣವನ್ನು ಕ್ರಮೇಣ ಬದಲಾಯಿಸತೊಡಗಿದನು. ಕಾಲಾನುಕ್ರಮದಲ್ಲಿ ಕೆಂಪುಬಣ್ಣದ ಪುಷ್ಪಗಳು ಕಂದುಬಣ್ಣಕ್ಕೆ ತಿರುಗಿದುವು. ಕಂದುಬಣ್ಣದ ಹೂಗಳು ಕಪ್ಪುಮಿಶ್ರವಾದ ಕಂದು ಬಣ್ಣಕ್ಕೆ ತಿರುಗಿದುವು

ಒಂದು ವರ್ಷವು ಕಳೆಯುವಷ್ಟರಲ್ಲಿ ಕುಮುದಚಂದ್ರನ ಪುಷ್ಪಗಳು ಇನ್ನೂ ಹೆಚ್ಚಾಗಿ ಕಪ್ಪು ಬಣ್ಣಕ್ಕೆ ತಿರುಗಿದುವು ವಿಷಕಂಠನ ಹೂವುಗಳು ಸಾಮಾನ್ಯ ಕಂದು ಬಣ್ಣಕ್ಕೆ ಮಾತ್ರ ಬಂದಿದ್ದುವು. ವಿಷಕಂಠನು ತನ್ನ ಪ್ರತಿಸ್ಪರ್ಧಿಯ ಉತ್ತಮ ಸ್ಥಿತಿಯನ್ನೂ ಬುದ್ಧಿಯನ್ನೂ ನೋಡಿ ನೋಡಿ

ಹೆಚ್ಚು ಅಸೂಯೆಪಡತೊಡಗಿದನು. ಕಡೆಗೆ ಪುಷ್ಪಗಳನ್ನು ಕಂಡರೆ ಅವನಿಗೆ ಬೇಸರವಾಗತೊಡಗಿದುದು ಅವನಿಗೆ ಹುಚ್ಚುಹಿಡಿದಂತಾಗಿ ಅವನು ತನ್ನ ಸಮಯವೆಲ್ಲವನ್ನೂ ಶತ್ರುಪುಷ್ಪವನ್ನು ನೋಡುವುದರಲ್ಲಿಯೇ ಕಳೆಯತೊಡಗಿದನು.

ಕುಮುದನ ಮನೆಯು ಎಲ್ಲರಿಗೂ ಚೆನ್ನಾಗಿ ಕಂಡುಬರುತ್ತಿದ್ದಿತು. ಉದ್ಯಾನವನದಲ್ಲಿ ಬಿಸಿಲು ಚೆನ್ನಾಗಿ ಬೀಳುತ್ತಿದ್ದುದರಿಂದ ಅಲ್ಲಿದ್ದ ಪುಷ್ಪಾದಿಗಳನ್ನು ಎಲ್ಲರೂ ಚೆನ್ನಾಗಿ ನೋಡಬಹುದಾಗಿದ್ದಿತು. ಆದರೆ ಮಹಡಿಯ ಮೇಲಿದ್ದ ಬೀರುಗಳನ್ನೂ, ಅದರ ಗಾಜಿನ ಬಾಗಿಲುಗಳನ್ನೂ, ಡ್ರಾಯರುಗಳನ್ನೂ, ಪೆಟ್ಟಿಗೆಗಳನ್ನೂ ಎಲ್ಲರೂ ನೋಡಲಾಗುತ್ತಿರಲಿಲ್ಲ. ಆದರೆ ಎಲ್ಲವನ್ನೂ ವಿಷಕಂಠನು ಮಾತ್ರ ದುರ್ಬೀನಿನಿಂದ ನೋಡಲು ಅನುಕೂಲವಾಗಿದ್ದಿತು. ಅವನು ತನ್ನಲ್ಲಿದ್ದ ಗೆಡ್ಡೆಗಳನ್ನೂ, ಸಸಿಗಳನ್ನೂ ಬೀಜಕ್ಷೇತ್ರಗಳಲ್ಲಿ ಕೊಳೆಯಲು ಬಿಟ್ಟನು. ಪುಷ್ಪಗಳನ್ನು ಒಣಗಲು ಬಿಟ್ಟನು ಕುಮುದನು ಏನು ಮಾಡುವನೆಂಬುದನ್ನು ನೋಡುವುದರಲ್ಲಿಯೇ ಅವನ ಕಾಲವೆಲ್ಲವೂ ಕಳೆದುಹೋಗತೊಡಗಿತು.

ಕುಮುದಚಂದ್ರನು ಪುಷ್ಪಗಳ ಬೆಳವಣಿಗೆಗೆ ಬೇಕಾದ ಮುಖ್ಯವಾದ ಕಾರ್ಯವನ್ನು ಉದ್ಯಾನದಲ್ಲಿ ಮಾಡುತ್ತಿರಲಿಲ್ಲ ಸುಮಾರು ರಾತ್ರಿ ಒಂದು ಗಂಟೆಯ ಸಮಯದಲ್ಲಿ ಕುಮುದಚಂದ್ರನು ತನ್ನ ಪುಷ್ಪಸಂಚಯ ವಿದ್ದಕಡೆಗೆ ಹೋಗುತ್ತಿದ್ದನು. ಅಲ್ಲಿ ದೀಪಗಳನ್ನು ಹಚ್ಚಿಕೊಂಡು ತನ್ನ ನೂತನ ಸಂಶೋಧನೆಗಳನ್ನು ಪುಷ್ಪಗಳ ಮೇಲೆ ಪ್ರಯೋಗಿಸುತ್ತಿದ್ದನು. ಇವೆಲ್ಲವನ್ನೂ ವಿಷಕಂಠನು ದುರ್ಬೀನಿನಿಂದ ಸುಲಭವಾಗಿ ನೋಡುತ್ತಿದ್ದನು

ಕುಮುದಚಂದ್ರನು ತನ್ನ ಕೊಟಡಿಯಲ್ಲಿ ಕುಳಿತು ಮೊದಲು ಸಸ್ಯಗಳ ಬೀಜಗಳನ್ನು ಆರಿಸುತ್ತಿದ್ದನು- ಬಳಿಕ ಅವುಗಳನ್ನು ಕೆಲವು ದ್ರಾವಕ ಗಳಲ್ಲಿ ಮುಳುಗಿಸಿಬಿಡುತ್ತಿದ್ದನು. ಆ ದ್ರಾವಕಗಳು ಅವುಗಳ ಬಣ್ಣವನ್ನು ಹೆಚ್ಚುಮಾಡುವುದಕ್ಕಾಗಲಿ ಬದಲಾಯಿಸುವುದಕ್ಕಾಗಲಿ ಸಹಾಯಮಾಡು ತ್ತಿದ್ದುವು. ಕೆಲವು ಸಸ್ಯಗಳ ಬೀಜಗಳನ್ನು ಕುಮುದನು ಸ್ವಲ್ಪ ಶಾಖ ವಾಗಿರುವಂತೆ ಮಾಡಿ ಬಳಿಕ ನೀರಿನಲ್ಲಿ ಅದ್ದುತ್ತಿದ್ದನು. ಬಳಿಕ ಬೇರೆ ಸಸಿಗಳೊಡನೆ ಬೆರಸುತ್ತಿದ್ದನು. ಈ ಪ್ರಯೋಗವು ಶಸ್ತ್ರವೈದ್ಯದಂತೆ ಬಹಳ

ಸೂಕ್ಷ್ಮವಾದ ಕಾರ್ಯವಾಗಿದ್ದಿತು. ಯಾವ ಸಸಿಗಳ ಪುಷ್ಪಗಳು ಕಪ್ಪು ಬಣ್ಣಗಳನ್ನು ಹೊಂದಬೇಕೆಂದಿಚ್ಛಿಸುತ್ತಿದ್ದನೋ ಅವುಗಳನ್ನು ಅವನು ಅಂಧಕಾರದಲ್ಲಿ ಮುಚ್ಚಿಡುತ್ತಿದ್ದನು. ಕೆಂಪು ಬಣ್ಣಗಳನ್ನು ಹೊಂದ ಬೇಕಾದುವುಗಳನ್ನು ಬಿಸಿಲಿನಲ್ಲಾಗಲಿ ದೀಪದ ಬೆಳಕಿನಲ್ಲಾಗಲಿಇಡು ತ್ತಿದ್ದನು. ಬಿಳಿಯ ಬಣ್ಣಗಳನ್ನು ಪಡೆಯುವವುಗಳನ್ನು ಜಲನಿರ್ಮಿತ ಕನ್ನಡಿಗಳೆರಡರ ಮಧ್ಯೆ ಇಡುತ್ತಿದ್ದನು.

ಶಿಶುವಿನ ಆಟದಂತೆ ಸರಳವಾಗಿದ್ದಾ ಕಾರ್ಯಕ್ರಮಗಳನ್ನೂ, ಕುಶಾಗ್ರ ಬುದ್ಧಿಯ ಪ್ರಯೋಗವನ್ನೂ, ಶಾಂತಿಸಹನೆಗಳಿಂದ ಕೂಡಿದ ಕೆಲಸವನ್ನೂ ವಿಷಕಂಠನು ನೋಡಿ ನೋಡಿ ಅಸೂಯೆಯಿಂದ ದಗ್ಧನಾದವನಂತಾದನು ಅವನು ಬೇರೆ ಕೆಲಸಗಳನ್ನು ತ್ಯಜಿಸಿ ಈ ಕಾರ್ಯಗಳನ್ನು ನೋಡುವುದ ರಲ್ಲಿಯೇ ಸರ್ವದಾ ನಿರತನಾದನು.

ವಿಷಕಂಠನ ವಿಷಯವು ಕತೆಗೆ ಬಹು ಮುಖ್ಯವಾದುದರಿಂದ ಅವನ ವಿಷಯವನ್ನು ಇಷ್ಟು ವಿಶದವಾಗಿ ಹೇಳಿರುವೆವು. ರಮಾನಾಥನು ರತ್ನ ಗಿರಿಗೆ ಬಂದು ಅಲ್ಲಿ ಮಾಡಿದ ಕಾರ್ಯವನ್ನು ಹೇಳಿ ಕತೆಯನ್ನು ಮುಂದುವರಿಸುವೆವು.

# ಸಪ್ತಮ ಪರಿಚ್ಛೇದ

## ಸುಖಿಯ ಜೀವನದಲ್ಲಿ ದುಃಖದ ಅಂಕುರ

ನಾವು ಪಂಚಮಪರಿಚ್ಛೇದದಲ್ಲಿ ಹೇಳಿದಂತೆ ೧೬೭೫ನೇ ಇಸವಿಯ ಪ್ರಾರಂಭದಲ್ಲಿ—ಅಂದರೆ ಜನವರಿಯ ತಿಂಗಳಲ್ಲಿ ರಮಾನಾಥನು ತನ್ನ ಗೃಹಕೃತ್ಯಗಳನ್ನು ಮುಗಿಸಿ ಕಾಮಗಾರಿಯ ಕೆಲಸಕ್ಕೆ ಸೂಕ್ತವಾದ ಆಜ್ಞೆಯನ್ನಿತ್ತು ಕುಮುದಚಂದ್ರನ ಮನೆಯ ಕಡೆಗೆ ನಡೆದನು. ಅವನು ಸಸ್ಯವರ್ಗದಲ್ಲಿ ಹೆಚ್ಚು ಆಸಕ್ತಿಯಿಲ್ಲದವನಾಗಿದ್ದರೂ ಕುಮುದನ ಸಂತೋಷಾರ್ಥವಾಗಿ ಮನೆಯೆಲ್ಲವನ್ನೂ ನೋಡಿದನು. ಕೊಟಡಿಯಿಂದ ಕೊಟಡಿಗೆ ಹೊರಟು ಚಿತ್ರಗಳನ್ನು ಮೊದಲ್ಗೊಂಡು ಟ್ಯೂಲಿಪ್‌ಪುಷ್ಪಗಳ ವರೆಗೆ ಎಲ್ಲವನ್ನೂ ನೋಡಿದನು. ತನ್ನ ಹೆಸರನ್ನು ಪುಷ್ಪವೊಂದಕ್ಕೆ

ಕೊಟ್ಟುದಕ್ಕಾಗಿ ಕುಮುದನನ್ನು ಕೊಂಡಾಡಿದನು. ಹೀಗವನು ಕುಮುದ ನೊಡನೆ ಕೊಟಡಿಯಿಂದ ಕೊಟಡಿಗೆ ಹೋಗುತ್ತಿದ್ದಾಗ ಜನರು ಆಸಕ್ತಿ ಯಿಂದಲೂ, ಕುತೂಹಲದಿಂದಲೂ, ಗೌರವದಿಂದಲೂ ಕುಮುದನ ಮನೆಯ ಮುಂದೆ ನೆರೆಯತೊಡಗಿದರು. ಆ ಸಮಯದಲ್ಲಿ ವಿಷಕಂಠನು ಊಟ ಮಾಡುತ್ತಿದ್ದನು. ಜನಸಂದಣಿಯಿಂದುಂಟಾದ ಗಲಭೆಯನ್ನವನು ಕೇಳಿ, ಇದೇನೆಂದು ವಿಚಾರಿಸಿ, ವಿಷಯವನ್ನರಿಯುತ್ತಲೇ ಹೊರಟು ದುರ್ಬೀನಿನ ಸಹಾಯದಿಂದ ಎಲ್ಲವನ್ನೂ ಸ್ವಂತವಾಗಿ ನೋಡತೊಡಗಿದನು.

ಸುಮಾರು ೧೬೭೭ನೇ ಇಸವಿಯ ಚಳಿಗಾಲದಲ್ಲಿ ವಿಷಕಂಠನಿಗೆ ದುರ್ಬೀನು ಅಷ್ಟು ಪ್ರಯೋಜನಕ್ಕೆ ಬಂದಿರಲಿಲ್ಲ ಏಕೆಂದರೆ ಚಳಿಯನ್ನು ತಾಳಲಾರದೆ ಟ್ಯೂಲಿಪ್ ಪುಷ್ಪಗಳು ಮನೆಯೊಳಗೆ ಬೆಳೆಯಲಿಚ್ಛಿಸಿಬಿಟ್ಟುವು. ಭೂಮಿಯ ಮೇಲೆ ಚಳಿಯಲ್ಲಿ ಅಷ್ಟಾಗಿ ಬೆಳೆಯಲಿಚ್ಛಿಸಲಿಲ್ಲ ಕೊಟಡಿ ಯಲ್ಲಿದ್ದ ಅನಾಚ್ಛಾದಿತಪಾತ್ರೆಯರುಗಳಲ್ಲಿ ಬೆಳೆಯತೊಡಗಿದುವು. ಕೊಟಡಿಯಲ್ಲಿದ್ದ ಅಗ್ಗಿಷ್ಟಿಕೆಯ ಶಾಖವು ಅವುಗಳ ಬೆಳವಣಿಗೆಗೆ ಸಹಾಯ ಮಾಡತೊಡಗಿತು ಹೀಗಾಗಿ ಕುಮುದಚಂದ್ರನು ಚಳಿಗಾಲವೆಲ್ಲವನ್ನೂ ತನ್ನ ಸಂಶೋಧನಾಗಾರದಲ್ಲಿಯೇ ಕಳೆಯತೊಡಗಿ ಉದ್ಯಾನಕ್ಕೆ ಹೆಚ್ಚಾಗಿ ಬರದೆ ಇದ್ದನು ಅವನ ಚಿತ್ರಗಳೂ, ಅವನ ಪುಸ್ತಕಗಳೂ ಅವನಿಗೆ ಸ್ನೇಹಿತರಂತಿದ್ದುವು. ಈ ಸಂಶೋಧನಾಗಾರದ ಪಕ್ಕದಲ್ಲಿಯೇ ಒಂದು ಕೊಟಡಿಯಲ್ಲಿ ಕುಮುದಚಂದ್ರನು ತನ್ನ ಅಮೂಲ್ಯ ಸಸಿಗಳನ್ನಿಟ್ಟಿದ್ದನು. ಅವನು ಆಗಾಗ ಆ ಕೊಟಡಿಗೆ ಹೋಗಿ ಗಾಜಿನ ಮುಚ್ಚಳವನ್ನು ಸ್ವಲ್ಪ ಓರೆಮಾಡಿ ಸ್ವಲ್ಪ ಬಿಸಿಲನ್ನು ಸಸಿಗಳ ಮೇಲೆ ಬಿಟ್ಟು ಪುನಃ ಸಂಶೋಧನಾ ಗಾರಕ್ಕೆ ಹೊರಟುಹೋಗುತ್ತಿದ್ದನು.

ರಮಾನಾಥನು ಬಂದ ದಿನ ಸಾಯಂಕಾಲ ಕುಮುದಚಂದ್ರನು ತನ್ನ ಗುರುವಿನೊಡನೆ ಎಲ್ಲ ಕೊಟಡಿಗಳನ್ನೂ ಭೇಟಿಮಾಡಿದನು. ಮನೆಯ ಸೇವಕರು ಅವರ ಹಿಂದೆಯೇ ಬರುತ್ತಿದ್ದರು. ಆ ಸಮಯದಲ್ಲಿ ರಮಾ ನಾಥನು ಮೆಲ್ಲನೆ ಕುಮುದನೊಡನೆ, "ಮಗು! ಇವರೆಲ್ಲರನ್ನೂ ಕಳುಹಿಸಿ ಬಿಡು. ಕೆಲವು ನಿಮಿಷಗಳವರೆಗೆ ನಾವಿಬ್ಬರೇ ಇರೋಣ" ಎಂದನು. ಕುಮುದಚಂದ್ರನು ಆಗಲೆಂದು ಮೆಲ್ಲನೆ ಹೇಳಿ, ಬಳಿಕ ಗಟ್ಟಿಯಾಗಿ,

"ಸ್ವಾಮಿ! ನನ್ನ ಸಸಿಗಳ ಕೊಟಡಿಯನ್ನು ನೋಡೋಣಾಗುವುದೆ?" ಎಂದನು.

ಸೇವಕರು ಎಲ್ಲ ಕೊಟಡಿಗಳಿಗೂ ಹೋಗುತ್ತಿದ್ದರಾದರೂ ಅವನ ಸಸಿಗಳಿದ್ದ ಕೊಟಡಿಗೆ ಮಾತ್ರ ಹೋಗುತ್ತಿರಲಿಲ್ಲ. ಅಲ್ಲಿಗೆ ಕುಮುದ ಚಂದ್ರನ ವೃದ್ಧಸೇವಕಿಯೊಬ್ಬಳು ಮಾತ್ರ ಪ್ರತಿದಿನವೂ ಹೋಗಿ ಗುಡಿಸಿ ಬಿಟ್ಟು ಹಿಂತಿರುಗಿಬಿಡುತ್ತಿದ್ದಳು. ಪುನಃ ಮರುದಿನದವರೆಗೆ ಆ ಕೊಟಡಿ ಯನ್ನು ಪ್ರವೇಶಿಸುತ್ತಿರಲಿಲ್ಲ

ಸಸಿಗಳ ಕೊಟಡಿಯ ವಿಷಯವನ್ನು ಕೇಳುತ್ತಲೇ ಸೇವಕರು ಹಿಂದೆ ನಿಂತರು. ಕುಮುದಚಂದ್ರನು ಮಯಿಣದ ಬತ್ತಿಯನ್ನು ಸೇವಕನ ಕೈಯಿಂದ ತಾನು ತೆಗೆದುಕೊಂಡು ಸಸಿಗಳ ಕೊಟಡಿಗೆ ರಮಾನಾಥನನ್ನು ಕರೆದುಕೊಂಡು ಹೋದನು. ಈ ಕೊಟಡಿಯನ್ನು ವಿಷಕಂಠನು ತನ್ನ ಮನೆಯಿಂದಲೇ ದುರ್ಬೀನಿನ ಸಹಾಯದಿಂದ ಪರೀಕ್ಷಿಸುತ್ತಿದ್ದನು!

ಈ ದಿನ ಎಂದಿಗಿಂತಲೂ ಹೆಚ್ಚು ಜಾಗರೂಕನಾಗಿ ವಿಷಕಂಠನು ಸಸಿಗಳ ಕೊಟಡಿಯನ್ನು ಪರೀಕ್ಷಿಸುತ್ತಿದ್ದನು. ಮೊದಲು ಗೋಡೆಗಳೂ ಕಿಟಕಿಗಳೂ ಪ್ರಕಾಶಿತವಾದುವು. ಬಳಿಕ ಕೊಟಡಿಯಲ್ಲಿ ಎರಡು ವ್ಯಕ್ತಿಗಳು ಕಂಡುಬಂದುವು!

ಒಂದು ವ್ಯಕ್ತಿಯು ಎತ್ತರವಾಗಿಯೂ ಗಂಭೀರಭಾವದಿಂದಲೂ ಇದ್ದಿತು. ಅದು ಮೇಜಿನ ಬಳಿ ಕುಳಿತುಕೊಂಡಿತು. ಆ ವ್ಯಕ್ತಿಯನ್ನು ವಿಷಕಂಠನು ಗುರುತಿಸಿ, ರಮಾನಾಥನು ಇಲ್ಲಿಗೇಕೆ ಬಂದನೆಂದು ಹೇಳಿ ಕೊಳ್ಳುತ್ತಿದ್ದನು. ಮತ್ತೊಂದು ವ್ಯಕ್ತಿಯು ಕುಮುದಚಂದ್ರನೆಂದು ತಿಳಿಯಲು ವಿಷಕಂಠನಿಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ.

ರಮಾನಾಥನು ಅದೇನನ್ನೋ ಕುಮುದಚಂದ್ರನಿಗೆ ಹೇಳಿದನು. ವಿಷಕಂಠನಿಗೆ ಆ ಮಾತುಗಳು ತಿಳಿಯಲಿಲ್ಲ. ತಟ್ಟನೆ ರಮಾನಾಥನು ತನ್ನ ವಕ್ಷಪ್ರದೇಶದಿಂದ ಕಟ್ಟೊಂದನ್ನು ತೆಗೆದು ಕುಮುದನ ಕೈಯ್ಯಲ್ಲಿ ಟ್ಟನು. ಅವನು ಅದನ್ನು ಅತೀವ ಭಕ್ತಿಯಿಂದ ತೆಗೆದುಕೊಂಡುದನ್ನು ನೋಡಿ ಅದರಲ್ಲಿ ಮಹತ್ತರವಾದ ವಸ್ತುಗಳಿರಬೇಕೆಂದು ವಿಷಕಂಠನು ಭಾವಿಸಿಕೊಂಡನು. ಆ ಕಟ್ಟನ್ನು ಕುಮುದಚಂದ್ರನು ಡ್ರಾಯರೊಂದ

ರಲ್ಲಿಟ್ಟು ಭದ್ರಪಡಿಸಿದನು. ವಿಷಕಂಠನು ಯೋಚಿಸುತ್ತ, ಬೇರೆದೇಶಗಳಿಂದ ಬಂದ ಸಸಿಗಳು ಆ ಕಟ್ಟಿನಲ್ಲಿರಬೇಕೆಂದು ಹೇಳಿಕೊಂಡನು ಆದರೆ ರಮಾನಾಥನು ಪುಷ್ಪಗಳ ವಿಚಾರವಾಗಿ ಹೆಚ್ಚು ಯೋಚಿಸುವವನಲ್ಲವೆಂದೂ ರಾಜಕೀಯ ವಿಷಯಗಳನ್ನು ಹೆಚ್ಚು ಗಮನಿಸುವವನೆಂದೂ ಯೋಚಿಸಿದ ಬಳಿಕ ಆ ಕಟ್ಟಿನಲ್ಲಿ ರಾಜಕೀಯ ಪತ್ರಗಳಾವುವೋ ಇರಬೇಕೆಂದು ವಿಷಕಂಠನು ಊಹಿಸಿಕೊಂಡನು.

ಆದರೆ ಮಹತ್ತರವಾದ ರಾಜಕೀಯ ಪತ್ರಗಳನ್ನು ಕುಮುದಚಂದ್ರನ ಬಳಿ ಇಟ್ಟುದೇಕೆ? ಅವನಿಗೂ ರಾಜಕೀಯಕ್ಕೂ ಕೋಟ್ಯಾಂತರ ಮೈಲಿಗಳಷ್ಟು ದೂರವಿತ್ತೆಂದು ಎಲ್ಲರಿಗೂ ವಿದಿತವಾಗಿತ್ತಲ್ಲವೆ? ರಮಾನಾಥನು ತನ್ನ ಮೇಲೆ ಜನರಿಗಿದ್ದ ಕೆಟ್ಟ ಅಭಿಪ್ರಾಯದಿಂದ ವ್ಯಾಕುಲನಾಗಿ ಈ ಮುಖ್ಯ ಪತ್ರಗಳನ್ನು ಮುಚ್ಚಿಡುತ್ತಿದ್ದನೆ? ರಾಜಕೀಯದ ಗಂಧವನ್ನೇ ಅರಿಯದ ಕುಮುದಚಂದ್ರನ ಬಳಿ ಆ ಪತ್ರಗಳನ್ನು ಹುಡುಕುವವರಾರೆಂದೇನಾದರೂ ರಮಾನಾಥನು ಯೋಚಿಸುತ್ತಿದ್ದನೆ?

ವಿಷಕಂಠನು ಈ ವಿಷಯಗಳೆಲ್ಲವನ್ನೂ ಯೋಚಿಸುತ್ತಿದ್ದನು. ಕಟ್ಟಿನಲ್ಲಿ ಅಪೂರ್ವಸಸಿಗಳಿದ್ದರೆ ಕುಮುದಚಂದ್ರನು ಮೊದಲು ಕಟ್ಟನ್ನು ಬಿಚ್ಚಿ ನೋಡುತ್ತಿದ್ದನು ಅಪೂರ್ವಸಸಿಗಳನ್ನು ನೋಡಿ ಮೊದಲು ಆನಂದಿಸುತ್ತಿದ್ದನು ಆದರೆ ಹಾಗೆ ಮಾಡದೆ ಅವನು ಭಕ್ತಿಪುರಸ್ಸರವಾಗಿ ಕಟ್ಟನ್ನು ತೆಗೆದುಕೊಂಡು, ಪ್ರಾಯರೊಂದರಲ್ಲಿ ಮುಚ್ಚಿಟ್ಟು, ಅದನ್ನು ನೋಡುವ ಹವ್ಯಾಸಕ್ಕೆ ಕೂಡ ಹೋಗದೆ ಇರಲು ಕಾರಣವೇನು? ವಿಷಕಂಠನಿಗೆ ಸಂಶಯವುಳಿಯಲಿಲ್ಲ ಕಟ್ಟಿನಲ್ಲಿ ಯಾವುವೋ ರಹಸ್ಯಕರ ಪತ್ರಗಳಿರಬೇಕೆಂದು ಅವನು ನಿಶ್ಚಯ ಮಾಡಿಕೊಂಡನು.

ರಮಾನಾಥನು ಕಟ್ಟನ್ನು ಭದ್ರಪಡಿಸಿದ ಬಳಿಕ ಕುಮುದಚಂದ್ರನ ಕೈಯನ್ನು ಕುಲುಕಿ ಕೊಟಡಿಯಿಂದ ಹೊರಕ್ಕೆ ಬಂದನು. ಕುಮುದಚಂದ್ರನು ಗುರುವನ್ನು ಬೀದಿಯ ಬಾಗಿಲಿನವರೆಗೂ ಹಿಂಬಾಲಿಸಿದನು.

ವಿಷಕಂಠನು ಊಹಿಸಿದುದು ತಪ್ಪಾಗಿರಲಿಲ್ಲ ರಮಾನಾಥನೂ ಉಮಾನಾಥನೂ ವಿಲಾಸನಗರಿಯ ಮಂತ್ರಿಯೊಡನೆ ರಾಜಕೀಯ ವಿಷಯಕವಾಗಿ ಅನೇಕ ಬಾರಿ ಪತ್ರವ್ಯವಹಾರ ಮಾಡಿದ್ದರೆಂದು ಹಿಂದೆಯೇ

ಹೇಳಿರುವೆವು. ಆ ವ್ಯವಹಾರಪತ್ರಗಳ ಕಟ್ಟನ್ನೇ ಈಗ ರಮಾನಾಥನು ಕುಮುದನ ಬಳಿ ಭದ್ರಪಡಿಸಿಟ್ಟಿದ್ದುದು. ಆ ಪತ್ರಗಳಲ್ಲಿದ್ದ ವಿಷಯವನ್ನು ಮಾತ್ರ ರಮಾನಾಥನು ಕುಮುದಚಂದ್ರನಿಗೆ ತಿಳಿಯಪಡಿಸಲಿಲ್ಲ. ತನಗೆ ಮಾತ್ರ ಆ ಕಟ್ಟನ್ನು ಕೊಡಬೇಕೆಂದೂ ಅಥವಾ ತನ್ನ ಹೆಸರನ್ನು ಹೇಳಿ ಅದನ್ನು ತೆಗೆದುಕೊಳ್ಳಲು ಬರುವವರಿಗೆ ಮಾತ್ರ ಅದನ್ನು ಕೊಡಬೇಕೆಂದೂ ಖಚಿತವಾಗಿ ಆಜ್ಞೆಮಾಡಿದ್ದನು.

ನಾವು ಹಿಂದೆಯೇ ಹೇಳಿದಂತೆ ಕುಮುದಚಂದ್ರನು ತನ್ನ ಆಪ್ತ ಸಸಿಗಳೊಡನೆ ಪತ್ರಗಳ ಕಟ್ಟನ್ನಿಟ್ಟನು. ಪುನಃ ಅದರ ಯೋಚನೆಯನ್ನೇ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಆದರೆ ವಿಷಕಂಠನು ಮಾತ್ರ ಆ ಕಟ್ಟಿನ ವಿಷಯವನ್ನು ಮರೆಯಲಿಲ್ಲ. ದುರ್ಬೀನಿನ ಸಹಾಯದಿಂದ ತಾನು ಮಹಡಿಯ ಮೇಲಿನ ಕೊಟಡಿಯಲ್ಲಿ ನೋಡಿದ ಕಟ್ಟನ್ನು ಸರ್ವದಾ ಜ್ಞಾಪಕಕ್ಕೆ ತಂದುಕೊಳ್ಳುತ್ತಿದ್ದನು!

ಕುಮುದಚಂದ್ರನು ತನ್ನ ನೆರೆಮನೆಯವನ ದ್ವೇಷವನ್ನು ಸ್ವಲ್ಪವೂ ಅರಿಯದವನಾಗಿ ತನ್ನ ಕಾರ್ಯದಲ್ಲಿ ನಿರತನಾಗಿದ್ದನು. ಅವನ ಸಂಶೋಧನೆಗಳು ಮುಂದುವರಿದಂತೆಲ್ಲಾ ಅವನ ಪುಷ್ಪಗಳು ತಮ್ಮ ವರ್ಣಗಳನ್ನು ಬದಲಾಯಿಸತೊಡಗಿದುವು. ಕಂದು ಬಣ್ಣದ ಪುಷ್ಪಗಳಾದ ಮೇಲೆ ಹುರಿದ ಕಾಫಿಯಬೀಜದ ಬಣ್ಣವಿದ್ದ ಪುಷ್ಪಗಳು ತಯಾರಾದುವು.

೧೯೩೨ನೇ ಇಸವಿ ಆಗಸ್ಟ್ ೩ನೇ ತಾರೀಖಿನ ದಿನ—ಅಂದರೆ ರಮಾನಾಥ ಉಮಾನಾಥರ ಖೂನಿಯಾದದಿನ—ಕುಮುದಚಂದ್ರನು ಯಾವ ರಾಜಕೀಯ ವಿಷಯವನ್ನೂ ಅರಿಯದವನಾಗಿ ತನ್ನಷ್ಟಕ್ಕೆ ತಾನು ಸಸಿಗಳ ಕೊಟಡಿಯಲ್ಲಿ ಕುಳಿತಿದ್ದನು. ಈ ಕೊಟಡಿಯು ಮಹಡಿಯ ಮೇಲಿತ್ತೆಂದು ವಾಚಕರು ಬಲ್ಲರು. ಅವನು ಆ ದಿನ ಉದ್ಯಾನದಲ್ಲಿದ್ದ ಸಸಿಯೊಂದರಿಂದ ಮೂರು ಚಿಕ್ಕ ಸಸಿಗಳನ್ನು ಬೇರೆಮಾಡಿದ್ದನು. ತಾಯಿ ಸಸಿಯ ಪುಷ್ಪವು ಹುರಿದ ಕಾಫಿಯ ಬೀಜದ ಬಣ್ಣವುಳ್ಳುದಾಗಿದ್ದಿತು. ಬೇರೆಮಾಡಿದ ಮೂರು ಸಸಿಗಳೂ ೧೯೩೩ರಲ್ಲಿ ಹೂ ಬಿಡುವುವೆಂದೂ ಇವುಗಳ ಪುಷ್ಪಗಳು ಖಂಡಿತವಾಗಿ ಕೃಷ್ಣವರ್ಣವುಳ್ಳವಾಗುವುವೆಂದೂ ಅವನು ಯೋಚಿಸುತ್ತಿದ್ದನು. ಈ ಪುಷ್ಪಗಳನ್ನು ಕಲ್ಯಾಣನಗರಿಯ

ಟ್ಯೂಲಿಪ್ ಸಂಘದವರಿಗೆ ಕಳುಹಿಸಿಬಿಡಬೇಕೆಂದೂ ಅವರು ಲಕ್ಷ ರೂಪಾಯಿಗಳ ಬಹುಮಾನವನ್ನು ಕಳುಹಿಸಿಬಿಡುವರೆಂದೂ ಅವನು ಯೋಚಿಸುತ್ತಿ ಮನಸ್ಸಿನಲ್ಲಿಯೇ ಆನಂದ ಪಡುತ್ತಿದ್ದನು. ಆ ಆನಂದದ ಮಧ್ಯೆ ತನ್ನಲ್ಲಿಯೇ ಹೇಳಿಕೊಳ್ಳಲಾರಂಭಿಸಿದನು—"ನಾನು ಕರಿಯ ಟ್ಯೂಲಿಪನ್ನು ಕಂಡುಹಿಡಿದುಬಿಡುತ್ತೇನೆ. ಕಲ್ಯಾಣನಗರಿಯವರಿಂದ ಲಕ್ಷ ರೂಪಾಯಿಗಳನ್ನು ತೆಗೆದುಕೊಳ್ಳುತ್ತೇನೆ ಅವುಗಳನ್ನು ರತ್ನಗಿರಿಯ ಬಡಜನರಿಗೆ ಹಂಚಿಬಿಡುತ್ತೇನೆ. ಹಾಗೆ ಮಾಡಿದರೆ ನಗರಿಯ ಅಂತರ್ಯುದ್ಧಗಳಲ್ಲಿ ಹಣವಂತನಾದ ನನಗೆ ಹೆಚ್ಚು ಕಷ್ಟವು ಸಂಭವಿಸದು. ಯಾವ ರಾಜಕೀಯ ಪಂಗಡದವರಿಂದಲೂ ನನಗೆ ಕಷ್ಟವುಂಟಾಗದು ನನ್ನಷ್ಟಕ್ಕೆ ನಾನು ನನ್ನ ಸಸ್ಯವರ್ಗಾಭಿವೃದ್ಧಿಯಲ್ಲಿ ನಿರತನಾಗಿರಬಹುದು. ಹಾಗೆ ಮಾಡದೆ ಹೋದರೆ ಜನರು ನನ್ನ ಸಸಿಗಳನ್ನು ತೆಗೆದುಕೊಂಡು ಹೋಗಿ ತರಕಾರಿಯಂತೆ ಉಪಯೋಗಿಸಿಬಿಡುವರು ಒಂದುಬಾರಿ ಸಸಿಯೊಂದಕ್ಕೆ ನಾನು ಇನ್ನೂರು ಮುನ್ನೂರು ರೂಪಾಯಿಗಳನ್ನು ಕೊಟ್ಟಾಗ ಜನರು ನನ್ನನ್ನು ಬೈದರು—ಸರಿ. ಬೇರೆಯೋಚನೆ ಮಾಡುವಂತಿಲ್ಲ ಲಕ್ಷ ರೂಪಾಯಿಗಳ ಬಹುಮಾನವು ಬರುತ್ತಲೇ ಎಲ್ಲವನ್ನೂ ಬಡವರಿಗೆ ಕೊಟ್ಟುಬಿಡುತ್ತೇನೆ. ಆದರೂ "

ಕುಮುದಚಂದ್ರನು ದೀರ್ಘವಾಗೊಂದು ಬಾರಿ ನಿಟ್ಟುಸಿರಿಟ್ಟನು. ಬಳಿಕ ಹೇಳಿಕೊಳ್ಳತೊಡಗಿದನು—"ಆದರೂ—ಆ ಹಣವೆಲ್ಲವನ್ನೂ ಪುಷ್ಪಗಳ ಬೆಳವಣಿಗೆಗೇ ಉಪಯೋಗಿಸುವಂತಿದ್ದರೆ ಎಷ್ಟೋ ಸಂತೋಷವುಂಟಾಗುತ್ತಿತ್ತು. ಪುಷ್ಪಗಳನ್ನು ಬೆಳೆಯುವ ದೇಶಗಳಿಗೆ ಹೋಗಿಬರಲು ಆ ಹಣವನ್ನು ಖರ್ಚುಮಾಡುವಂತಿದ್ದರೆ ಆನಂದವಾಗುತ್ತಿತ್ತು. ಆದರೆ ಮಾಡುವುದೇನು?—ಈಗಿನ ಕಾಲದಲ್ಲಿ ಬಂದೂಕುಗಳು, ರಾಜಕೀಯ ಶಾಸನಗಳು ಇವೇ ಹೆಚ್ಚಾಗಿ ಕಂಡುಬರುತ್ತಿರುವುವು."

ಕುಮುದಚಂದ್ರನು ಪುನಃ ನಿಟ್ಟುಸಿರು ಬಿಟ್ಟು ಆಕಾಶದ ಕಡೆಗೆ ನೋಡಿದನು. ಬಳಿಕ ತನ್ನ ಸಸಿಗಳ ಕಡೆಗೆ ದೃಷ್ಟಿಯನ್ನು ತಿರುಗಿಸಿದನು. ಅವನಿಗೆ ಆ ಸಸಿಗಳು ಬಂದೂಕುಗಳಿಗಿಂತಲೂ, ಶಾಸನಗಳಿಗಿಂತಲೂ, ಎಲ್ಲವುಗಳಿಗಿಂತಲೂ ಹೆಚ್ಚು ಪ್ರಿಯವಾಗಿದ್ದುವು. ಅವನು ಪುನಃ

ತನ್ನಲ್ಲಿಯೇ ಹೇಳಿಕೊಳ್ಳತೊಡಗಿದನು—"ಈ ಸಸಿಗಳು ಎಷ್ಟು ಚೆನ್ನಾಗಿವೆ! ಎಷ್ಟು ನುಣುಪಾಗಿವೆ! ಮತ್ತೂ ಎಷ್ಟು ಚೆನ್ನಾಗಿ ಬೆಳೆದಿವೆ. ನೋಡಿದರೆ ಸ್ವಲ್ಪ ದುಃಖವುಳ್ಳವಂತೆ ಕಾಣುವುವು. ಕೃಷ್ಣವರ್ಣದ ಕುಸುಮವನ್ನು ಬಿಡುವ ಸಸಿಗಳು ಹಾಗೆಯೇ ಇರಬೇಕು ಖಂಡಿತವಾಗಿಯೂ ಇವುಗಳಿಂದ ಶುದ್ಧ ಕಪ್ಪು ಬಣ್ಣದ ಹೂವುಗಳು ಅರಳುವುವು-ರಾತ್ರಿ ಹಗಲೆನ್ನದೆ ಕಷ್ಟಪಟ್ಟು ಯೋಚಿಸಿ ನಿದ್ರೆಯಿಲ್ಲದೆ ಕಂಡುಹಿಡಿದಿರುವೀ ಕುಸುಮವನ್ನೇನೆಂದು ಕರೆಯಲಿ? . . . 'ಕುಮುದಚಂದ್ರ' .

"ಸರಿ—'ಕುಮುದಚಂದ್ರ' ಎಂದೇ ಅದನ್ನು ಕರೆಯುತ್ತೇನೆ ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವವರೆಲ್ಲಾ ಆಶ್ಚರ್ಯದಿಂದ ಚಕಿತರಾಗುವರು 'ಕೃಷ್ಣವರ್ಣದ ಟ್ಯೂಲಿಪ್ ಪುಷ್ಪವು ಕಂಡುಹಿಡಿಯಲ್ಪಟ್ಟಿದೆ' ಎಂದು ಪ್ರಪಂಚದಲ್ಲಿ ವದಂತಿಯು ಹರಡುವುದು. ಅದರ ಹೆಸರೇನೆಂದು ಎಲ್ಲರೂ ಕೇಳುವರು—'ಕುಮುದಚಂದ್ರ' ಎಂದು ಉತ್ತರ ಬರುವುದು—ಈ ಕುಮುದಚಂದ್ರನಾರೆಂದು ಎಲ್ಲರೂ ಪ್ರಶ್ನಿಸುವರು—ಈಗಾಗಲೇ ಐದು ಹೊಸ ಪುಷ್ಪಗಳನ್ನು—ಅಂದರೆ, 'ಸ್ವರ್ಣಲತಾ,' 'ರಮಾನಾಥ,' 'ಉಮಾನಾಥ' ಮೊದಲಾದ ಪುಷ್ಪಗಳನ್ನು—ಕಂಡುಹಿಡಿದವನೇ ಕುಮುದಚಂದ್ರ ಎಂದೆಲ್ಲರೂ ಹೇಳುವರು—ಸರಿ ಇದೇ ನನಗೆ ಪ್ರಪಂಚದಲ್ಲಿದ್ದ ಹಿರಿಯದಾದ ಆಸೆ. ನಾನು ಯಾರಿಗೂ ಕಷ್ಟವನ್ನುಂಟುಮಾಡಿಲ್ಲ, ನಷ್ಟವನ್ನುಂಟುಮಾಡಿಲ್ಲ. ಎಲ್ಲರೂ ಕೃಷ್ಣವರ್ಣದ ಕುಸುಮದ ವಿಷಯವಾಗಿ ಮಾತನಾಡುವರು—

" ಎಂತಹ ಮುದ್ದು ಸಸಿಗಳು!

" ನನ್ನ ಕಪ್ಪು ಕುಸುಮವು ಅರಳುವವೇಳೆಗೆ ರಾಜ್ಯದಲ್ಲಿ ಶಾಂತಿಯುಂಟಾಗುವುದು. ನನ್ನ ಬಹುಮಾನದಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ಮಾತ್ರ ಬಡವರಿಗೆ ಕೊಡುವೆನು. ಅವರಿಗೆ ಇಷ್ಟೇ ಕೊಡಬೇಕೆಂದು ನಿಯಮವೇನೂ ಇಲ್ಲ. ನನ್ನನ್ನಾರೂ ಬಲವಂತಪಡಿಸುವಂತಿಲ್ಲ—ಉಳಿದ ಹಣದಿಂದ ನನ್ನ ಸಂಶೋಧನೆಯನ್ನು ಮುಂದುವರಿಸುವೆನು—ಇವುಗಳನ್ನು ವೆಚ್ಚಮಾಡಿ ನನ್ನ ಕುಸುಮಕ್ಕೆ ಒಳ್ಳೆಯ ಸುವಾಸನೆಯು ಬರುವಂತೆ ಮಾಡುವೆನು—ಅದರಲ್ಲಿ ಕೃತಕಾರ್ಯನಾಗಿಬಿಟ್ಟರೆ

ಎಂತಹ ಯಶಸ್ಸುಂಟಾಗುವುದು! ಆಗ ನಾನು ರಾಜಾಧಿರಾಜನಾಗಲು ಬಯಸದೆ ಕೇವಲ ಕುಮುದಚಂದ್ರನಾಗಿ ಉಳಿಯಲು ಇಷ್ಟಪಡುವೆನು!

"ಆಹಾ! ಎಂತಹ ಮುದ್ದಾದ ಸಸಿಗಳು!"

ಹೀಗೆಯೇ ಹೇಳಿಕೊಳ್ಳುತ್ತ ಕುಮುದಚಂದ್ರನು ಯೋಚನಾತರಂಗಗಳಲ್ಲಿಯೂ ಸವಿಗನಸುಗಳಲ್ಲಿಯೂ ಮುಳುಗಿದ್ದನು.

ತಟ್ಟನೆ ಅವನ ಕೊಟಡಿಯನ್ನಾರೋ ದಬದಬನೆ ಬಡಿಯತೊಡಗಿದರು. ಕುಮುದಚಂದ್ರನು ಚಕಿತನಾಗಿ ತನ್ನ ಸಸಿಗಳ ಮೇಲೆ ಕೈಯಿಟ್ಟುಕೊಂಡು ಹಿಂತಿರುಗಿ ನೋಡುತ್ತ ಅದಾರು ಎಂದು ಕೇಳಿದನು.

ಕೊಟಡಿಯ ಹೊರಗೆ ನಿಂತಿದ್ದ ಸೇವಕನು, "ಸ್ವಾಮಿ! ಸುರನಗರಿಯಿಂದ ದೂತನೊಬ್ಬನು ಬಂದಿದ್ದಾನೆ" ಎಂದನು.

"ಸುರನಗರಿಯಿಂದ ದೂತನೆ! ಅವನಿಗೇನುಬೇಕಂತೆ?"

"ಸ್ವಾಮಿ! ರವಿವರ್ಮನು ಬಂದಿದ್ದಾನೆ"

"ರವಿವರ್ಮನೆ! ಉಮಾನಾಥಬಾಬುಗಳ ಆಪ್ತಸೇವಕನು ಬಂದಿದ್ದಾನೆಯೆ! ಒಳ್ಳೆಯದು ಕಾದಿರೆಂದುಹೇಳು."

ಹೊರಗಣಿಂದ ಒಂದು ಧ್ವನಿಯು, "ನಾನು ಕಾದಿರಲಾಗುದಿಲ್ಲ" ಎಂದು ಹೇಳಿದುದು. ಒಡನೆಯೇ ಬಾಗಿಲನ್ನು ತೆಗೆದುಕೊಂಡು ರವಿವರ್ಮನು ಸಸಿಗಳ ಕೊಟಡಿಗೆ ನುಗ್ಗಿದನು

ಸಸಿಗಳ. ಕೊಟಡಿಯನ್ನು ಯಾರೂ ಪ್ರವೇಶಿಸುತ್ತಿರಲಿಲ್ಲವೆಂದು ಹಿಂದೆಯೇ ಹೇಳಿರುವೆವು ಹೀಗೆ ರವಿವರ್ಮನು ನುಗ್ಗಿದುದರಿಂದ ಕುಮುದಚಂದ್ರನು ಗಾಬರಿಗೊಂಡು ಸಸಿಗಳನ್ನು ಮುಚ್ಚಿದ್ದ ಕೈಯ್ಯನ್ನು ಅಲ್ಲಾಡಿಸಿಬಿಟ್ಟನು. ಸಸಿಗಳು ಗುಂಡಗೆ ಗಡ್ಡೆಗಳಂತಿದ್ದುವು. ಕೈ ಅಲ್ಲಾಡಿದಾಗ ಅವುಗಳಲ್ಲಿ ಎರಡು ಸಸಿಗಳು ಉರುಳಿಹೋಗಿ ನೆಲದಮೇಲೆ ಬಿದ್ದುವು. ಅವುಗಳಲ್ಲೊಂದು ಚಿಕ್ಕ ಮೇಜೊಂದರ ಕೆಳಗೆ ಹೊರಟು ಹೋಯಿತು. ಮತ್ತೊಂದು ಅಗ್ಗಿಷ್ಟಿಕೆಯ ಬಳಿಗೆ ಉರುಳಿಕೊಂಡು ಹೋಯಿತು.

ಕುಮುದಚಂದ್ರನು ಮೇಜಿನ ಕೆಳಗಿದ್ದ ಸಸಿಯನ್ನು ನೋಡುತ್ತ, "ಏನಿದು! ಸಮಾಚಾರವೇನು?" ಎಂದು ಕೇಳಿದನು.

ರವಿವರ್ಮನು ಮೂರನೆಯ ಸಸಿಯಿದ್ದ ಮೇಜಿನ ಮೇಲೆ ಕಾಗದವೊಂದನ್ನಿಡುತ್ತ, "ಸಮಾಚಾರವೆ, ಸ್ವಾಮಿ! ಸಮಾಚಾರವಿದೆ—ತಾವು ಕ್ಷಣಮಾತ್ರವೂ ನಿಧಾನಿಸದೆ ಈ ಕಾಗದವನ್ನು ಓದಬೇಕಾಗಿದೆ" ಎಂದನು.

ಅಷ್ಟು ಹೇಳಿ ರವಿವರ್ಮನು ಕೊಟಡಿಯನ್ನು ಬಿಟ್ಟು ಓಡುತ್ತ ಹಿಂತಿರುಗಿಕೂಡ ನೋಡದೆ ಹೊರಟುಹೋದನು. ಕುಮುದಚಂದ್ರನು ಮೇಜಿನ ಕೆಳಗೆ ಬಿದ್ದಿದ್ದ ಸಸಿಯನ್ನು ನೋಡಿಕೊಳ್ಳುತ್ತ, "ಆಗಲಿ, ರವಿವರ್ಮ! ಆಗಲಿ ನಿನ್ನ ಕಾಗದವನ್ನು ಓದುತ್ತೇನೆ. ಖಂಡಿತವಾಗಿ ಓದುತ್ತೇನೆ" ಎಂದನು. ಬಳಿಕ ಸಸಿಯನ್ನು ತನ್ನ ಅಂಗೈಯ್ಯಲ್ಲಿಟ್ಟುಕೊಂಡು, "ಅದೃಷ್ಟವಶಾತ್ ಈ ಸಸಿಗಾವ ಅಪಾಯವೂ ಆಗಿಲ್ಲ. ರವಿವರ್ಮನಿಗೆ ಎಂತಹ ಹುಚ್ಚು! ಹೀಗೆ ನನ್ನ ಸಸಿಗಳ ಕೊಟಡಿಗೆ ನುಗ್ಗುವುದೆ?—ಮತ್ತೊಂದು ಹೇಗಿದೆಯೋ ನೋಡೋಣ" ಎಂದು ಹೇಳಿಕೊಂಡನು.

ಹಾಗೆ ಹೇಳಿಕೊಳ್ಳುತ್ತ ಕೈಯ್ಯಲ್ಲಿದ್ದ ಸಸಿಯನ್ನು ಕೆಳಗಿಡದೆ ಅಗ್ಗಿಷ್ಟಿಕೆಯ ಬಳಿಗೆ ಹೋದನು. ಅಲ್ಲಿ ಎರಡನೆಯ ಸಸಿ ಇತ್ತು. ತಂದೆಯು ಪ್ರೇಮ ಪುತ್ರನನ್ನ ನೋಡುವಂತೆ ಅವನಾಸಸಿಯನ್ನು ನೋಡಿ ಅದನ್ನು ಕೈಯಲ್ಲಿಟ್ಟುಕೊಂಡು, "ಓಹೋ! ಎಂತಹ ಅದೃಷ್ಟ! ಇದೂ ಒಡೆದಿಲ್ಲ. ಮೊದಲನೆಯ ಸಸಿಯಂತೆಯೇ ಸರಿಯಾಗಿದೆ!" ಎಂದು ಹೇಳಿಕೊಂಡನು ಬಳಿಕ ಅಗ್ಗಿಷ್ಟಿಕೆಯ ಬಳಿ ಮೊಣಕಾಲೂರಿ ಕುಳಿತು ಸಸಿಗಳನ್ನು ಪುನಃ ಚೆನ್ನಾಗಿ ಪರೀಕ್ಷಿಸತೊಡಗಿದನು.

ಆ ಸಮಯದಲ್ಲಿ ಸಸಿಗಳ ಕೊಟಡಿಯ ಬಾಗಿಲು ಮಹಾಶಬ್ದದೊಡನೆ ತೆರೆಯಲ್ಪಟ್ಟಿತು. ಕುಮುದಚಂದ್ರನಿಗೆ ಆಶ್ಚರ್ಯವೂ ಕೋಪವೂ ಉಕ್ಕಿ ಬರುತ್ತಿದ್ದುವು. ಅವನು, "ಇದೇನು? ಎಲ್ಲರೂ ಹುಚ್ಚರಾಗಿಬಿಟ್ಟಿದ್ದಾರೆಯೋ?" ಎಂದು ಕೂಗಿಕೊಂಡನು.

ಗಾಬರಿಗೊಂಡಿದ್ದ ಭೃತ್ಯನೊಬ್ಬನು ಕೊಟಡಿಯನ್ನು ಪ್ರವೇಶಿಸಿದನು. ಅವನು "ಸ್ವಾಮಿ! ಸ್ವಾಮಿ!" ಎನ್ನುತ್ತಿದ್ದನು. ತನ್ನ ವಿಧಿನಿಯಮಗಳು ಹೀಗೆರಡುಬಾರಿ ಉಲ್ಲಂಘಿಸಲ್ಪಟ್ಟುದನ್ನು ಕಂಡು ಕುಮುದಚಂದ್ರನು ಕಾತರನಾಗಿ "ಏನು! ಎಲ್ಲವನ್ನೂ ಹೇಳು" ಎಂದನು.

"ಸ್ವಾಮಿ! ಓಡಿಹೋಗಿ! ಓಡಿಹೋಗಿ! ಬೇಗನೆ ಓಡಿಹೋಗಿ"

"ಓಡಿಹೋಗಲೆ? ಅದೇಕೆ?"

"ಸ್ವಾಮಿ! ಮನೆಯತುಂಬ ಸೈನಿಕರಿದ್ದಾರೆ!"

"ಅವರಿಗೇನುಬೇಕಂತೆ?"

"ನಿಮ್ಮನ್ನು ನೋಡಬೇಕಂತೆ."

"ಏಕೆ ನೋಡಬೇಕಂತೆ?"

"ನಿಮ್ಮನ್ನು ದಸ್ತಗಿರಿಮಾಡಬೇಕಂತೆ"

"ನನ್ನನ್ನು ದಸ್ತಗಿರಿಮಾಡುವರೆ? ನನ್ನನ್ನು ದಸ್ತಗಿರಿಮಾಡುವರೆಂದೆ ನೀನು ಹೇಳಿದುದು?"

"ಅಹುದು ಸ್ವಾಮಿ! ಅವರ ಮುಖಂಡನಾಗಿ ಮ್ಯಾಜಿಸ್ಟ್ರೇಟನೊಬ್ಬನು ಬಂದಿದ್ದಾನೆ"

ಕುಮುದಚಂದ್ರನು ಎರಡು ಸಸಿಗಳನ್ನೂ ಕೈಯಲ್ಲಿಟ್ಟುಕೊಂಡು ಭೀತಿಯಿಂದ ಮಹಡಿಯ ಮೆಟ್ಟಲುಗಳ ಕಡೆಗೆ ನೋಡುತ್ತ, "ಇದರ ಅರ್ಥವೇನು?" ಎಂದನು.

ಸೇವಕನು, "ಅವರು ಮಹಡಿಯನ್ನು ಹತ್ತಿಬರುತ್ತಿದ್ದಾರೆ!" ಎಂದನು.

ಆ ಸಮಯದಲ್ಲಿ ಕುಮುದಚಂದ್ರನ ವೃದ್ಧಸೇವಕಿಯೂ ಸಸಿಗಳ ಕೊಟಡಿಗೆ ನುಗ್ಗಿಬಂದು, "ಮಗು! ಕುಮುದ! ನಿನ್ನಲ್ಲಿರುವ ಬಂಗಾರ ವನ್ನೂ ನಗಗಳನ್ನೂ ತೆಗೆದುಕೊಂಡು ಓಡು! ಮೊದಲು ಓಡು!" ಎಂದು ಕೂಗಿಕೊಂಡಳು.

ಕುಮುದಚಂದ್ರನು, "ನಾನು ತಪ್ಪಿಸಿಕೊಳ್ಳುವುದಾದರೂ ಹೇಗೆ, ತಾಯಿ?" ಎಂದನು.

"ಕಿಟಕಿಯಿಂದ ಹಾರಿಬಿಡು"

"ಇಪ್ಪತ್ತೈದಡಿಗಳಷ್ಟು ಎತ್ತರದಿಂದಲೆ?"

"ಕೆಳಗೆ ಆರಡಿಯಷ್ಟು ಮೆತ್ತನೆಯ ಭೂಮಿಯಿದೆ."-

"ನಿಜ. ಆದರೆ ನನ್ನ ಪುಷ್ಪಗಳಮೇಲೆ ಹಾರಿಬಿಡಲೆ?"

"ಚಿಂತೆಯಿಲ್ಲ. ಮೊದಲು ಹಾರಿಹೋಗು."

ಕುಮುದಚಂದ್ರನು ಮೂರನೆಯ ಸಸಿಯನ್ನೂ ಕೈಗೆ ತೆಗೆದುಕೊಂಡು ಕಿಟಕಿಯ ಬಳಿಗೆ ಹೋಗಿ ಅದನ್ನು ತೆರೆದು ಬಗ್ಗಿನೋಡಿದನು ಪುಷ್ಪಗಳಿಗೆ ಬಹಳ ನೋವುಂಟಾಗುವುದೆಂದೂ, ಬಹಳ ಎತ್ತರದಿಂದ ಹಾರಲೇಬೇಕಾಗುವುದೆಂಮೂ ಯೋಚಿಸಿ ಅವನು ಹಿಂತಿರುಗುತ್ತೆ, "ಖಂಡಿತವಾಗಿ ಹಾರಲಾಗದು" ಎಂದನು.

ಆ ಸಮಯದಲ್ಲಿ ಮಹಡಿಯನ್ನಾರೋ ಹತ್ತಿಬರುತ್ತಿದ್ದ ಶಬ್ದವಾಯಿತು. ವೃದ್ಧಸೇವಕಿಯು ಆಕಾಶದ ಕಡೆಗೆ ಕೈನೀಡುತ್ತೆ ಹೃದಯವಿದ್ರಾವಕವಾಗುವಂತೆ ಮೊರೆಯಿಡುತ್ತಿದ್ದಳು. ಕುಮುದಚಂದ್ರನಿಗೆ ತನ್ನ ರಕ್ಷಣೆಗಿಂತ ತನ್ನ ಸಸಿಗಳ ರಕ್ಷಣೆಯ ವಿಷಯವಾಗಿ ಹೆಚ್ಚು ಯೋಚನೆಯಿದ್ದಿತು ಅವನು ಸಸಿಗಳನ್ನು ಮುಚ್ಚಿಡಲು ಕಾಗದವೊಂದನ್ನು ಹುಡುಕುತ್ತಿದ್ದನು ರವಿವರ್ಮನು ಮೇಜಿನಮೇಲಿಟ್ಟಿದ್ದ ಕಾಗದವು ಅವನಿಗೆ ಕಂಡುಬಂದಿತು. ಗಾಬರಿಯಲ್ಲಿ ಅದುಹೇಗೆ ಅಲ್ಲಿ ಬಂತೆಂಬುದನ್ನೂ ಯೋಚಿಸದೆ ಅವನು ಅದರಲ್ಲಿ ತನ್ನ ಮೂರುಸಸಿಗಳನ್ನೂ ಸುತ್ತಿ ಅವುಗಳನ್ನು ತನ್ನ ವಕ್ಷಸ್ಥಳದಲ್ಲಿಟ್ಟುಕೊಂಡನು ಬಳಿಕ, ಏನಾಗುವುದೋ ನೋಡೋಣವೆಂದುಕೊಳ್ಳುತ್ತೆ ಹಾಗೆಯೇ ನಿಂತನು.

ಆ ಸಮಯದಲ್ಲಿ ಮ್ಯಾಜಿಸ್ಟ್ರೇಟನೊಬ್ಬನು ಕೊಟಡಿಯನ್ನು ಪ್ರವೇಶಿಸಿದನು. ಅವನ ಹಿಂದೆಯೇ ಕೆಲವರು ಸೈನಿಕರು ಬಂದುನಿಂತರು.

ಮ್ಯಾಜಿಸ್ಟ್ರೇಟನಿಗೆ ಕುಮುದಚಂದ್ರನ ಪರಿಚಯವು ಚೆನ್ನಾಗಿದ್ದಿತಾದರೂ ಅವನು ಅಭ್ಯಾಸಬಲದಿಂದ ನ್ಯಾಯಾಸ್ಥಾನದಲ್ಲಿ ಮೊದಲು ಕೇಳುವ ಪ್ರಶ್ನೆಯನ್ನು ಮೊದಲು ಕೇಳಿದನು—"ನೀನೇ ಕುಮುದಚಂದ್ರನೋ ?"

ಕುಮುದಚಂದ್ರನು ವಿನಯಪೂರ್ವಕವಾಗಿ ಮ್ಯಾಜಿಸ್ಟ್ರೇಟನಿಗೆ ವಂದಿಸಿ, "ನಾನೇ ಕುಮುದಚಂದ್ರ ಸ್ವಾಮಿ! ನಿಮಗೆ ಆ ವಿಷಯವು ಚೆನ್ನಾಗಿತಿಳಿದಿದೆ" ಎಂದನು.

"ಹಾಗಾದರೆ ನಿನ್ನ ಮನೆಯಲ್ಲಿ ನೀನು ಬಚ್ಚಿಟ್ಟಿರುವ ರಾಜದ್ರೋಹಕರ ಪತ್ರಗಳನ್ನು ಮೊದಲು ಒಪ್ಪಿಸಿಬಿಡು."

ಕುಮುದಚಂದ್ರನು ರಾಜದ್ರೋಹಕರದ ಪತ್ರಗಳ ವಿಷಯವನ್ನು ಕೇಳಿ ಮೂಕನಂತೆ ಸ್ವಲ್ಪ ಹೊತ್ತು ನಿಂತನು. ಬಳಿಕ, "ರಾಜದ್ರೋಹಕರ ಪತ್ರಗಳೆ ?" ಎಂದನು.

" ಏನನ್ನೂ ಅರಿಯದವನಂತೆ—ಆಶ್ಚರ್ಯಾನ್ವಿತನಂತೆ—ನಟಿಸ ಬೇಡ."

"ಮ್ಯಾಜಿಸ್ಟ್ರೇಟರೆ! ಪ್ರಮಾಣಮಾಡಿ ಹೇಳುತ್ತೇನೆ ತಮಗೇನು ಬೇಕೆಂಬುದನ್ನು ಖಂಡಿತವಾಗಿ ತಿಳಿಯಲಾರದವನಾಗಿದ್ದೇನೆ "

"ಹಾಗಾದರೆ ನಿನಗೆ ಸ್ವಲ್ಪ ವಿಶದವಾಗಿ ಹೇಳುತ್ತೇನೆ- ಕಳೆದ ಜನವರಿ ತಿಂಗಳಲ್ಲಿ ರಾಜದ್ರೋಹಿಯಾದ ರಮಾನಾಥನು ನಿನ್ನ ಬಳಿ ಇಟ್ಟ ಕಾಗದಗಳನ್ನು ಕೊಡು "

ಕುಮುದಚಂದ್ರನಿಗೆ ಯಾವುದೋ ವಿಷಯವು ಜ್ಞಾಪಕಕ್ಕೆ ಬಂದಂ ತಾಯಿತು. ಮ್ಯಾಜಿಸ್ಟ್ರೇಟನು ಅವನ ಮುಖವನ್ನು ನೋಡಿ, "ಓಹೋ! ಈಗ ಸ್ಮೃತಿಗೆ ಬರುತ್ತಿದಯಲ್ಲವೆ ?" ಎಂದನು

ಕುಮುದಚಂದ್ರ—ನಿಜ ಆದರೆ ತಾವು ರಾಜದ್ರೋಹಕರವಾದ ಪತ್ರಗಳ ವಿಷಯವಾಗಿ ಹೇಳೋಣಾಯಿತು ಅಂತಹ ಪತ್ರಗಳಾವುವೂ ನನ್ನಲ್ಲಿಲ್ಲ

ಮ್ಯಾಜಿಸ್ಟ್ರೇಟ—ಇಲ್ಲವೆಂದೇಹೇಳುವೆಯಾ ?

ಕುಮುದಚಂದ್ರ—ಖಂಡಿತವಾಗಿಯೂ ನನ್ನಲ್ಲಿಲ್ಲ

ಮ್ಯಾಜಿಸ್ಟ್ರೇಟನು ಕೊಟಡಿಯ ಸುತ್ತಲೂ ನೋಡಿ, "ನಿನ್ನ ಸಸಿಗಳ ಕೊಟಡಿಯೆನ್ನುವುದಾವುದು ?" ಎಂದನು

ಕುಮುದ—ಈಗ ತಾವಿರುವ ಕೊಟಡಿಯೇ ಸಸಿಗಳ ಕೊಟಡಿ.

ಮಾಜಿಸ್ಟ್ರೇಟನು ಸರಿಯೆನ್ನುತ್ತೆ ಡ್ರಾಯರೊಂದರಬಳಿಗೆ ಹೋಗಿ ಅದನ್ನು ಎಳೆದು ಅದರಲ್ಲಿದ್ದ ಕೆಲವು ಪತ್ರಗಳನ್ನು ತೋರಿಸಿದನು. ಒಡನೆಯೇ, "ಆ ಪತ್ರಗಳನ್ನು ನನಗೆ ಕೊಡಬೇಕು"—ಎಂದನು

ಕುಮುದ—ಅವುಗಳನ್ನು ಮಾತ್ರ ಕೊಡಲಾರೆ ಮ್ಯಾಜಿಸ್ಟ್ರೇಟರವರೆ! ಅವು ನನ್ನವಲ್ಲ. ನನ್ನಲ್ಲಿದ್ದ ನಂಬಿಕೆಯಿಂದ ಅದನ್ನಾರೋ ನನ್ನಲ್ಲಿಟ್ಟಿರು ವರು. ಅಂತಹ ನಂಬಿಕೆಯು ಪವಿತ್ರವಾದುದು.

ಮ್ಯಾಜಿಸ್ಟ್ರೇಟ—ಕುಮುದಚಂದ್ರ! ಆ ಪತ್ರಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕೆಂದು ನಾನು ಆಜ್ಞೆಮಾಡುತ್ತೇನೆ.

ಅವನು ತೋರಿದ ಡ್ರಾಯರಿನಲ್ಲಿಯೇ ರಮಾನಾಥನು ಕೊಟ್ಟಿದ್ದ ಪತ್ರಗಳಿದ್ದುವು. ಪೋಲೀಸಿನವರಿಗೆ ಸರಿಯಾದ ಸಮಾಚಾರವನ್ನಾರೋ ತಿಳಿಸಿದ್ದಂತೆ ತೋರಿಬರುತ್ತಿದ್ದಿತು.

ಮ್ಯಾಜಿಸ್ಟ್ರೇಟನ ಆಜ್ಞೆಯನ್ನು ಕೇಳಿ ಕುಮುದಚಂದ್ರನು ವಿಸ್ಮಿತನಾಗಿ ಅಲುಗಾಡದೆ ನಿಂತಿದ್ದನು. ಮ್ಯಾಜಿಸ್ಟ್ರೇಟನು, "ಆಹಾ! ನೀನು ಕೊಡಲಿಷ್ಟಪಡುವುದಿಲ್ಲವಲ್ಲವೆ? ನಾನೇ ತೆಗೆದುಕೊಳ್ಳುತ್ತೇನೆ" ಎಂದನು. ಡ್ರಾಯರ್‌ನಲ್ಲಿ ಇಪ್ಪತ್ತು ಸಸಿಗಳು ಇಡಲ್ಪಟ್ಟಿದ್ದುವು. ಅವಕ್ಕೆ ನಂಬರುಗಳು ಕೊಡಲ್ಪಟ್ಟಿದ್ದುವು. ಅವುಗಳ ಪಕ್ಕದಲ್ಲಿ ರಮಾನಾಥನು ಕೊಟ್ಟಿದ್ದ ಕಾಗದಗಳ ಕಟ್ಟಿದ್ದಿತು. ಮ್ಯಾಜಿಸ್ಟ್ರೇಟನು ಕಟ್ಟನ್ನು ಈಚೆಗೆ ತೆಗೆದು ಕಟ್ಟನ್ನು ಬಿಚ್ಚಿ ಕೆಲವು ಪತ್ರಗಳನ್ನೋದಿಕೊಂಡನು. ಬಳಿಕ ಹೃದಯಭೇದಕ ಸ್ವರದಲ್ಲಿ, "ಸರಿ! ಸರ್ಕಾರಕ್ಕೆ ಸರಿಯಾದ ಸಮಾಚಾರವೇ ಬಂದಿದೆ" ಎಂದು ಗರ್ಜಿಸಿದನು.

ಕುಮುದಚಂದ್ರನು ಅಪ್ರತಿಭನಾಗಿ, "ಅದೇನು? ಹಾಗಂದರೇನು?" ಎಂದು ಕೇಳಿದನು.

"ಕುಮುದಚಂದ್ರ! ಏನನ್ನೂ ಅರಿಯದವನಂತೆ ನಟಿಸಬೇಡ. ನನ್ನೊಡನೆ ಬಾ"

"ಅದೇನು ಹಾಗೆ ಹೇಳುವಿರಿ. ನಿಮ್ಮೊಡನೆ ಬರಬೇಕೆ?"

"ಅಹುದು ನಿನ್ನನ್ನು ದಸ್ತಗಿರಿಮಾಡಿದ್ದೇನೆ."

"ದಸ್ತಗಿರಿಯೆ! ನಾನೇನು ಮಾಡಿದ್ದೇನೆ?"

"ಅದನ್ನು ನಾನರಿಯೆ. ನ್ಯಾಯಾಧೀಶರ ಮುಂದೆ ಎಲ್ಲವನ್ನೂ ಹೇಳು."

"ಎಲ್ಲಿ?"

"ಸುರನಗರಿಯಲ್ಲಿ."

ಕುಮುದಚಂದ್ರನಿಗೆ ಆಶ್ಚರ್ಯದಿಂದಲೂ ಭೀತಿಯಿಂದಲೂ ಮಾತೇ ಹೊರಡಲಿಲ್ಲ. ಅವನ ವೃದ್ಧಸೇವಕಿಯು ಅವನನ್ನಪ್ಪಿಕೊಂಡು ಅತ್ತಳು.

ಅವನ ಇತರ ಸೇವಕರು ಗಟ್ಟಿಯಾಗಿಯೇ ರೋದನಮಾಡುತ್ತಿದ್ದರು. ಮ್ಯಾಜಿಸ್ಟ್ರೇಟನು ಅವನನ್ನು ಗಾಡಿಯೊಂದರಲ್ಲಿ ಕೂಡಿಸಿಕೊಂಡು ಸುರನಗರಿಯ ಕಡೆಗೆ ಹೊರಟುಹೋದನು.

# ಅಷ್ಟಮ ಪರಿಚ್ಛೇದ

## ವಿಷಕಂಠನ ವಿಷಯ

ಪೂರ್ವಪರಿಚ್ಛೇದದಲ್ಲಿ ಉಕ್ತವಾದ ಘಟನೆಯು ನಡೆದುದು ವಿಷಕಂಠನ ಕುಯುಕ್ತಿಯಿಂದಲೇ ಎಂಬು ಈ ವೇಳೆಗೆ ಪಾಠಕರಿಗೆ ಅರ್ಥವಾಗಿರಬಹುದು.

ವಿಷಕಂಠನು ದುರ್ಬೀನಿನ ಸಹಾಯದಿಂದ ರಮಾನಾಥನಿಗೂ ಕುಮುದಚಂದ್ರನಿಗೂ ನಡೆದ ಭೇಟಿಯನ್ನು ಮೊದಲಿನಿಂದ ಕೊನೆಯ ವರೆಗೆ ಪರೀಕ್ಷಿಸುತ್ತಿದ್ದನು. ಕುಮುದನು ಡ್ರಾಯರಿನಲ್ಲಿಟ್ಟಿದು ಮಹತ್ತರವಾದ ಪತ್ರಿಕೆಗಳ ಕಟ್ಟೆಂದು ಅವನಿಗೆ ತಿಳಿದುಹೋಯಿತು '

ಅವನು ಕುಮುದಚಂದ್ರನಿಗಿಂತ ರಾಜಕೀಯದಲ್ಲಿ ಹೆಚ್ಚು ಪರಿಶ್ರಮವುಳ್ಳವನಾಗಿದ್ದನು ಆದುದರಿಂದ ರಮಾನಾಥ ಉಮಾನಾಥರು ರಾಜದ್ರೋಹಿಗಳೆಂದು ದಸ್ತಗಿರಿಯಾದುದನ್ನು ಅವನು ಮೊದಲು ಕೇಳಿದನು. ತಾನು ಒಂದು ಮಾತನ್ನು ಅಧಿಕಾರಿಗಳಿಗೆ ಹೇಳಿಬಿಟ್ಟರೆ ಕುಮುದಚಂದ್ರನೂ ದಸ್ತಗಿರಿ ಮಾಡಲ್ಪಡುವನೆಂದು ಅವನು ಯೋಚಿಸತೊಡಗಿದನು. ತನ್ನ ಹೇಳಿಕೆಯಿಂದ ಕುಮುದಚಂದ್ರನು ಗಲ್ಲಿಗೇರಿಸಲ್ಪಡಬಹುದೆಂದು ಮೊದಲು ಮೊದಲು ವಿಷಕಂಠನು ಎಲ್ಲವನ್ನೂ ಹೇಳಲು ಹಿಂತೆಗೆದನು. ಆದರೆ ಬರುತ್ತೆ ಬರುತ್ತೆ ಅವನಿಗೆ ಕುಮುದನ ಹಿತಚಿಂತನೆಯು ದೂರವಾಗತೊಡಗಿತು. ಅದಲ್ಲದೆ ಅವನು ತನ್ನಲ್ಲಿಯೇ ನ್ಯಾಯಾನ್ಯಾಯಗಳನ್ನು ವಿಮರ್ಶಿಸಿಕೊಳ್ಳತೊಡಗಿದನು—"ರಮಾನಾಥನು ದ್ರೋಹಿಯೆಂದು ದಸ್ತಗಿರಿಮಾಡಲ್ಪಟ್ಟಿದ್ದಾನೆ. ಆದುದರಿಂದ ಅವನು ಕೆಟ್ಟವನೇ ಸರಿ. ನನ್ನನ್ನಾರೂ ದಸ್ತಗಿರಿ ಮಾಡಿಲ್ಲ. ಸರ್ವಸ್ವಾತಂತ್ರ್ಯವನ್ನೂ ಹೊಂದಿದ್ದೇನೆ. ಎಲ್ಲಿ ಬೇಕಾದರೂ ಹೋಗಬಹುದು. ಆದುದರಿಂದ ನಾನು ಒಳ್ಳೆಯವನೇ ಸರಿ.

ರಮಾನಾಥನು ಕೆಟ್ಟವನಾದರೆ-ಅದರಲ್ಲಾವ ಸಂದೇಹವೂ ಇಲ್ಲ, ಅವನನ್ನು ದ್ರೋಹಿಯೆಂದು ಹಿಡಿದುಹಾಕಿದ್ದಾರೆ—ಅವನ ಅನುಯಾಯಿ ಕುಮುದ ಚಂದ್ರನೂ ನಿಸ್ಸಂದೇಹವಾಗಿ ಕೆಟ್ಟವನೇ ಆಗಿರಬೇಕು. ನಾನು ಒಳ್ಳೆಯವ ನಾಗಿರುವುದರಿಂದ—ಒಳ್ಳೆಯವರು ಕೆಟ್ಟವರನ್ನು ಬಯಲಿಗೆಳೆಯ ಬೇಕಾದುದು ಧರ್ಮವಾದುದರಿಂದ—ಕುಮುದಚಂದ್ರನ ವಿಷಯವಾಗಿ ಎಲ್ಲವನ್ನೂ ಸರ್ಕಾರಕ್ಕೆ ತಿಳಿಸುವುದು ನನ್ನ ಕರ್ತವ್ಯ."

ಈ ಅಪೂರ್ವವಾದಸರಣಿಯಿಂದ ತನ್ನ ಕರ್ತವ್ಯತಾಜ್ಞಾನವನ್ನು ನಿರ್ಧರಿಸಿಕೊಂಡ ವಿಷಕಂಠನು ಕರ್ತವ್ಯಾನುಷ್ಠಾನದಲ್ಲಿ ತಟ್ಟನೆ ನಿರತನಾಗಿ ಬಿಡುತ್ತಿದ್ದನೋ ಇಲ್ಲವೋ ಹೇಳಲಾಗದು. ಅವನ ಕರ್ತವ್ಯ—ಅವನ ಅಸೂಯೆ ಇವುಗಳೊಂದುಕಡೆ ಸರ್ಕಾರಕ್ಕೆ ದೂರು ಹೇಳೆಂದು ಅವನನ್ನು ಪ್ರೇರೇಪಿಸುತ್ತಿದ್ದುದು ನಿಜ. ಆದರೆ ಹಣದಾನೆಯು ಅವನನ್ನು ಪೀಡಿಸು ತ್ತಿದ್ದುದರಿಂದಲೇ ಅವನು ಸರ್ಕಾರಕ್ಕೆ ಎಲ್ಲವನ್ನೂ ಹೇಳಲು ನಿರ್ಧರಿ ಸಿದುದು ಅದು ಹೇಗೆಂದು ಸ್ವಲ್ಪ ವಿವರಿಸುವೆವು

ವಿಷಕಂಠನು ದುರ್ಬೀನಿನ ಸಹಾಯದಿಂದ ಎಲ್ಲವನ್ನೂ ನೋಡು ತ್ತಿದ್ದು ಕರಿಯ ಟ್ಯೂಲಿಪನ್ನು ಖಂಡಿತವಾಗಿ ಕುಮುದನು ಕಂಡುಹಿಡಿದು ಬಿಡುವುದಾಗಿ ತಿಳಿದನು. ಕುಮುದನು ಸರಳಸ್ವಭಾವದವನೂ ವಿನಯ ಸಂಪನ್ನನೂ ಆಗಿದ್ದುದರಿಂದ ತನ್ನ ಮುಖ್ಯ ಮಿತ್ರರೊಡನೆ ಮಾತ ನಾಡುವಾಗ ಕೃಷ್ಣವರ್ಣದಟ್ಯೂಲಿಪನ್ನು ಕಂಡುಹಿಡಿದವಿಷಯವನ್ನು ಹೇಳಿ ಬಿಟ್ಟಿದ್ದನು ೧೬೭೩ನೇ ಇಸವಿಯಲ್ಲಿ ತನಗೆ ಟ್ಯೂಲಿಪ್ ಸಂಘದವರಿಂದ ಲಕ್ಷರೂಪಾಯಿಗಳು ಬರುವುದು ಖಂಡಿತವೆಂದೂ ಹೇಳಿಬಿಟ್ಟಿದ್ದನು

ಹೀಗೆ ಕುಮುದನಿಗೆ ಬಹುಮಾನವು ದೊರಕುವುದು ಖಂಡಿತವೆಂದು ತಿಳಿಯುತ್ತಲೇ ವಿಷಕಂಠನ ಅಸೂಯೆಯು ದ್ವಿಗುಣಿತವಾಯಿತು ಅವನು ಯೋಚಿಸತೊಡಗಿದನು. ಕುಮುದಚಂದ್ರನನ್ನು ದಸ್ತಗಿರಿ ಮಾಡಿಬಿಟ್ಟರೆ ಆಗ ಅವನ ಉದ್ಯಾನದಲ್ಲಿರುವ ಟ್ಯೂಲಿಪ್‌ಸಸಿಗಳನ್ನಾರೂ ಜಾಗರೂಕತೆ ಯಿಂದ ಕಾಯಲಾರರು. ರಾತ್ರಿಯಲ್ಲಿ ಕರಿಯಟ್ಯೂಲಿಪ್‌ಸಸಿಯನ್ನು ಉದ್ಯಾನದಿಂದ ಹಾರಿಸಿಬಿಟ್ಟರೆ ಆ ಸಸಿಯು ಕುಮುದನಿಗಾಗಿ ಪುಷ್ಪಗಳನ್ನು ಬಿಡುವ ಯೋಚನೆಯನ್ನು ತ್ಯಜಿಸಿ ತನಗಾಗಿಯೇ ಹೂವುಗಳನ್ನು ಬಿಡ

ತೊಡಗುವುದು! ಅವನಿಗೆ ಬರುವ ಬಹುಮಾನವು ತನಗೇ ಬರುವುದು! ಅಲ್ಲದೆ ಅವುಗಳನ್ನು 'ವಿಷಕಂಠ ಕುಸುಮ' ಎಂದು ಕರೆಯುತ್ತಿದ್ದರೆ ಎಂತಹ ಆನಂದವಾಗುವುದು! ಶತ್ರುವಿನ ಮೇಲೆ ಸೇಡು ತೀರಿಸಿಕೊಂಡು ಲಕ್ಷರೂಪಾಯಿಗಳ ಸಂಪಾದನೆ ಮಾಡುವುದಾದರೆ ಬೇಡವೆನ್ನುವವರಾರು?

ವಿಷಕಂಠನು ನಿದ್ರೆಯಿಲ್ಲದಿದ್ದಾಗ ಕರಿಯ ಟ್ಯೂಲಿಪದ ವಿಷಯ ವಾಗಿಯೇ ಯೋಚಿಸುತ್ತಿದ್ದನು ನಿದ್ರೆಮಾಡುತ್ತಿದ್ದಾಗ ಅದರ ವಿಷಯ ವಾಗಿ ಕನಸುಕಾಣುತ್ತಿದ್ದನು.

ಹೀಗಾಗಿ ಆಗಸ್ಟ್ ೧೯ನೇ ತಾರೀಖಿನ ದಿನ ಅವನು ಸಹಿಯಿಲ್ಲದ ಪತ್ರವೊಂದನ್ನು ಬರೆದನು. ಅದರಲ್ಲಿ ಎಲ್ಲವೂ ವಿವರವಾಗಿ ವರ್ಣಿಸ ಲ್ಪಟ್ಟಿದ್ದಿತು ಅದನ್ನು ಅವನು ಅಂಚೆಗೆ ಹಾಕಿದನು ಪ್ರಪಂಚದಲ್ಲಿ ಆ ಪತ್ರದಿಂದುಂಟಾದ ಅನಾಹುತವು ಮತ್ತಾವ ಪತ್ರದಿಂದಲೂ ಸಂಭವಿ ಸಿರಲಾರದು

ಆ ದಿನ ಸಾಯಂಕಾಲವೇ ಆ ಪತ್ರವು ನಗರದ ಮುಖ್ಯ ಮ್ಯಾಜಿಸ್ಟ್ರೇ ಟನಿಗೆ ತಲಪಿತು ಅವನು ಕ್ಷಣಮಾತ್ರವೂ ವಿಳಂಬ ಮಾಡದೆ ತನ್ನ ಸಹೋದ್ಯೋಗಿಗಳಾದ ಮ್ಯಾಜಿಸ್ಟ್ರೇಟರನ್ನು ಮಂತ್ರಾಲೋಚನೆಗೆ ಕರೆದನು. ಮರುದಿನ ಬೆಳಿಗ್ಗೆ ಎಲ್ಲರೂ ಸೇರಿದರು ಕುಮುದಚಂದ್ರನನ್ನು ದಸ್ತಗಿರಿ ಮಾಡಬೇಕೆಂದು ಇತ್ಯರ್ಥವಾಯಿತು. ಆ ಮ್ಯಾಜಿಸ್ಟ್ರೇಟರ ಗುಂಪಿನ ಲ್ಲೊಬ್ಬನು ದಸ್ತಗಿರಿ ಮಾಡುವುದೆಂದೂ ಗೊತ್ತಾಯಿತು. ಅದರಂತೆಯೇ ಕುಮುದಚಂದ್ರನ ದಸ್ತಗಿರಿಯಾಯಿತೆಂದು ವಾಚಕರು ಬಲ್ಲರು.

ಕುಮುದಚಂದ್ರನು ದಸ್ತಗಿರಿ ಮಾಡಲ್ಪಟ್ಟ ದಿನ ವಿಷಕಂಠನು ಲಜ್ಜೆ ಯಿಂದಲೋ ಅಥವಾ ನಿಶ್ಶಕ್ತಿಯಿಂದಲೋ—ತನ್ನ ದುರ್ಬೀನನ್ನು ಉದ್ಯಾ ನದ ಕಡೆಗಾಗಲಿ, ಸಂಶೋಧನಾಗಾರದ ಕಡೆಗಾಗಲಿ, ಸಸಿಗಳ ಕೊಟಡಿಯ ಕಡೆಗಾಗಲಿ ತಿರುಗಿಸಲಿಲ್ಲ. ಕುಮುದನ ಮನೆಯಲ್ಲಿ ಏನು ನಡೆಯುವು ದೆಂಬುದನ್ನವನು ಚೆನ್ನಾಗಿ ಬಲ್ಲವನಾಗಿದ್ದನು. ಅವನ ಏಕಮಾತ್ರ ಸೇವಕನು ಬಂದಾಗ ವಿಷಕಂಠನು ಹಾಸಿಗೆಯಿಂದೇಳಲೇ ಇಲ್ಲ. ವಿಷ ಕಂಠನು ಅವನನ್ನು ನೋಡಿ, "ನಾನು ಈ ದಿನ ಏಳಲಾರೆ. ನನಗೆ ಮೈಯಲ್ಲಿ ಚೆನ್ನಾಗಿಲ್ಲ" ಎಂದನು. ಸೇವಕನ ಯಜಮಾನನು ಕುಮುದ

ನನ್ನು ಕಂಡು ಅಸೂಯೆಪಡುತ್ತಿದ್ದಂತೆಯೇ ಸೇವಕನು ಕುಮುದನ ಸೇವಕರನ್ನು ನೋಡಿ ಅವರೆಷ್ಟು ಸುಖವಾಗಿರುವರೆಂದು ಅಸೂಯೆಪಡು ತ್ತಿದ್ದನು. ಯಜಮಾನನ ಮಾತನ್ನು ಕೇಳಿ ಅವನು ಮರುಮಾತಾಡದೆ ಹೊರಟುಹೋದನು.

ಸುಮಾರು ಒಂಭತ್ತು ಗಂಟೆಯ ಸಮಯದಲ್ಲಿ ಬೀದಿಯಲ್ಲಿ ಬಹಳ ಶಬ್ದವಾಗುತ್ತಿದ್ದಂತೆ ವಿಷಕಂಠನಿಗೆ ಕೇಳಿಬಂದಿತು. ಅವನು ನಿಜವಾಗಿ ಕಾಹಿಲೆಯಿಂದಿದ್ದವನಿಗಿಂತಲೂ ಹೆಚ್ಚು ಕಾತರನಾಗಿದ್ದು ನಡುಗುತ್ತಿದ್ದನು. ಅವನಿಗೆ ಅತೀವ ಜ್ವರವು ಪ್ರಾಪ್ತವಾದಂತಿತ್ತು. ಆ ಸಮಯದಲ್ಲಿ ಅವನ ಸೇವಕನು ಪುನಃ ಬಂದು, "ಸ್ವಾಮಿ! ಬೀದಿಯಲ್ಲೇನು ನಡೆಯುತ್ತಿದೆ ಯೆಂದು ನೀವರಿಯಿರಾ?" ಎಂದನು.

ಕುಮುದನ ಕಷ್ಟವನ್ನು ನೋಡಿ ಅವನು ಸ್ವಲ್ಪ ಪಶ್ಚಾತ್ತಾಪ ಪಡುತ್ತಿದ್ದನಾದರೂ ತನ್ನ ಯಜಮಾನನಿಗೆ ಸುಖಕರವಾದ ಸಮಾಚಾರ ವನ್ನು ಹೇಳುವೆನೆಂದವನು ಹಿಗ್ಗಿಹೋಗಿದ್ದನು.

ವಿಷಕಂಠನು ಕ್ಷೀಣಸ್ವರದಲ್ಲಿ ನಾನರಿಯುವುದು ಹೇಗೆಂದು ಕೇಳಿದನು

ಸೇವಕ—ಕುಮುದಚಂದ್ರರು ರಾಜದ್ರೋಹಿಗಳೆಂದು ಈಗ ತಾನೆ ಅವರನ್ನು ದಸ್ತಗಿರಿ ಮಾಡಿದರು.

ವಿಷಕಂಠನು ಪುನಃ ಅದೇ ಸ್ವರದಲ್ಲಿ "ಹುಚ್ಚ! ಹೋಗು. ಹಾಗೆಂದಿಗೂ ಆಗುವ ಸಂಭವವಿಲ್ಲ" ಇಂದನು.

ಸೇವಕ—ನಿಜಸ್ವಾಮಿ! ಅಂತೂ ಜನರು ಹೇಳುತ್ತಿರುವುದು ಹಾಗೆಯೇಸ್ವಾಮಿ! ಅಲ್ಲದೆ ಮ್ಯಾಜಿಸ್ಟ್ರೇಟರೊಬ್ಬರೂ ಕೆಲವರು ಸೈನಿಕರೂ ಮನೆಯನ್ನು ಪ್ರವೇಶಿಸಿದುದನ್ನು ನಾನೇ ಕಣ್ಣಾರೆ ಕಂಡೆನು.

ವಿಷಕಂಠ—ನೀನೇ ನೋಡಿರುವೆಯಾದರೆ ಅದೇ ಬೇರೆ ವಿಷಯವಾಗಿ ಹೋಯಿತು.

ಸೇವಕ—ಹೇಗಾದರೂ ಇರಲಿ. ನಾನೇ ಹೋಗಿ ಪುನಃ ವಿಚಾರಿಸಿ ನೋಡುತ್ತೇನೆ. ತಾವು ನಿಶ್ಚಿಂತರಾಗಿರಿ ಸ್ವಾಮಿ! ತಮಗೆ ಎಲ್ಲವನ್ನೂ ಬಂದ ಮೇಲೆ ತಿಳಿಸುತ್ತೇನೆ.

ವಿಷಕಂಠನು ಮೌನದಿಂದ ಇದ್ದುದರಿಂದ ಸಮ್ಮತಿಸೂಚಿಸಿದಂತಾಯಿತು. ಸೇವಕನು ಹೊರಟುಹೋಗಿ ಸುಮಾರು ಅರ್ಧಗಂಟೆಯಾದ ಬಳಿಕ ಬಂದನು. ಒಡನೆಯೇ, "ಸ್ವಾಮಿ! ನಾನು ಹೇಳಿದುದೆಲ್ಲವೂ ನಿಜ" ಎಂದನು

"ಅದುಹೇಗೆ?"

"ಕುಮುದಚಂದ್ರರನ್ನು ದಸ್ತಗಿರಿಮಾಡಿ ಗಾಡಿಯೊಂದರಲ್ಲಿ ಕುಳ್ಳಿರಿಸಿದ್ದಾರೆ ಅವರನ್ನು ಸುರನಗರಿಗೆ ಕರದುಕೊಂಡು ಹೋಗುತ್ತಿದ್ದಾರೆ"

"ಸುರನಗರಿಗೆ?"

"ಅಹುದುಸ್ವಾಮಿ! ಸುರನಗರಿಗೆ ಜನಗಳು ಹೇಳಿಕೊಳ್ಳುವುದು ನಿಜವಾದರೆ ಆತನಿಗೆ ಒಳ್ಳೆಯದಾಗುವಂತೆ ತೋರುವುದಿಲ್ಲ"

"ಜನರು ಏನು ಹೇಳುತ್ತಾರೆ?"

"ಅವರು ಹೇಳುವುದೇನೆಂದರೆ—ಅದೆಷ್ಟರಮಟ್ಟಿಗೆ ನಿಜವೋ ನಾನರಿಯೆ ಸ್ವಾಮಿ!—ಈ ಸಮಯದಲ್ಲಿ ರಮಾನಾಥಬಾಬುಗಳನ್ನೂ ಉಮಾನಾಥಬಾಬುಗಳನ್ನೂ ಖೂನಿಮಾಡುತ್ತಿದ್ದಾರಂತೆ."

ವಿಷಕಂಠನು ಅದನ್ನು ಕೇಳಿ ಕಣ್ಣುಮುಚ್ಚಿಕೊಂಡು, "ಅಯ್ಯೋ!" ಎಂದು ನರಳತೊಡಗಿದನು. ಖೂನಿಯಾಗುತ್ತಿದ್ದ ದೃಶ್ಯವನ್ನು ಮನಸ್ಸಿಗೆ ತಂದುಕೊಂಡು ಅವನು ಸ್ವಲ್ಪ ಯೋಚಿಸುತ್ತಿದ್ದನು.

ಸೇವಕನು ಹೊರಟುಹೋಗುತ್ತ, "ಇದೇನು! ವಿಷಕಂಠಬಾಬುಗಳಿಗೆ ಬಹಳ ಕಾಹಿಲೆಯಾಗಿರಬೇಕು ಇಲ್ಲವಾದರೆ ನಾನು ಹೇಳಿದ ಒಳ್ಳೆಯ ಸಮಾಚಾರವನ್ನು ಕೇಳಿ ಕುಣಿದಾಡುತ್ತಿದ್ದರು!" ಎಂದುಕೊಂಡನು.

ಆ ಸಮಯದಲ್ಲಿ ವಾಸ್ತವವಾಗಿ ವಿಷಕಂಠನು ವಿಷಮಜ್ವರಪೀಡಿತನಂತೆ—ಮತ್ತೊಬ್ಬನನ್ನು ಖೂನಿಮಾಡಿದವನಂತೆ—ತಲ್ಲಣಗೊಂಡಿದ್ದನು.

ವಿಷಕಂಠನು ಎರಡು ಧ್ಯೇಯಗಳನ್ನಿಟ್ಟುಕೊಂಡು ಖೂನಿ ನಡೆಸಿದ್ದನು. ಅವುಗಳಲ್ಲೊಂದು ಸಿದ್ಧಿಸಿದ್ದಿತು. ಮತ್ತೊಂದು ಸಿದ್ಧಿಸಬೇಕಾಗಿದ್ದಿತು.

ಆ ದಿನ ರಾತ್ರಿಯಾಗುವುದನ್ನೇ ಕಾದಿದ್ದು ವಿಷಕಂಠನು ಹಾಸಿಗೆಯಿಂದೆದ್ದನು. ಕತ್ತಲಲ್ಲಿಯೇ ಹೋಗಿ ತನ್ನ ವೃಕ್ಷವನ್ನು ಹತ್ತಿ ನೋಡಿ

ದನು. ಅವನು ಯೋಚಿಸುತ್ತಿದ್ದುದು ತಪ್ಪಾಗಿರಲಿಲ್ಲ. ಕುಮುದಚಂದ್ರನ ಉದ್ಯಾನದಲ್ಲಿ ಸೇವಕರಾರೂ ಇರಲಿಲ್ಲ ಮನೆಯೂ ಸೇವಕರೂ ದಿಗ್ಭ್ರಾಂತರಾಗಿದ್ದರು

ಗಡಿಯಾರವು ಹತ್ತು-ಹನ್ನೊಂದು-ಹನ್ನೆರಡು ಗಂಟೆಗಳನ್ನು ಹೊಡೆಯಿತು.

ಮಧ್ಯರಾತ್ರಿಯಲ್ಲಿ ವಿಷಕಂಠನು ನಡುಗುತ್ತ ವೃಕ್ಷದಿಂದಿಳಿದನು. ಅವನ ಎದೆಯು ಢವಢವನೆ ಬಡಿದುಕೊಳ್ಳುತ್ತಿತ್ತು ಅವನು ಏಣಿಯೊಂದನ್ನು ಗೋಡೆಯಬಳಿ ಇಟ್ಟು ಅದನ್ನು ಹತ್ತಿ ನೋಡಿದನು. ಯಾರೂ ಕಾಣಬರಲಿಲ್ಲ ಎಲ್ಲೆಲ್ಲಿಯೂ ನಿಶ್ಶಬ್ದ, ನೀರವ ಕುಮುದನ ವೃದ್ಧಸೇವಕಿಯ ಕಿರುಮನೆಯಲ್ಲಿ ಮಾತ್ರ ಸಣ್ಣ ದೀಪವೊಂದು ಮಿಣುಗುತ್ತಿದ್ದಿತು. ವಿಷಕಂಠನಿಗೆ ಆ ನೀರವತೆಯಿಂದ ಧೈರ್ಯವಾಯಿತು. ಅವನು ಗೋಡೆಯ ಮೇಲೆ ಕುಳಿತು, ಏಣಿಯೊಂದನ್ನು ತನ್ನ ಉದ್ಯಾನದಿಂದ ಕುಮುದನ ಉದ್ಯಾನದ ಕಡೆಗಿಟ್ಟು ಕೆಳಕ್ಕಿಳಿದನು

ಕರಿಯಟ್ಯೂಲಿಪಿನ ತಾಯಿಸಸಿಯನ್ನು ಕುಮುದಚಂದ್ರನು ಎಲ್ಲಿ ನೆಟ್ಟಿದ್ದನೆಂಬುದನ್ನು ವಿಷಕಂಠನು ಚೆನ್ನಾಗಿ ಬಲ್ಲವನಾಗಿದ್ದನು. ಅವನು ಅದರಕಡೆಗೋಡಿದನು. ತನ್ನ ಹೆಜ್ಜೆಗಳ ಗುರುತು ಸಿಗಬಾರದೆಂದವನು ಗಟ್ಟಿಯಾಗಿದ್ದ ಅಂಚುಗಳಲ್ಲಿಯೇ ಓಡಿದನು. ಕರಿಯಟ್ಯೂಲಿಪಿನ ಸಸಿಯಬಳಿಗೆ ಹೋಗಿ ಪಾತಿಯಲ್ಲಿ ಕೈಯಿಟ್ಟನು. ಅಲ್ಲಿ ಸಸಿಯೇ ಇರಲಿಲ್ಲ! ತಾನು ತಪ್ಪುಮಾಡಿ ಬೇರೆಸಸಿಯನ್ನು ಹುಡುಕುತ್ತಿರಬೇಕೆಂದವನು ಮೊದಲು ಭಾವಿಸಿಕೊಂಡನು. ಅವನ ಹಣೆಯಮೇಲೆ ಬೆವರು ಹನಿಗಳು ನಿಂತುವು. ಅವನು ಪುನಃ ಹುಡುಕಿ ನೋಡಿದನು. ಏನೂಸಿಕ್ಕಲಿಲ್ಲ! ಅವನು ಸಸಿಯಿದ್ದಕಡೆ ಎಡಕ್ಕೂ ಬಲಕ್ಕೂ ಮುಂದೆಯೂ ಹಿಂದೆಯೂ ಹುಡುಕಿದನು. ಏನೂಸಿಕ್ಕಲಿಲ್ಲ! ಪಾತಿಯಲ್ಲಿ ಚೆನ್ನಾಗಿ ಕೈಯಿಟ್ಟು ನೋಡಿದುದರ ಮೇಲೆ ಆ ದಿನ ಬೆಳಿಗ್ಗೆ ಯಾರೋ ಮಣ್ಣನ್ನು ಅಗೆದು ಹಾಕಿದ್ದರೆಂದೂ ಸಸಿಯು ಅಲ್ಲಿರಲಿಲ್ಲವೆಂದೂ ಅವನಿಗೆ ನಿರ್ಧರವಾಯಿತು!

ವಿಷಕಂಠನು ಹಾಸಿಗೆಯಲ್ಲಿನ್ನೂ ಮಲಗಿದ್ದಾಗಲೇ ಕುಮುದಚಂದ್ರನು ತಾಯಿಸಸಿಯನ್ನು" ತೆಗೆದುಕೊಂಡು ತನ್ನ ಸಸಿಯ ಕೊಟಡಿಗೆ

ಹೋಗಿದ್ದನು. ಅದನ್ನು ಮೂರು ಸಸಿಗಳಾಗಿ ವಿಂಗಡಿಸಿದ್ದನು. ಇದೆಲ್ಲವನ್ನೂ ನಾವು ಮೊದಲೇ ಬಲ್ಲವರಾಗಿರುವೆವು.

ವಿಷಕಂರನು ಮತ್ತೂ ಪರೀಕ್ಷೆ ಮಾಡಬೇಕೆಂದು ಹತ್ತಾರು ಅಡಿಗಳಷ್ಟು ಭೂಮಿಯನ್ನು ಕೈಗಳಿಂದ ಬಗೆದನು ಕಡೆಗೆ ತನ್ನ ದುರದೃಷ್ಟದ ಪರಮಾವಧಿಯು ಅವನಿಗೆ ಗೋಚರವಾಯಿತು. ಅವನು ಅತೀವ ಕೋಪಾವಿಷ್ಟನಾಗಿ ಏಣಿಯ ಬಳಿಗೆ ಹೋಗಿ ಅದನ್ನು ಹತ್ತಿ ಗೋಡೆಯ ಮೇಲೆ ಕುಳಿತು ಏಣಿಯನ್ನೆಳೆದುಕೊಂಡನು. ಏಣಿಯನ್ನು ತನ್ನ ಉದ್ಯಾನದಲ್ಲೊಂದುಕಡೆ ಬಿಸುಟು ತಾನು ಗೋಡೆಯಿಂದ ಹಾರಿದನು.

ಕಡೆಗೆ ವಿಷಕಂರನಿಗೆ ಸ್ಫೂರ್ತಿಯೊಂದುಂಟಾಯಿತು. ಕರಿಯ ಹೂಗಳನ್ನು ಬಿಡುವ ಸಸಿಗಳು ಸಸಿಗಳ ಕೊಟಡಿಯಲ್ಲಿರಬಹುದು. ಉದ್ಯಾನವನ್ನು ಪ್ರವೇಶಿಸಿದಂತೆಯೇ ಸಸಿಗಳ ಕೊಟಡಿಯನ್ನೂ ಪ್ರವೇಶಿಸಿಬಿಟ್ಟರೆ ಸರಿಯೆಂದು ವಿಷಕಂರನು ಯೋಚಿಸತೊಡಗಿದನು. ಅಲ್ಲಿನ ಕಿಟಕಿಗಳನ್ನು ಮೇಲಕ್ಕಾಗಲಿ ಪಕ್ಕಕ್ಕಾಗಲಿ ತಳ್ಳುವುದು ಸುಲಭವಾಗಿತ್ತು. ಅದಲ್ಲದೆ ಕುಮುದಚಂದ್ರನು ಪ್ರಾತಃಕಾಲದಲ್ಲಿ ಕೊಟಡಿಯ ಕಿಟಕಿಯನ್ನು ಮೇಲಕ್ಕೆ ತಳ್ಳಿದ್ದನು ಅದನ್ನು ಪುನಃ ಯಾರೂ ಮುಚ್ಚಿರಲಿಲ್ಲ.

ವಿಷಕಂರನು ಹೀಗೆ ಯೋಚಿಸಿಕೊಂಡು ಹತ್ತಡಿಗಳ ಏಣಿಗೆ ಬದಲಾಗಿ ಇಪ್ಪತ್ತೈದು ಅಡಿಗಳ ಏಣಿಯೊಂದನ್ನು ಸಂಪಾದಿಸಿಬಿಟ್ಟರೆ ಸಸಿಗಳನ್ನು ಹೊಂದಿದಂತೆಯೇ ಆಯಿತೆಂದು ಭಾವಿಸಿಕೊಂಡನು. ತನ್ನ ಮನೆಗೆ ಸ್ವಲ್ಪ ದೂರದಲ್ಲಿದ್ದ ಮನೆಯೊಂದನ್ನು ರಿಪೇರಿ ಮಾಡುವವರು ಅಂತಹ ಏಣಿಯೊಂದನ್ನಿಟ್ಟುಕೊಂಡಿದ್ದುದು ಆಗವನ ಸ್ಮೃತಿಗೆ ಬಂದುದು. ಕೆಲಸಗಾರರು ಅದನ್ನು ಅಲ್ಲಿಯೇ ಬಿಟ್ಟುಹೋಗಿದ್ದರೆ ಯಾವ ಯೋಚನೆಗೂ ಕಾರಣವಿರುವುದಿಲ್ಲವೆಂದವನು ಯೋಚಿಸಿದನು.

ವಿಷಕಂರನು ಆ ಮನೆಯ ಬಳಿಗೆ ಓಡಿದನು. ಏಣಿಯು ಅಲ್ಲಿಯೇ ಇತ್ತು. ವಿಷಕಂರನು ಕಷ್ಟಪಟ್ಟು ಅದನ್ನು ತನ್ನ ಉದ್ಯಾನಕ್ಕೆ ತಂದನು. ಮತ್ತೂ ಹೆಚ್ಚು ಕಷ್ಟಪಟ್ಟು ಕುಮುದನ ಮನೆಗದನ್ನು ತೆಗೆದುಕೊಂಡು ಹೋದನು. ಅದರ ಸಹಾಯದಿಂದ ಕೊಟಡಿಯ ಕಿಟಕಿಯವರೆಗೂ ಹೋಗಬಹುದಾಗಿತ್ತು.

ವಿಷಕಂಠನು ಕೈದೀಪವೊಂದನ್ನು ಕಿಸೆಯಲ್ಲಿ ಸೇರಿಸಿ ಏಣಿಯನ್ನು ಹತ್ತಿ ಸಸಿಗಳ ಕೊಟಡಿಯನ್ನು ಹೊಕ್ಕನು. ಅವನಿಗೆ ತನ್ನ ಕೃತ್ಯವನ್ನು ನೋಡಿ ಸ್ವಲ್ಪ ಭೀತಿಯಾಗತೊಡಗಿತು. ಉದ್ಯಾನದಲ್ಲವನು ಅಕ್ರಮ ಪ್ರವೇಶ ಮಾಡುತ್ತಿದ್ದನಾದರೂ ಇಲ್ಲಿ ಕಳ್ಳತನ ಮಾಡುತ್ತಿದ್ದನು. ಅದನ್ನು ನೆನಸಿಕೊಂಡು ಅವನ ಕಾಲುಗಳು ನೋತುಹೋಗತೊಡಗಿದುವು ಅವನ ಎದೆಯು ಡವಡವನೆ ಶಬ್ದಮಾಡತೊಡಗಿತು. ಆದರೂ ಪುನಃ ಅವನು ಧೈರ್ಯಹೊಂದಿದನು. ಅಷ್ಟು ದೂರ ಅವನು ಹೋಗಿದ್ದುದು ಬರಿಯ ಕೈಯಲ್ಲಿ ಹಿಂತಿರುಗಲೋಸುಗವೆ!

ವಿಷಕಂಠನು ಸಸಿಗಳ ಕೊಟಡಿಯಲ್ಲಿ ಅನ್ವೇಷಣೆ ಮಾಡಿದನು ಡ್ರಾಯರುಗಳನ್ನು ತೆಗೆದು ಪುನಃ ಮುಚ್ಚಿದನು ರಮಾನಾಥನ ಪತ್ರಗಳನ್ನಿಟ್ಟಿದ್ದ ಡ್ರಾಯರನ್ನು ತೆಗೆದು ನೋಡಿದನು. ಅಲ್ಲಿ ಚೀಟಿಗಳನ್ನು ಹೊತ್ತು "ಸ್ವರ್ಣಲತೆ"ಯೂ, "ರಮಾನಾಥ"ಪುಷ್ಪವೂ, "ಉಮಾನಾಥ" ಪುಷ್ಪವೂ ಇದ್ದುವು. ಕಾಫಿಯವರ್ಣದ ಪುಷ್ಪವೂ ಇತ್ತು. ಎಲ್ಲವೂ ಪರಿಷ್ಕಾರವಾಗಿಡಲ್ಪಟ್ಟಿದ್ದುವು. ಆದರೆ ಕರಿಯಟ್ಯೂಲಿಪದ ಸಸಿಗಳು ಮಾತ್ರ ಅಲ್ಲಿರಲಿಲ್ಲ! ಎಲ್ಲಿಯೂ ಅವುಗಳ ಸುಳಿವೇ ಕಾಣಲಿಲ್ಲ!

ವಿಷಕಂಠನು ಸಸಿಗಳ ಮತ್ತು ಬೀಜಗಳ ದಾಖಲೆ ಪುಸ್ತಕವನ್ನು ತೆಗೆದು ನೋಡಿದನು. ಅದರಲ್ಲಿ ಎಲ್ಲವೂ ಸರಿಯಾಗಿ ವಿವರಿಸಲ್ಪಟ್ಟಿದ್ದುವು. ಅದರಲ್ಲಿ ಕಡೆಗೆ ಅವನಿಗೊಂದು ದಾಖಲೆಯು ದೊರಕಿತು. ಅವನದನ್ನು ಓದತೊಡಗಿದನು-"೨೦ನೇ ಆಗಸ್ಟ್-೧೯೭೨- ಈ ದಿನ ಕರಿಯಟ್ಯೂಲಿಪದ ತಾಯಿಸಸಿಯನ್ನು ಉದ್ಯಾನದಿಂದ ತಂದಿದ್ದೇನೆ. ಅದನ್ನು ಮೂರು ಸಸಿಗಳಾಗಿ ವಿಭಾಗಿಸಿದ್ದೇನೆ."

ವಿಷಕಂಠನು ಅದನ್ನೋದಿ ಕೊಟಡಿಯಲ್ಲಿದ್ದುದನ್ನೆಲ್ಲಾ ತಲೆಕೆಳಗು ಮಾಡುತ್ತೆ, "ಓಹೋ! ಈ ಸಸಿಗಳೆಲ್ಲಿ! ಈ ಸಸಿಗಳೆಲ್ಲಿ!" ಎಂದುಕೊಳ್ಳುತ್ತೆ ಕೊಟಡಿಯನ್ನು ಪೂರ್ಣವಾಗಿ ಶೋಧಿಸಿದನು.

ಕಡೆಗೆ ಅವನಿಗೊಂದು ಸ್ಫೂರ್ತಿಯುಂಟಾಯಿತು. ಅವನು ತಲೆಯನ್ನು ಬಡಿದುಕೊಳ್ಳುತ್ತೆ ತನ್ನಲ್ಲಿಯೇ ಹೇಳಿಕೊಳ್ಳತೊಡಗಿದನು— "ಅಯ್ಯೋ! ನಾನೆಂತಹ ಮಡೆಯ! ಯಾರಾದರೂ ಸಸಿಗಳನ್ನು ಬಿಟ್ಟರು

ವರೆ? ಸುರನಗರಿಗೆ ಹೋಗುವವರು ರತ್ನಗಿರಿಯಲ್ಲಿ ಅಂತಹ ಅಮೂಲ್ಯವಾದ ಸಸಿಗಳನ್ನು ಬಿಟ್ಟುಹೋಗುವರೆ? ಆ ಸಸಿಗಳ ಅಂತರ್ಭಾಗದಲ್ಲಿ ಕೃಷ್ಣವರ್ಣದ ಕುಸುಮಗಳಿರುವಾಗ ಅವುಗಳನ್ನು ಬಿಟ್ಟು ಜೀವಿಸಲಾಗುವುದೆ? ಅವನ್ನು ತೆಗೆದಿಟ್ಟುಕೊಳ್ಳಲು ಕುಮುದನಿಗೆ ಅವಕಾಶವಾಗಿರಬೇಕು. ಅವನು ತನ್ನಲ್ಲಿಯೇ ಅವುಗಳನ್ನಿಟ್ಟುಕೊಂಡಿದ್ದಾನೆ. ಸುರನಗರಿಗೆ ತೆಗೆದುಕೊಂಡುಹೋಗಿದ್ದಾನೆ."

ಅನ್ಯಾಯವಾಗಿ ನಡೆಸಿದ ಚೋರೀಪ್ರಯತ್ನವನ್ನು ನೆನೆಸಿಕೊಂಡು ವಿಷಕಂಠನು ನಿಶ್ಚೇತನನಾಗಿ ಕೊಟಡಿಯಲ್ಲಿದ್ದ ಮೇಜಿನಮೇಲೆ ಬಿದ್ದನು. ಸ್ವಲ್ಪ ಹೊತ್ತಿನ ಬಳಿಕ ಯೋಚಿಸತೊಡಗಿದನು—"ಇರಲಿ ಅವನು ಬದುಕಿರುವವರೆಗೆ ಅವುಗಳನ್ನು ತನ್ನಲ್ಲಿಟ್ಟುಕೊಂಡಿರುವನು . . ಬಳಿಕ "

ಅವನಿಗೆ ಮುಂದಿನ ಯೋಚನೆಯನ್ನು ನೆನೆಸಿಕೊಂಡು ಸ್ವಲ್ಪ ಸಂತೋಷವಾಯಿತು ಅವನು ಪುನಃ ಯೋಚಿಸುತ್ತ, "ಸಸಿಗಳು ಸುರನಗರಿಯನ್ನು ಸೇರಿವೆ ಆದುದರಿಂದ ನಾನು ರತ್ನಗಿರಿಯಲ್ಲೇನು ಮಾಡಲಿ! ಸಸಿಗಳನ್ನು ಅನ್ವೇಷಣೆ ಮಾಡಿಕೊಂಡು ಸುರನಗರಿಗೇ ಹೋಗುತ್ತೇನೆ," ಎಂದುಕೊಂಡನು

ಹೀಗೆ ಯೋಚನಾಪರನಾಗಿ ವಿಷಕಂಠನು ಯಾವ ವಸ್ತುಗಳನ್ನೂ ಮುಟ್ಟದೆ ಸಸಿಗಳ ಕೊಟಡಿಯಿಂದ ಇಳಿದು, ಏಣಿಯನ್ನು ಸ್ವಸ್ಥಾನಕ್ಕೆ ಸೇರಿಸಿ ಸ್ವಂತಮನೆಗೆ ಹಿಂತಿರುಗಿದನು.

## ನವಮ ಪರಿಚ್ಛೇದ

### ಮನೆತನದ ಕಾರಾಗೃಹ

ಸುರನಗರಿಯ ಕಾರಾಗೃಹದಲ್ಲಿ ಸುಮಾರು ಸಮರಾತ್ರಿಯ ಸಮಯಕ್ಕೆ ಕುಮುದಚಂದ್ರನು ಬಂದಿಯಾಗಿಡಲ್ಪಟ್ಟನು.

ಪುಷ್ಪಲತೆಯೂ ಅವಳ ತಂದೆ ಕಾಳೀಚರಣನೂ ಗುಹೆಯೊಂದರಲ್ಲಿ ಅಡಗಿದುದನ್ನು ಉಪಕ್ರಮಣಿಕೆಯಲ್ಲಿಯೇ ಹೇಳಿರುವೆವು. ಪುಷ್ಪಲತೆಯು

ತಂದೆಗೆ ಹೇಳಿದುದು ನಿಜವಾಗಿ ಪರಿಣಮಿಸಿತು. ರಮಾನಾಥನ ಕಾರಾಗಾರವು ಬರಿದಾಗಿದ್ದುದನ್ನು ತಿಳಿಯುತ್ತಲೇ ಪುರಜನರ ಕೋಪವು ಮಿತಿ ಮೀರಿ ಹೋಯಿತು. ಆ ಸಮಯದಲ್ಲಿ ಕಾಳೀಚರಣನೇನಾದರೂ ಆ ಉನ್ಮಾದಗ್ರಸ್ತರ ಕೈಗೆ ಸಿಕ್ಕಿಬಿದ್ದಿದ್ದರೆ ರಮಾನಾಥನನ್ನು ಖೂನಿಮಾಡುವುದರ ಬದಲಾಗಿ ಕಾಳೀಚರಣನನ್ನೇ ಖೂನಿಮಾಡಿಬಿಡುತ್ತಿದ್ದರು.

ಆದರೆ ಪುರಜನರು ರಮಾನಾಥ ಉಮಾನಾಥರನ್ನು ಹಿಂಬಾಲಿಸಿದಾಗ ಅವರಿಬ್ಬರೂ ಸಿಕ್ಕಿಬಿದ್ದುದರಿಂದ ಕಾಳೀಚರಣನ ಮೇಲಿದ್ದ ಕೋಪವು ಆ ಸಹೋದರರ ಮೇಲೆ ತಿರುಗಿ ಪುರಜನರ ಕ್ರೋಧಾನಲವು ಶಾಂತವಾಗಲು ಕಾರಣವಾಯಿತು

ಕಾರಾಗೃಹದಲ್ಲಿಯೂ ಸ್ವಲ್ಪ ಶಾಂತತೆಯುಂಟಾಯಿತು ಆ ಸಮಯವನ್ನೇ ಕಾಯುತ್ತಿದ್ದ ಪುಷ್ಪಲತೆಯು ತನ್ನ ತಂದೆಯೊಡನೆ ಗುಹೆಯಿಂದ ಹೊರಟುಬಂದಳು. ಕಾರಾಗೃಹವು ನಿರ್ಜನಪ್ರದೇಶವಾಗಿದ್ದಿತು. ಪುರಜನರು ಬೀದಿಯಲ್ಲಿ ಖೂನಿನಡೆಸುತ್ತಿದ್ದರಾಗಿ ಅವರಿಗೆ ಕಾರಾಗೃಹದಲ್ಲಾವ ಕೆಲಸವೂ ಇರಲಿಲ್ಲ.

ಕಾಳೀಚರಣನು ನಡುಗುತ್ತ ಧೈರ್ಯಸ್ಥಳಾದ ಪುಷ್ಪಲತೆಯ ಹಿಂದೆಯೇ ಬಂದನು. ಕಾರಾಗೃಹದ ಮುಂಭಾಗದ ಬಾಗಿಲು ಅರ್ಧಾರ್ಧವಾಗಿ ಮಾತ್ರ ಉಳಿದಿದ್ದಿತು. ಅದನ್ನೇ ಅವರಿಬ್ಬರೂ ಮುಚ್ಚಿದ್ದರು—ಅಂದರೆ ಅದನ್ನು ಎಷ್ಟುಮಾತ್ರ ಮುಚ್ಚಲು ಸಾಧ್ಯವಿದ್ದಿತೋ ಅಷ್ಟು ಮುಚ್ಚಿ ಮಿಕ್ಕ ಭಾಗಕ್ಕೆ ಅಡ್ಡಲಾಗಿ ಕೆಲವು ಹಲಗೆಗಳನ್ನಿಟ್ಟರು. ಕಾರಾಗೃಹದಲ್ಲೆಲ್ಲಾ ಪ್ರಚಂಡಮಾರುತವು ತಾಂಡವವಾಡಿದ್ದುದು ವಿಶದವಾಗುತ್ತಿತ್ತು.

ಸುಮಾರು ನಾಲ್ಕು ಗಂಟೆಯ ವೇಳೆಗೆ ಪುನಃ ಗಲಾಟೆಯಾಗತೊಡಗಿತು. ಆದರೆ ಕಾಳೀಚರಣನಿಗೂ ಪುಷ್ಪಲತೆಗೂ ಭೀತಿಯನ್ನುಂಟುಮಾಡುವ ಸನ್ನಿವೇಶವಾವುದೂ ಇರಲಿಲ್ಲ. ಪುರಜನರು ರಮಾನಾಥ ಉಮಾನಾಥರ ಮೃತದೇಹಗಳನ್ನು ಮಾತ್ರ ಶೂಲಕ್ಕೇರಿಸುತ್ತ ಗಲಭೆ ಮಾಡುತ್ತಿದ್ದರು.

ಪುಷ್ಪಲತೆಯು ಈ ಬಾರಿಯೂ ಅವಿತುಕೊಂಡಳು. ಅವಳಿಂದ ಆ ಘೋರದೃಶ್ಯವನ್ನು ನೋಡಲಾಗದಿದ್ದುದರಿಂದ ಅವಳು ಹಾಗೆ ಮಾಡಿದುದು —ಭಯದಿಂದಲ್ಲ!

ಸಮರಾತ್ರಿಯ ಸಮಯಕ್ಕೆ ಕಾರಾಗೃಹದ ಬಾಗಿಲಿನ ಬಳಿ ಪುನಃ ಜನರ ಗಲಾಟೆಯಾಗತೊಡಗಿತು. ಈ ಬಾರಿ ಕುಮುದಚಂದ್ರನನ್ನವರು ಕಾರಾಗಾರಕ್ಕೆಳೆತಂದಿದ್ದರು.

ಕಾಳೀಚರಣನು ನೂತನ ಬಂದಿಯ ಹೆಸರನ್ನು ನೋಡುತ್ತಲೇ ಕಿರುನಗೆಯನ್ನು ತೋರುತ್ತೆ, "ರಮಾನಾಥನ ಶಿಷ್ಯನೆ! ಅವನ ಸಾಕು ಮಗನೆ! ಓಹೋ! ಇಲ್ಲಿ ತಮ್ಮ ಮನೆತನವ ಕಾರಾಗೃಹವಿದೆ. ಅದನ್ನೇ ತಮಗೆ ಕೊಡಿಸುತ್ತೇನೆ" ಎಂದು ಬಂದಿಗೆ ಹೇಳಿದನು. ಒಡನೆಯೇ ತನ್ನ ಹಾಸ್ಯಪ್ರಕೃತಿಗೆ ತಾನೇ ಮೆಚ್ಚಿಕೊಳ್ಳುತ್ತೆ ಆ ಒರಟು ಮನುಷ್ಯನು ಕುಮುದಚಂದ್ರನನ್ನು ರಮಾನಾಥನಿದ್ದ ಕಾರಾಗೃಹದ ಕಡೆಗೆ ಕರೆದು ಕೊಂಡು ಹೋದನು.

ಕಾರಾಗೃಹವನ್ನು ಹತ್ತಿಹೋಗಲು ಮೆಟ್ಟಲುಗಳಿದ್ದುವು. ಅವುಗಳ ಅಡಿಯಲ್ಲಿ ಒಂದು ಪಕ್ಕಕ್ಕೆ ಒಂದು ಬಾಗಿಲಿದ್ದಿತು. ಕುಮುದಚಂದ್ರನು ಮೆಟ್ಟಲುಗಳನ್ನು ಹತ್ತುತ್ತಿದ್ದಾಗ ಬಾಗಿಲಬಳಿ ಹುಡುಗಿಯೊಬ್ಬಳು ನಿಂತಿದ್ದುದನ್ನು ಕಂಡನು. ಪಕ್ಕದಲ್ಲಿದ್ದ ಅಂತರವೊಂದರಿಂದ ನಾಯಿ ಯೊಂದು ಬಂದು ತನ್ನ ಸರಪಣಿಯನ್ನು ಆಡಿಸುತ್ತೆ ಅವನ ಸುತ್ತಲೂ ಮೂಸಿನೋಡತೊಡಗಿತು ನಾಯಿಯ ವರ್ತನವನ್ನು ನೋಡಿದರೆ, ಮುಂದಾವಾಗಲಾದರೂ ಕುಮುದನಮೇಲೆ ಬೀಳಬೇಕೆಂದದಕ್ಕೆ ಆಜ್ಞೆ ಮಾಡಿದರೆ ಆಗವನನ್ನು ಕಂಡುಹಿಡಿಯಲು ಅನುಕೂಲವಾಗುವುದೆಂದು ಅದವನ ಪರಿಚಯಮಾಡಿಕೊಳ್ಳುತ್ತಿದ್ದಂತೆ ಭಾಸವಾಗುತ್ತಿತ್ತು.

ಹುಡುಗಿಯು ಸುಂದರಿಯಾಗಿದ್ದಳು. ಅವಳ ಕೈಯಲ್ಲಿ ದೀಪ ವೊಂದಿದ್ದಿತು. ಅದರ ಬೆಳಕಿನಿಂದ ಅವಳ ಮುಖವು ಪ್ರಕಾಶವಾಗುತ್ತಿತ್ತು. ಅವಳು ಅವಸರದಿಂದ ಬಂದು ಬಾಗಿಲಲ್ಲಿ ನಿಂತಂತೆ ಕಾಣಬರುತ್ತಿದ್ದಿತು. ಅಕಸ್ಮಾತ್ತಾಗಿ ಬಂದ ಕುಮುದನನ್ನು ಕಾಣಲು ಅವಳು ಆಗತಾನೆ ನಿದ್ರೆ ಯಿಂದೆದ್ದು ಬಂದಂತೆ ತೋರುತ್ತಿದ್ದಿತು.

ಕಾಳೀಚರಣನು ಸಣ್ಣ ದೀಪವೊಂದನ್ನು ಹಿಡಿದು ಮುಂದುವರಿಯುತ್ತಿದ್ದನು. ವ್ಯಸ್ತಚಿತ್ತನಾಗಿದ್ದ ಕುಮುದನು ಹುಡುಗಿಯ ಸುಂದರವದನವನ್ನು ನೋಡುತ್ತಿದ್ದನು. ಅಪರಿಚಿತನೊಬ್ಬನು ತನ್ನನ್ನು ನೋಡುತ್ತಿದ್ದುದಕ್ಕಾಗಿ ಅವಳು ಸ್ವಲ್ಪ ಲಜ್ಜೆಪಡುತ್ತಿದ್ದಳು. ನಾಯಿಯು ಅಪರಿಚಿತನನ್ನು ನೋಡುತ್ತಿದ್ದಾಗ ಅದರ ಕಣ್ಣುಗಳು ದೀಪಗಳ ಪ್ರಕಾಶದಿಂದ ಪಳಪಳನೆ ಹೊಳೆಯುತ್ತಿದ್ದುವು. ಈ ದೃಶ್ಯವನ್ನು ಚಿತ್ರಿಸಲು ಪ್ರಸಿದ್ಧ ಚಿತ್ರಕಾರನಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಆದರೂ ಸುಂದರಯುವಕನ ಮ್ಲಾನ ಮುಖವನ್ನು ನೋಡಿ ಕಾತರಳಾಗಿದ್ದ ಹುಡುಗಿಯ ದುಃಖಭಾವವನ್ನು ಸರಿಯಾಗಿ ಚಿತ್ರಿಸಲು ಅವನಿಗೆ ಅಸಾಧ್ಯವಾಗುತ್ತಿತ್ತೆಂದು ಹೇಳಲೇಬೇಕು. 'ಮನೆತನದ ಕಾರಾಗೃಹ'ವೆಂದು ಕಾಳೀಚರಣನು ಹೇಳಿದಾಗ ಆ ಮಾತುಗಳ ಅರ್ಥವನ್ನು ಪೂರ್ಣವಾಗಿ ಆ ಹುಡುಗಿಯು ಗ್ರಹಿಸಿ ಶೋಕಪೂರಿತಳಾಗಿದ್ದಳು. ಈ ದೃಶ್ಯವು ಒಂದು ನಿಮಿಷಮಾತ್ರ ಕಂಡುಬಂದಿತು. ಕಾಳೀಚರಣನು ಮುಂದೆ ಹೋದನು. ಕುಮುದಚಂದ್ರನು ಅವನನ್ನು ಹಿಂಬಾಲಿಸಬೇಕಾಯಿತು.

ಕಾಳೀಚರಣನು ರಮಾನಾಥನಿದ್ದ ಕಾರಾಗೃಹದಲ್ಲಿಯೇ ಕುಮುದನನ್ನು ಬಿಟ್ಟು ಹೊರಟುಹೋದನು. ಕುಮುದನು ಅಲ್ಲಿದ್ದ ಹಾಸಿಗೆಯ ಮೇಲೆ ಬಿದ್ದು ಹೊರಳಾಡಿದನು. ನಿದ್ರೆಯೇ ಹತ್ತಲಿಲ್ಲ. ಕಾರಾಗೃಹದಲ್ಲಿ ಕಿಟಕಿಯೊಂದಿತ್ತು. ಅದಕ್ಕೆ ಕಬ್ಬಿಣದ ಸಲಾಕಿಗಳಿದ್ದುವು. ಕುಮುದನು ಕಿಟಕಿಯ ಮೂಲಕ ನೋಡುತ್ತಿದ್ದನು. ಆಗಾಗ ಹೊರಗಡೆ ಓಡುತ್ತಿದ್ದ ಕುದುರೆಗಳ ಖುರಪುಟಧ್ವನಿಯು ಅವನಿಗೆ ಕೇಳಿಬರುತ್ತಿತ್ತು. ಹೊರಗಡೆ ಓಡಾಡುತ್ತಿದ್ದ ಪಹರೆಯವರ ಕಾಲುಹೆಜ್ಜೆಗಳ ಶಬ್ದವೂ ಕೇಳಿಬರುತ್ತಿತ್ತು.

ಪ್ರಾತಃಕಾಲವಾಗುತ್ತಲೇ ಕುಮುದನು ಹಾಸಿಗೆಯನ್ನು ಬಿಟ್ಟು ಕಿಟಕಿಯ ಬಳಿಗೆ ಹೋಗಿ ನೋಡಿದನು ಕಾರಾಗೃಹದಿಂದ ಅನತಿ ದೂರದಲ್ಲಿದ್ದ ವಧ್ಯಸ್ಥಾನವು ಅವನಿಗೆ ತಟ್ಟನೆ ಕಂಡುಬಂದಿತು. ಅಲ್ಲಿ ಎರಡು ದೇಹಗಳು ತೂಗುಹಾಕಲ್ಪಟ್ಟಿದ್ದುವು ನೋಡಿ ಕುಮುದನಿಗೆ ಗಾಬರಿಯಾಯಿತು. ಗಲ್ಲುಮರದ ಬಳಿ ಜನರು ದೊಡ್ಡ ರಟ್ಟಿನಮೇಲೆ

ದೊಡ್ಡದೊಡ್ಡ ಅಕ್ಷರಗಳಲ್ಲಿ ಅದೇನನ್ನೋ ಬರೆದಿದ್ದರು. ಅದನ್ನು ಕುಮು ದನು ಓದಿದನು—"ಇಲ್ಲಿ ಪುರಜನರ ಶತ್ರುಗಳೂ ವಿಲಾಸನಗರಿಯ ದೊರೆಯ ಮಿತ್ರರೂ ಆದ ಉಮಾನಾಥ ರಮಾನಾಥರೆಂಬ ದ್ರೋಹಿಗಳು ಗಲ್ಲಿಗೇರಿಸಲ್ಪಟ್ಟಿದ್ದಾರೆ"

ಕುಮುದಚಂದ್ರನು ಅದನ್ನೋದಿ ಗಾಬರಿಯಿಂದಲೂ ಶೋಕದಿಂದಲೂ ಗಟ್ಟಿಯಾಗಿ ಚೀತ್ಕರಿಸುತ್ತ ಕಾರಾಗೃಹದ ಬಾಗಿಲನ್ನು ದಬದಬನೆ ಬಡಿಯು ತೊಡಗಿದನು ಬಾಗಿಲಿನ ಶಬ್ದವನ್ನು ಕೇಳಿ ಕಾಳೀಚರಣನು ಕೋಪ ದಿಂದ ಅಲ್ಲಿಗೆ ಬಂದು, ಆ ಹೊತ್ತಿನಲ್ಲಿ ಅನ್ಯಾಯವಾಗಿ ತನ್ನನ್ನೆಬ್ಬಿಸಿದುದ ರಿಂದ ಬಂದಿಯನ್ನು ಭಸ್ಮಮಾಡಿಬಿಡುವವನಂತೆ ನೋಡುತ್ತ ಸ್ವಲ್ಪಹೊತ್ತು ನಿಂತನು ಬಳಿಕ ಬಾಗಿಲನ್ನು ತೆಗೆದು, "ನಿನಗೇನು ಹುಚ್ಚೋ? ರಮಾನಾಥನ ಸಂಬಂಧದವರೆಲ್ಲರೂ ಹುಚ್ಚರೆ? ಈ ನೂತನ ಬಂದಿಯಲ್ಲಿ ಸೈತಾನನಿರಬೇಕೆಂದು ಕಾಣುತ್ತೆ" ಎಂದು ಮುಂತಾಗಿ ಹೇಳಿದನು.

ಕುಮುದಚಂದ್ರನು ಜೈಲರನ ಕೈಯನ್ನು ಹಿಡಿದು ಅವನನ್ನು ಕಿಟಕಿಯ ಬಳಿಗೆ ಎಳೆದುಕೊಂಡು ಹೋಗಿ, "ಅಣ್ಣ! ಅಲ್ಲಿ ಬರೆದಿರುವು ದೇನು?" ಎಂದನು.

"ಅಲ್ಲಿ ಎಂದರೆ ಎಲ್ಲಿ?"

"ಆ ರಟ್ಟಿನ ಮೇಲೆ!"

ಕುಮುದನು ಗಲ್ಲುಮರವನ್ನು ನಡುಗುವ ಕೈಯಿಂದ ತೋರಿಸನು. ಕಾಳೀಚರಣನು ನೋಡಿ ಗಟ್ಟಿಯಾಗಿ ನಕ್ಕು, "ಓಹೋ! ಅದನ್ನು ಓದಿದೆಯೋ? ಸರಿ ರಾಜಕುಮಾರ ವಿನಯಸಿಂಹನ ಶತ್ರುಗಳೊಡನೆ ಪತ್ರವ್ಯವಹಾರ ಮಾಡುವವರಿಗೆ ಹಾಗೆಯೇ ಆಗುವುದು" ಎಂದನು.

ಕುಮುದಚಂದ್ರನು ಕಣ್ಣು ಮುಚ್ಚಿಕೊಂಡು ತನ್ನ ಹಾಸಿಗೆಯ ಮೇಲೆ ಬೀಳುತ್ತ, "ರಮಾನಾಥ ಉಮಾನಾಥರನ್ನು ಖೂನಿಮಾಡಿದ್ದಾರೆ!" ಎಂದನು.

ಕಾಳೀಚರಣನು, "ಆ ಸಹೋದರರನ್ನು ಪುರಜನರು ವಿಚಾರಣೆ ಮಾಡಿದ್ದಾರೆ. ಅವರನ್ನು ಖೂನಿಮಾಡಿದರೆಂದು ಹೇಳುವೆಯಾ? ಹಾಗಲ್ಲ ಅವರನ್ನು ಗಲ್ಲಿಗೇರಿಸಿದರೆಂದು ನಾನು ಹೇಳುತ್ತೇನೆ" ಎಂದನು.

ಬಂದಿಯು ಉತ್ತರ ಕೊಡದೆ ನಿಶ್ಚಲನಾಗಿ ಜ್ಞಾನಶೂನ್ಯನಂತೆ ಬಿದ್ದಿದ್ದನು. ಕಾಳೀಚರಣನು ಅವನನ್ನು ಅಲ್ಲಿಯೇ ಬಿಟ್ಟು ಸಶಬ್ದವಾಗಿ ಬಾಗಿಲನ್ನು ಹಾಕಿ ಅಗುಳಿಯನ್ನೆಳೆದನು.

ಕುಮುದಚಂದ್ರನು ಎಚ್ಚೆತ್ತುಕೊಂಡು ನೋಡಿದಾಗ ಕಾರಾಗೃಹದಲ್ಲಿ ತಾನೊಬ್ಬನೇ ಇದ್ದುದನ್ನು ಕಂಡನು. ಅವನು ರಮಾನಾಥ ಉಮಾನಾಥರ ಆತ್ಮಗಳಿಗೆ ಶಾಂತಿಯನ್ನು ಕೊಡೆಂದು ದೇವದೇವನನ್ನು ಪ್ರಾರ್ಥಿಸತೊಡಗಿದನು. ಅವನಿಗೆ ತನಗುಂಟಾಗಬಹುದಾದ ಕಷ್ಟಪರಂಪರೆಗಳ ವಿಚಾರವಾಗಿ ಯಾವ ಯೋಚನೆಯೂ ಇರಲಿಲ್ಲ. ಬಹಳ ಹೊತ್ತಿನ ಮೇಲೆ ತಾನೊಬ್ಬನೇ ಇರುವುದನ್ನು ನಿರ್ಧರಿಸಿಕೊಂಡು ಮೆಲ್ಲನೆ ತನ್ನ ವಕ್ಷಸ್ಥಲದಲ್ಲಿದ್ದ ಮೂರು ಸಸಿಗಳನ್ನೂ ತೆಗೆದನು. ಅವನಿಗಾಗಿ ಕಾರಾಗೃಹದಲ್ಲಿ ಮೂಲೆಯೊಂದರಲ್ಲಿ ಹೂಜಿಯೊಂದನ್ನಿಟ್ಟು ಅದರಲ್ಲಿ ನೀರನ್ನಿಟ್ಟಿದ್ದರು. ಹೂಜಿಯು ಕಪ್ಪಾಗಿದ್ದೊಂದು ಕಲ್ಲಿನಮೇಲಿದ್ದಿತು. ಕುಮುದಚಂದ್ರನು ಮೂರು ಸಸಿಗಳನ್ನೂ ಆ ಕಲ್ಲಿನ ಹಿಂಭಾಗದಲ್ಲಿಟ್ಟನು.

ಇಷ್ಟು ವರ್ಷಗಳ ಕಷ್ಟವೂ ವ್ಯರ್ಥ! ಸವಿಕನಸುಗಳೆಲ್ಲವೂ ನಾಶವಾಗುವ ಸಂದರ್ಭಗಳೊದಗಿರುವುವು ಅವನ ಜೀವನವು ಹೇಗೆ ಅಕಾಲದಲ್ಲಿಯೇ ಕೊನೆಗಾಣುವುದೋ ಹಾಗೆಯೇ ಅವನ ಸಂಶೋಧನೆಯೂ ಕೂಡ ಯಾವ ಫಲವೂ ಇಲ್ಲದೆ ಅಂತ್ಯವಾಗುವುದು ಈ ಕಾರಾಗೃಹದಲ್ಲಿ ಸಸಿಗಳ ಸೋಂಕು ಕೂಡ ಇಲ್ಲ! ಅವುಗಳಿಗೆ ಬೇಕಾದ ಭೂಮಿಯಿಲ್ಲ! ಬಿಸಿಲಿನ ಶಾಖವು ಸ್ವಲ್ಪಮಾತ್ರವೂ ಇಲ್ಲ! ಕುಮುದನು ಈ ವಿಷಯವೆಲ್ಲವನ್ನೂ ಯೋಚಿಸುತ್ತ ವಿಷಣ್ಣನಾದನು. ತಟ್ಟನೆ ಅವನ ವಿಷಣ್ಣ ಭಾವದಿಂದವನು ಎಚ್ಚೆತ್ತುಕೊಳ್ಳಲು ಸಂದರ್ಭವೊಂದೊದಗಿದುದು.

ಅಂತಹುದೇನಾಯಿತು?

ಅದನ್ನು ಮುಂದಿನ ಪರಿಚ್ಛೇದದಲ್ಲಿ ವಾಚಕರಿಗೆ ವಿವರಿಸುವೆವು.

## ದಶಮ ಪರಿಚ್ಛೇದ

### ಜೈಲರನ ಮಗಳು

ಕಾಳೀಚರಣನು ಬಂದಿಗೆ ಆಹಾರವನ್ನು ತಂದಾಗ ಬಾಗಿಲನ್ನು ತೆರೆದು ಒಳಕ್ಕೆ ಹೋಗಲೆತ್ನಿಸಿದನು. ಆ ಸಮಯದಲ್ಲಿ ನೆಲದ ಮೇಲಿದ್ದ

ಬಟ್ಟೆಯೊಂದರ ಮೇಲೆ ಕಾಲಿಟ್ಟು ಜಾರಿಬಿದ್ದನು. ಬೀಳುವಾಗ ಕೈಯನ್ನಡ್ಡ ಲಾಗಿಡಲು ಹೋದನು ಆ ಸಮಯದಲ್ಲಿ ಕೈಮೇಲೆ ಅವನ ಭಾರವೆಲ್ಲವೂ ಬಿದ್ದು ಮುಷ್ಟಿಯ ಮೇಲ್ಭಾಗದ ಎಲುಬೊಂದು ಮುರಿದುಹೋಯಿತು.

ಕುಮುದಚಂದ್ರನು ಕುಸುಮಗಳ ಬೆಳವಣಿಗೆಯನ್ನಾರಂಭಿಸುವುದಕ್ಕೆ ಮೊದಲು ಡಾಕ್ಟರನಾಗಿದ್ದನು. ಅವನೀಗ ಕಾಳೀಚರಣನ ಅವಸ್ಥೆಯನ್ನು ಕಂಡೊಡನೆಯೇ ವಿದ್ಯಮಾನವನ್ನರಿತು ಜೈಲರನ ಕಡೆಗೆ ನುಗ್ಗಿದನು. ಕಾಳೀಚರಣನು ತನ್ನ ಅವಸ್ಥೆಯನ್ನಿನ್ನೂ ಪೂರ್ಣವಾಗಿ ಅರಿತಿರಲಿಲ್ಲವಾಗಿ, "ನನಗೇನೂ ಆಗಿಲ್ಲ. ನೀನು ಅಲ್ಲಿಯೇ ನಿಲ್ಲು. ಕದಲಬೇಡ" ಎಂದನು. ಒಡನೆಯೇ ಕೈಮೇಲೆ ಭಾರವನ್ನು ಬಿಟ್ಟುಕೊಂಡೇಳಲು ಪ್ರಯತ್ನಿಸಿದನು ಎಲುಬು ಮುರಿದುಹೋಗಿದ್ದುದರಿಂದ ಆ ಪ್ರಯತ್ನದಲ್ಲವನಿಗೆ ಬಹಳ ನೋವಾಯಿತು. ಅವನು ಏಳಲಾಗಲಿಲ್ಲ. ಅವನು ಗಟ್ಟಿಯಾಗಿ ಕೂಗಿಕೊಂಡನು. ಒಡನೆಯೇ ಅವನಿಗೆ ಜ್ಞಾನವು ಹೋಗಿ ಅವನು ಬಾಗಿಲ ಬಳಿ ಮೂರ್ಛಿತನಾಗಿ ಬಿದ್ದನು. ಇತರರಿಗೆ ಕ್ರೂರಸ್ವಭಾವವನ್ನು ತೋರುತ್ತಿದ್ದಾ ಕಾಳೀಚರಣನಿಗೆ ಈಗ ತನ್ನ ನೋವು ಬಹಳವಾಗಿದ್ದಂತೆ ಕಂಡುಬಂದಿತು. ಅವನು ನೋವಿನಿಂದ ಮೃತನಾದವನಂತೆ ಬಾಗಿಲ ಬಳಿ ಬಿದ್ದನು.

ಆ ಸಮಯದಲ್ಲಿ ಕಾರಾಗೃಹದ ಬಾಗಿಲು ತೆರೆಯಲ್ಪಟ್ಟಿದ್ದಿತು. ಕುಮುದಚಂದ್ರನು ಓಡಿಹೋಗಲು ಅಡ್ಡಿಯಿರಲಿಲ್ಲ. ಆದರೆ ಅವನು ಈ ಘಟನೆಯಿಂದ ಉಪಯೋಗಹೊಂದುವ ಯೋಚನೆಯನ್ನೇ ಮಾಡಲಿಲ್ಲ. ಜೈಲರನ ಕೈ ತಿರುಗಿದ್ದ ರೀತಿಯನ್ನು ನೋಡುತ್ತಲೇ ಅವನ ಎಲುಬು ಮುರಿದುಹೋಗಿರಬೇಕೆಂದೂ ಅವನಿಗೆ ಬಹಳ ನೋವಾಗಿರಬೇಕೆಂದೂ ಕುಮುದನಿಗೆ ಅರ್ಥವಾಯಿತು ಜೈಲರನಿಗೆ ಸಹಾಯಮಾಡಲು ಬಂದಿಯು ನುಗ್ಗಿದನು. ಜೈಲರನು ಅದುವರೆಗೆ ತೋರಿದ್ದ ಕ್ರೌರ್ಯದವಿಷಯವಾಗಿ ಬಂದಿಯು ಸ್ವಲ್ಪವಾದರೂ ಯೋಚಿಸದೆ ನುಗ್ಗಿದನು.

ಕಾಳೀಚರಣನು ಬಿದ್ದ ಶಬ್ದವನ್ನೂ ಅವನು ಗಟ್ಟಿಯಾಗಿ ಕೂಗಿಕೊಂಡುದನ್ನೂ ಕೇಳಿದೊಡನೆಯೇ ಅತಿಮನೋಹರರೂಪವುಳ್ಳ ವ್ಯಕ್ತಿ

ಯೊಂದು ಕುಮುದಚಂದ್ರನ ಕಣ್ಣೆದುರಿಗೆ ನಿಂತುಕೊಂಡಿತು. ಆ ವ್ಯಕ್ತಿಯೇ ಪುಷ್ಪಲತೆ!

ತನ್ನ ತಂದೆಯು ಕೆಳಗೆ ಬಿದ್ದಿದ್ದುದನ್ನೂ ಕುಮುದಚಂದ್ರನು ಅವನನ್ನು ಬಗ್ಗಿ ನೋಡುತ್ತಿದ್ದುದನ್ನೂ ಕಂಡು ಪುಷ್ಪಲತೆಯು ಗಾಬರಿಗೊಂಡಳು. ಕಾಳೀಚರಣನ ಕ್ರೌರ್ಯವನ್ನವಳು ಅರಿತಿದ್ದಳಾಗಿ ಜೈಲರನಿಗೂ ಬಂದಿಗೂ ಜಗಳವಾಗಿರಬೇಕೆಂದೂ ಅದರ ಫಲವಾಗಿ ಜೈಲರನು ಕೆಳಗೆ ಬಿದ್ದು ಒದ್ದಾಡುತ್ತಿರಬೇಕೆಂದೂ ಮೊದಲು ಮೊದಲು ಯೋಚಿಸಿಕೊಂಡಳು. ಕುಮುದಚಂದ್ರನು ಅವಳು ನಿಂತುದನ್ನು ಕಂಡೊಡನೆಯೇ ಅವಳ ಮನಸ್ಸಿನಲ್ಲಿದ್ದುದನ್ನು ತಿಳಿದುಕೊಂಡನು. ಒಂದು ನಿಮಿಷವಾಗುವ ವೇಳೆಗೆ ನಿಜಸ್ಥಿತಿಯು ಪುಷ್ಪಲತೆಗೆ ತಿಳಿಯಿತು. ಅವಳಿಗೆ ತನ್ನ ಮೊದಲಿನ ಯೋಚನೆಗಾಗಿ ಲಜ್ಜೆಯುಂಟಾಯಿತು. ಅವಳು ಅಶ್ರುಪೂರಿತನಯನಗಳಿಂದ ಕುಮುದಚಂದ್ರನನ್ನು ನೋಡಿ, "ಸ್ವಾಮಿ! ನನ್ನನ್ನು ಕ್ಷಮಿಸೋಣಾಗಲಿ ತಮಗೆ ಅನೇಕವಂದನೆಗಳನ್ನರ್ಪಿಸುತ್ತೇನೆ ನನ್ನ ಕೆಟ್ಟ ಯೋಚನೆಯನ್ನು ಕ್ಷಮಿಸಿ. ತಮ್ಮ ಉಪಕಾರಕ್ಕಾಗಿ ವಂದನೆಗಳಿರಲಿ" ಎಂದಳು.

ಕುಮುದಚಂದ್ರನೂ ಲಜ್ಜಿತನಾಗಿ, "ನನ್ನ ಕರ್ತವ್ಯವನ್ನು, ಮಾತ್ರ ಮಾಡುತ್ತಿದ್ದೆ" ಎಂದನು

ಪುಷ್ಪಲತೆ—ನಿಜ. ತಾವು ಈಗ ಮಾಡಿದ ಸಹಾಯದಿಂದ ಅವನು ನಿಮಗೆ ಬೆಳಗ್ಗೆ ಮಾಡಿದ ಅನ್ಯಾಯವನ್ನು ಮರೆತಿರುವಿರೆಂದು ಚೆನ್ನಾಗಿ ತಿಳಿಯುವುದು.

ಪುಷ್ಪಲತೆಯನ್ನು ಕುಮುದಚಂದ್ರನು ದಿಟ್ಟಿಸಿ ನೋಡಿ, ಇಷ್ಟು ಚಿಕ್ಕ ಹುಡುಗಿಯು ಅಂತಹ ಮಹತ್ವಪೂರಿತ ವಾಕ್ಯಗಳನ್ನು ಹೇಳಬಲ್ಲಳೆ, ಎಂದು ಯೋಚಿಸಿಕೊಳ್ಳುತ್ತಿದ್ದನು.

ಆದರೆ ಆಶ್ಚರ್ಯಪ್ರಕಟನೆಗೆ ಆಗವನಿಗೆ ಸಮಯವಿರಲಿಲ್ಲ. ಕಾಳೀಚರಣನು ಮೂರ್ಛೆಯಿಂದೆಚ್ಚರಗೊಳ್ಳುತ್ತಿದ್ದನು. ಅವನು ಕಣ್ಣು ತೆರೆದು ನೋಡಿದನು. ಆಗವನ ಒರಟುತನವು ಪುನಃ ಕಾಣಬರತೊಡಗಿತು. ಅವನು ಗೊಣಗುತ್ತ್ತೆ, "ನೋಡಿದೆಯಾ! ಬಂದಿಗೆ ಆಹಾರವನ್ನು ತರುವಾಗ

ದೊಡ್ಡಮನುಷ್ಯನೊಬ್ಬನು ಕೆಳಕ್ಕೆ ಬಿದ್ದು ಕೈಮುರಿದುಕೊಂಡಿದ್ದಾನೆ. ಅವನು ನೆಲದಮೇಲೆಯೇ ಬಿದ್ದಿರಲೆಂದು ಎಲ್ಲರೂ ನಿಶ್ಚಿಂತರಾಗಿದ್ದಾರೆ" ಎಂದನು.

ಪುಷ್ಪಲತೆಯು, "ಇದೇನಪ್ಪಾ ನೀನು ಹೇಳುತ್ತಿರುವುದು ನೋಡು ಇವರಿಗೆ ನೀನು ಅನ್ಯಾಯ ಮಾಡುತ್ತಿರುವೆ. ಇವರು ನಿನಗೆ ಸಹಾಯ ಮಾಡುತ್ತಿದ್ದಾರೆ" ಎಂದಳು.

ಕಾಳೀಚರಣನು ಸಂಶಯಾನ್ವಿತನಾಗಿ ನೋಡುತ್ತ, "ಇವನು ಸಹಾಯಮಾಡುತ್ತಿರುವನೆ?" ಎಂದನು.

ಕುಮುದಚಂದ್ರನು, "ನಿಜ ಅಣ್ಣ! ಇನ್ನೂ ಹೆಚ್ಚಾಗಿ ಸಹಾಯ ಮಾಡಲು ಸಿದ್ಧನಾಗಿದ್ದೇನೆ" ಎಂದನು.

ಕಾಳೀಚರಣ—ನೀನೆ! ನೀನೇನು ವೈದ್ಯನೆ?

"ಮೊದಲು ಆ ವೃತ್ತಿಯಲ್ಲಿದ್ದೆನು".

"ಹಾಗಾದರೆ ನನ್ನ ಕೈಯನ್ನು ಸರಿಪಡಿಸಬಲ್ಲೆಯಾ?"

"ನಿಸ್ಸಂದೇಹವಾಗಿ"

"ಅದಕ್ಕೇನೇನು ಬೇಕು? ಹೇಳು ನೋಡೋಣ".

"ಮರದ ಪಟ್ಟಿಗಳೆರಡು ಬೇಕು. ಸ್ವಲ್ಪ ಹತ್ತಿ ಬೇಕು. ಬ್ಯಾಂಡೇಜೊಂದು ಬೇಕು".

ಕಾಳೀಚರಣನು ಮಗಳ ಕಡೆಗೆ ತಿರುಗಿ, "ಕೇಳಿದೆಯೇನೆ ಪುಷ್ಪಾ! ಬಂದಿಯು ನನ್ನ ಕೈ ಸರಿಪಡಿಸುವನು. ಹಣದ ವೆಚ್ಚವೇ ಕಡಿಮೆಯಾದಂತಾಯಿತು. ಬಾ ನನ್ನನ್ನೆಬ್ಬಿಸು. ಕಾಲಿಗೆ ಸೀಸದ ಗುಂಡುಗಳನ್ನು ಹಾಕಿಬಿಟ್ಟಂತೆ ಮೈಯೆಲ್ಲಾ ಭಾರವಾಗಿಬಿಟ್ಟಿದೆ" ಎಂದನು.

ತಂದೆಯು ಮಗಳ ಭುಜದ ಮೇಲೆ ಭಾರವನ್ನು ಬಿಟ್ಟು ಮೆಲ್ಲನೆ ಎದ್ದು ನಿಂತನು. ಕುಮುದಚಂದ್ರನು ಸಮೀಪದಲ್ಲಿದ್ದ ಹಳೆಯ ಕುರ್ಚಿಯೊಂದನ್ನು ಕಾಳೀಚರಣನ ಬಳಿಗೆ ತಳ್ಳಿದನು. ಜೈಲರನು ಅದರಲ್ಲಿ ಕುಳಿತು, ಮಗಳ ಕಡೆಗೆ ತಿರುಗಿ, "ಅವನು ಹೇಳಿದುದು ಕೇಳಲಿಲ್ಲವೇನೆ? ಹೋಗು. ಎಲ್ಲವನ್ನೂ ತೆಗೆದುಕೊಂಡು ಬಾ" ಎಂದನು.

ಪುಷ್ಪಲತೆಯು ಮೆಟ್ಟಲುಗಳನ್ನಿಳಿದು ಹೋಗಿ ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲವನ್ನೂ ತಂದಳು. ಅವಳು ಬರುವ ವೇಳೆಗೆ ಕುಮುದಚಂದ್ರನು ಜೈಲರನ ಅಂಗಿಯನ್ನು ತೆಗೆದು ಅವನ ಷರಟನ್ನು ಮೇಲಕ್ಕೆ ಸುತ್ತಿದ್ದನು. ಕಾಳೀಚರಣನು ತನ್ನ ಕೈಯನ್ನು ಸಮೀಪದಲ್ಲಿದ್ದ ಮೇಜೊಂದರ ಮೇಲಿಟ್ಟನು. ಕುಮುದಚಂದ್ರನು ಮುರಿದಿದ್ದ ಎಲುಬನ್ನು ಸರಿಯಾಗಿ ಕೂಡಿಸಿ ಬ್ಯಾಂಡೇಜನ್ನು ಕಟ್ಟಿದನು. ಎಲ್ಲವೂ ಮುಗಿಯುವ ವೇಳೆಗೆ ಕಾಳೀಚರಣನಿಗೆ ಪುನಃ ಜ್ಞಾನವು ಹೋಯಿತು

ಕುಮುದಚಂದ್ರನು, "ಪುಷ್ಪಲತಾ! ಹೋಗು ಮೊದಲು ಸ್ವಲ್ಪ ಬ್ರಾಂದಿಯನ್ನು ತೆಗೆದುಕೊಂಡು ಬಾ ಕಪೋಲಗಳ ಮೇಲೆ ಸ್ವಲ್ಪ ಅದನ್ನುಜ್ಜಿದರೆ ಆತನಿಗೆ ತಿಳಿವುಂಟಾಗುವುದು" ಎಂದನು.

ಪುಷ್ಪಲತೆಯು ಡಾಕ್ಟರನ ಆಜ್ಞೆಯನ್ನು ಪಾಲಿಸುವುದರ ಬದಲಾಗಿ ಕುಮುದಚಂದ್ರನ ಸಮೀಪಕ್ಕೆ ಬಂದಳು ತಂದೆಯು ಜ್ಞಾನರೂನ್ಯನಾಗಿದ್ದನೆಂದವಳು ಬಲ್ಲವಳಾಗಿದ್ದಳು. ಅವಳು ಮೆಲ್ಲನೆ, "ತಮ್ಮ ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕೆಂದಿದ್ದೇನೆ" ಎಂದಳು.

"ನೀನು ಹೇಳುವುದೇನು ಪುಷ್ಪಾ?"

"ತಮಗೆ ಒಂದು ವಿಷಯವನ್ನು ಹೇಳಬೇಕಾಗಿದೆ. ನಾಳೆಯ ದಿನ ತಮ್ಮನ್ನು ವಿಚಾರಿಸುವ ನ್ಯಾಯಾಧಿಪತಿಯು ಈ ದಿನ ಅದೇನನ್ನೋ ಕೇಳಿ ತಿಳಿದುಕೊಳ್ಳುತ್ತಿದ್ದನು. ರಮಾನಾಥಬಾಬುಗಳಿದ್ದ ಕೊಟಡಿಯಲ್ಲಿಯೇ ತಮ್ಮನ್ನು ಬಂಧಿಸಿಟ್ಟಿರುವುದನ್ನು ಅರಿಯುತ್ತಲೇ ಅವನು ಅದೇಕೋ ವಿಕಟವಾಗಿ ಆಶ್ಚರ್ಯವುಂಟಾಗುವಂತೆ ನಕ್ಕನು. ಆ ನಗುವನ್ನು ಕೇಳಿ ನನಗೇಕೋ ಬಹಳ ಭೀತಿಯುಂಟಾಯಿತು. ತಮಗೆ ಶುಭವಾಗುವ ಸೂಚನೆಗಳಾವುವೂ ತೋರಲಿಲ್ಲ"

"ಆದರೆ ನನಗಾವತೊಂದರೆಯನ್ನು ತಾನೆ ಅವರು ಮಾಡಬಲ್ಲರು?"

"ಆ ಗಲ್ಲುಮರವನ್ನು ನೋಡೋಣಾಗಲಿ"

"ಆದರೆ ನಾನಾವ ಅಪರಾಧವನ್ನೂ ಮಾಡಿಲ್ಲವಲ್ಲಾ!"

"ಆ ಗಲ್ಲುಮರಕ್ಕೆ ನೇಣುಹಾಕಿರುವವರನ್ನು ನೋಡಿದಿರಾ? ಅವರಾವ ವಿಧದಲ್ಲಿ ಅಪರಾಧಿಗಳು?"

"ಅದು ನಿಜ"

"ಅಲ್ಲದೆ ತಾವು ತಪ್ಪಿತಸ್ಥರೆಂದೇ ಸಿದ್ಧಾಂತ ಪಡಿಸಲು ಪುರಜನರು ಆತುರರಾಗಿದ್ದಾರೆ. ತಾವು ತಪ್ಪಿತಸ್ಥರಹುದೋ ಅಲ್ಲವೋ ಕೇಳುವವ ರಾರು? ತಮ್ಮ ವಿಚಾರಣೆಯು ನಾಳೆಯ ದಿನ ಪ್ರಾರಂಭವಾಗುವುದು. ನಾಡಿದ್ದು ತೀರ್ಮಾನವನ್ನೀಯುವರು. ಈಗಿನ ಕಾಲವಲ್ಲಿ ಎಲ್ಲವೂ ಬಹು ಬೇಗನೆ ನಿರ್ಧರಿಸಲ್ಪಡುವುದು".

"ಇರಲಿ. ಇದರಿಂದೇನು ತಿಳಿದಿರುವೆ"

"ನನಗೆ ತಿಳಿದಿರುವುದಿಷ್ಟೇ. ನಾನು ಇಲ್ಲಿ ಒಬ್ಬಂಟಿಗಳಾಗಿದ್ದೇನೆ. ನನಗೆ ಶಕ್ತಿಯಿಲ್ಲ. ನನ್ನ ತಂದೆಯು ಮೂರ್ಛಿತನಾಗಿದ್ದಾನೆ. ನಾಯಿ ಯನ್ನು ಕಟ್ಟಿಹಾಕಿ ಬಂದಿದ್ದೇನೆ ತಾವು ಓಡಿಹೋಗಲು ಯಾವ ತೊಂದರೆಯೂ ಇಲ್ಲ. ಆದುದರಿಂದ ಮೊದಲು ಓಡಿಹೋಗಿ".

"ಅದೇನು ನೀನು ಹೇಳುವುದು?"

"ನಾನು ಹೇಳುವುದೇನೆಂದರೆ—ನನಗೆ ರಮಾನಾಥಬಾಬುಗಳನ್ನಾ ಗಲಿ ಉಮಾನಾಥಬಾಬುಗಳನ್ನಾಗಲಿ ಉಳಿಸಲು ಸಾಧ್ಯವಾಗಲಿಲ್ಲ. ಆದುದ ರಿಂದ ತಮ್ಮನ್ನುಳಿಸಲು ಪ್ರಯತ್ನಿಸುತ್ತಿದ್ದೇನೆ. ಬೇಗ ಹೊರಟುಹೋಗಿ. ನೋಡಿ, ನನ್ನ ತಂದೆಯು ಪುನಃ ಎಚ್ಚರಗೊಳ್ಳುತ್ತಿದ್ದಾನೆ. ಒಂದು ನಿಮಿಷವಾದರೆ ಅವನು ಕಣ್ಣು ತೆರೆಯುತ್ತಾನೆ. ಆಗ ಹೋಗಲಾಗುವುದಿಲ್ಲ. ಇನ್ನೂ ನಿಧಾನಿಸುತ್ತಿರುವಿರೇಕೆ?"

ಕುಮುದನು ಕದಲದೆ ನಿಂತು ಪುಷ್ಪಲತೆಯನ್ನು ನೋಡುತ್ತಿದ್ದನು. ಅವಳು ಹೇಳುತ್ತಿದ್ದುದು ಅವನ ಕಿವಿಯ ಮೇಲೆಯೇ ಬಿದ್ದಂತಿರಲಿಲ್ಲ. ಹುಡುಗಿಯು ಸ್ವಲ್ಪ ಬೇಸರದಿಂದ, "ನಾನು ಹೇಳಿದುದು ಅರ್ಥವಾಗ ಲಿಲ್ಲವೆ?" ಎಂದು ಕೇಳಿದಳು.

ಕುಮುದಚಂದ್ರ—ಅರ್ಥವಾಯಿತು. ಆದರೆ................

"ಆದರೆ—ಏನು?"

"ಆದರೆ ನಾನದರಂತೆ ನಡೆಯಲಾರೆ. ಎಲ್ಲರೂ ನಿನ್ನನ್ನು ನಿಂದಿ ಸುವರು".

ಪುಷ್ಪಲತೆಯು ಸ್ವಲ್ಪ ಲಜ್ಜಿತಳಾಗಿ, "ಅದನ್ನು ಯೋಚಿಸಬೇಡಿ— ಅದರ ಯೋಚನೆ ಬೇಡ" ಎಂದು ಹೇಳಿದಳು.

ಕುಮುದಚಂದ್ರನು, "ನೀನು ಬಹಳ ಒಳ್ಳೆಯ ಹುಡುಗಿ—ಆದರೂ ನಾನಿಲ್ಲಿಯೇ ನಿಲ್ಲುತ್ತೇನೆ" ಎಂದನು.

ಪುಷ್ಪಲತಾ—ಏನು? ಇಲ್ಲಿಯೇ ನಿಲ್ಲುವಿರಾ! ಇಲ್ಲಿದ್ದರೇನು ಪರಿಣಾಮವಾಗುವುದೆಂಬುದನ್ನು ಯೋಚಿಸಿರುವಿರಾ!—ನಿಮ್ಮನ್ನು ಮರಣ ದಂಡನೆಗೆ ಗುರಿಮಾಡುತ್ತಾರೆ—ಗಲ್ಲಿಗೇರಿಸುತ್ತಾರೆ—ಖೂನಿ ಮಾಡಿಬಿಡುತ್ತಾರೆ—ರಮಾನಾಥ ಉಮಾನಾಥರಿಗೆ ಮಾಡಿದಂತೆಯೇ ನಿಮಗೂ ಮಾಡುತ್ತಾರೆ—ನಿಮ್ಮನ್ನು ಛಿದ್ರಛಿದ್ರವಾಗಿ ಕತ್ತರಿಸಿಬಿಡುತ್ತಾರೆ—ದೇವರಾಣೆಗೂ ನನ್ನ ವಿಷಯವನ್ನು ಯೋಚಿಸಬೇಡಿ ಮೊದಲು ಇಲ್ಲಿಂದ ಓಡಿಹೋಗಿ-ಹುಷಾರಾಗಿರಿ. ನಿಮ್ಮ ಮನೆತನದವರಾರಿಗೂ ಅದೃಷ್ಟವಿಲ್ಲ.

ಜೈಲರನು ಎಚ್ಚೆತ್ತುಕೊಳ್ಳುತ್ತ "ಓಹೋ! ಯಾರದು ಆ ಕಳ್ಳರ ವಿಚಾರವನ್ನು ಹೇಳುತ್ತಿರುವವರು? ದ್ರೋಹಿಗಳಾದ ರಮಾನಾಥ ಉಮಾನಾಥರ ವಿಷಯವನ್ನು ಹೇಳುತ್ತಿರುವವರು ಯಾರು?" ಎಂದು ಕೂಗಿಕೊಳ್ಳತೊಡಗಿದನು.

ಕುಮುದಚಂದ್ರನು ಕಿರುನಗೆಯನ್ನು ತೋರುತ್ತ, "ಕೋಪಿಸಬೇಡಿ ಅಣ್ಣ! ಎಲುಬು ಮುರಿದುಹೋಗಿರುವಾಗ ಉದ್ರೇಕಗೊಳ್ಳಬಾರದು ಅದರಿಂದ ರಕ್ತವು ಬಿಸಿಯಾಗಿ ಕುದಿಯತೊಡಗುವುದು" ಎಂದನು. ಬಳಿಕ ಪುಷ್ಪಲತೆಯ ಕಡೆಗೆ ತಿರುಗಿ ಮೆಲ್ಲನೆ, "ಪುಷ್ಪಾ! ನಾನು ನಿರಪರಾಧಿ. ನನ್ನ ವಿಚಾರಣೆಯನ್ನು ಧೈರ್ಯವಾಗಿ ಎದುರಿಸುವೆನು. ಯೋಚಿಸಬೇಡ" ಎಂದನು.

ಪುಷ್ಪಲತೆಯು ಸುಮ್ಮನಿರಿ ಎಂದಳು.

ಕುಮುದಚಂದ್ರನು ಅದೇಕೆ ಎಂದು ಕೇಳಿದನು.

"ನಾವಿಬ್ಬರೂ ಮಾತನಾಡುತ್ತಿದ್ದೆವೆಂದು ನನ್ನ ತಂದೆಗೆ ತಿಳಿಯಬಾರದು"

"ಅದರಿಂದ ಬಾಧಕವೇನು?"

"ಬಾಧಕವಿಲ್ಲವೆ? ಇನ್ನು ಮೇಲೆ ನಾನು ಇಲ್ಲಿಗೆ ಬರದಂತೆಯೇ ಮಾಡುವೆನು".

ಕುಮುದಚಂದ್ರನಿಗೆ ಆ ಮಾತುಗಳನ್ನು ಕೇಳಿ ಬಹಳ ಸಂತೋಷ ವಾಯಿತು ತನ್ನ ಪಥದಲ್ಲಿ ಅದೃಷ್ಟ ಚಲನೆಯಾಗುತ್ತಿದ್ದಂತೆ ಅವನಿಗೆ ಭಾಸವಾಗತೊಡಗಿತು. ಅವನು ಮುಗುಳನಗೆಯನ್ನು ತೋರುತ್ತಿದ್ದನು. ಅಷ್ಟರಲ್ಲಿ ಕಾಳೀಚರಣನು ಎಡಗೈಯನ್ನು ಬಲಗೈಯಲ್ಲಿಟ್ಟುಕೊಳ್ಳುತ್ತಿ ಎದ್ದು ನಿಲ್ಲತೊಡಗಿ, "ಏನದು ನೀವಿಬ್ಬರೂ ಹರಟುತ್ತಿರುವುದು?" ಎಂದು ಕೂಗಿದನು.

ಪುಷ್ಪಲತೆ—ಏನೂ ಇಲ್ಲಪ್ಪಾ! ನಿನಗಾವ ಆಹಾರವನ್ನೂ ಪಥ್ಯ ವನ್ನೂ ಕೊಡಬೇಕೆನ್ನುವುದನ್ನು ಡಾಕ್ಟರು ವಿವರಿಸುತ್ತಿದ್ದರು.

ಕಾಳೀಚರಣ—ಪಥ್ಯವೆ? ನನಗೆ ಪಥ್ಯವೆ? ಇರಲಿ ತಾಯಿ! ನಿನಗೂ ಪಥ್ಯವನ್ನು ಗೊತ್ತುಮಾಡುತ್ತೇನೆ.

"ನನಗಾವ ಪಥ್ಯವಪ್ಪಾ!"

"ಬಂದಿಗಳ ಕೊಟಡಿಗಳಿಗೆ ಹೋಗದಿರುವುದು, ಹೋದರೂ ಬೇಗ ಅಲ್ಲಿಂದ ಹೊರಟುಹೋಗುವುದು--ಇದೇ ನಿನಗೆ ವಿಧಿಸಿರುವ ಪಥ್ಯ. ತಿಳಿಯಿತೆ?—ನಡೆ—ನನ್ನೊಡನೆಯೇ ನಡೆ—ಬೇಗ ನಡೆ ."

ಪುಷ್ಪಲತೆಯೂ ಕುಮುದಚಂದ್ರನೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಪುಷ್ಪಳ ಮುಖಭಾವವು, "ನಾನೇನು ಹೇಳಿದೆ ನೋಡಿದಿರಾ?" ಎನ್ನುವಂತಿತ್ತು. ಕುಮುದನ ಮುಖಭಾವವು, "ದೇವರು ಮಾಡಿಸಿದಾಗಲಿ" ಎನ್ನುವಂತಿತ್ತು.

## ಏಕಾದಶ ಪರಿಚ್ಛೇದ

### ಕುಮುದಚಂದ್ರನ ಉಯಿಲು

ಪುಷ್ಪಲತೆಯು ತಿಳಿದಿದ್ದುದು ತಪ್ಪಾಗಲಿಲ್ಲ. ಮರುದಿನ ನ್ಯಾಯಾಧಿ ಪತಿಗಳು ಕಾರಾಗೃಹಕ್ಕೇ ಬಂದು ಅಲ್ಲಿಯೇ ಬಂದಿಯ ವಿಚಾರಣೆಯನ್ನಾ ರಂಭಿಸಿದರು. ವಿಚಾರಣೆಯೂ ಬಹಳ ಹೊತ್ತು ಹಿಡಿಯಲಿಲ್ಲ ಏಕೆಂದರೆ

ವಿಲಾಸನಗರಿಯು ದೊರೆಯೊಡನೆ ರಮಾನಾಥ ಉಮಾನಾಥರು ನಡೆಸಿದ ಪತ್ರವ್ಯವಹಾರವು ಕುಮುದನ ಮನೆಯಲ್ಲಿಯೇ ಸಿಕ್ಕಿಹೋಗಿದ್ದಿತು.

ಕುಮುದನಾದರೂ ಪತ್ರಗಳು ತನ್ನಲ್ಲಿರಲಿಲ್ಲವೆಂದು ಹೇಳಲಿಲ್ಲ.

ಒಂದು ವಿಚಾರವನ್ನು ನಿರ್ಧರಿಸುವುದು ಸ್ವಲ್ಪ ಕಷ್ಟವಾಗಿದ್ದುದು—ಅದೇನೆಂದರೆ ಈ ಪತ್ರವ್ಯವಹಾರದ ಕಟ್ಟು ರಮಾನಾಥನಿಂದ ಕುಮುದ ಚಂದ್ರನಿಗೆ ಕೊಡಲ್ಪಟ್ಟದ್ದಿತೆ ಇಲ್ಲವೆ—ಎಂಬುದೇ.

ರಮಾನಾಥನೂ ಉಮಾನಾಥನೂ ಮೃತಿಹೊಂದಿದ್ದರಾಗಿ ಸತ್ಯವನ್ನು ಮರೆಮಾಚಲು ಕುಮುದಚಂದ್ರನಿಗೆ ಯಾವ ಕಾರಣವೂ ಇರಲಿಲ್ಲ. ಆದುದರಿಂದ ಅವನು ಎಲ್ಲವನ್ನೂ ಎಸದಪಡಿಸಿದನು

ಹೀಗೆ ಒಪ್ಪಿಕೊಂಡುದರಿಂದ ರಮಾನಾಥನ ತಪ್ಪಿನಲ್ಲಿ ಕುಮುದ ಚಂದ್ರನೂ ಭಾಗಿಯಾದಂತಾಯಿತು. ಇಬ್ಬರೂ ಪರಸ್ಪರ ಮಾತನಾಡಿ ಕೊಂಡು ರಾಜದ್ರೋಹವನಾಡಲೆತ್ನಿಸಿದರೆಂದು ನ್ಯಾಯಾಧಿಪತಿಗಳು ಅರ್ಥ ಮಾಡಿಕೊಂಡರು.

ಕುಮುದಚಂದ್ರನು ತನ್ನ ಸಾಕುತಂದೆಯ ವಿಷಯವಾಗಿ ಹೇಳಿದ ಬಳಿಕ ತನ್ನ ಚರಿತ್ರೆಯನ್ನೂ ತನ್ನ ದಿನಚರಿಯನ್ನೂ ತನ್ನ ಪದ್ಧತಿಗಳನ್ನೂ ವಿವರಿಸಿದನು. ರಾಜಕೀಯಕ್ಕೂ ತನಗೂ ಸಂಬಂಧವಿಲ್ಲವೆಂದೂ, ತಾನು ವಿದ್ಯಾರ್ಜನೆಯಲ್ಲಿ ಆಸಕ್ತಿಯುಳ್ಳವನೆಂದೂ, ಕಲೆಗಳಲ್ಲಿಯೂ ವಿಜ್ಞಾನ ದಲ್ಲಿಯೂ ಆಶೆಯುಳ್ಳವನೆಂದೂ, ಕುಸುಮಗಳ ವಿಷಯವೆಂದರೆ ಅವನ ಮನಸ್ಸು ಆಪ್ಯಾಯಮಾನವಾಗುವುದೆಂದೂ ಹೇಳಿದನು. ಅಲ್ಲದೆ ರಮಾ ನಾಥನು ಪತ್ರಗಳ ಕಟ್ಟನ್ನು ಕೊಟ್ಟಂದಿನಿಂದ ಅವನ್ನು ತಾನು ಮುಟ್ಟೇ ಇಲ್ಲವೆಂದೂ ಕಡೆಗೆ ನೋಡಿಯೂ ಇಲ್ಲವೆಂದೂ ಹೇಳಿದನು.

ಕುಮುದನು ಹಾಗೆ ಹೇಳಿದುದಕ್ಕೆ ಸರ್ಕಾರವು ಎದುರುವಾದ ವೊಂದನ್ನು ಹೂಡಿದುದು. ಆ ಪತ್ರಗಳ ಕಟ್ಟಿದ್ದ ಡ್ರಾಯರ್‌ನಲ್ಲಿಯೇ ಕುಮುದನ ಪ್ರೀತಿಪಾತ್ರ ಸಸಿಗಳಿದ್ದುದರಿಂದ ಅವನು ಸಸಿಗಳನ್ನೂ ಪತ್ರ ಗಳನ್ನೂ ಪ್ರತಿದಿನವೂ ಪರೀಕ್ಷಿಸುತ್ತ ನೋಡುತ್ತ ಇದ್ದನೆಂದು ಹೇಳಬಹು ದೆಂದೂ, ಬೇರೆವಿಧವಾಗಿ ಅವನು ಹೇಳಿದರೆ ಅದು ನಂಬಲು ಅನರ್ಹ ವೆಂದೂ ಸರ್ಕಾರದವರು ವಾದಿಸಿದರು. ಕುಮುದನು ಡ್ರಾಯರನ್ನು ತೆಗೆದು

ನೋಡುತ್ತಿದ್ದುದನ್ನೊಪ್ಪಿಕೊಂಡನು. ಆದರೆ ಡ್ರಾಯರ್‌ನಲ್ಲಿದ್ದ ಸಸಿಗಳನ್ನು ಮಾತ್ರ ಆವನು ನೋಡಿ ಅವು ಮೊಳಕೆ ಬಿಟ್ಟುವೇ ಇಲ್ಲವೇ ಎಂದು ಪರೀಕ್ಷಿಸುತ್ತಿದ್ದನೆಂಮೂ ಪುತ್ತ್ರಾವುದನ್ನೂ. ನೋಡುತ್ತಿರಲಿಲ್ಲವೆಂಮೂ ಹೇಳಿದನು. ಅದನ್ನು ಸರ್ಕಾರದವರು"ಒಪ್ಪಿಕೊಳ್ಳಲಿಲ್ಲ ಪತ್ರಗಳಮೇಲಿನ ಅನಾಸಕ್ತಿಯನ್ನು ಬೇಕೆಂದು ಈಗವನು ತೋರ್ಪಡಿಸುತ್ತಿದ್ದನೆಂದೂ ಪತ್ರಗಳ ವಿಷಯವನ್ನೇ ತಿಳಿಯಹೇಳದೆ ರಮಾನಾಥನು ಅವುಗಳನ್ನು ಕುಮುದನ ವಶಕ್ಕೆ ಕೊಟ್ಟನೆನ್ನುವುದು ನಂಬಲರ್ಹವಲ್ಲವೆಂದೂ ಹೇಳಿದರು ಕುಮುದಚಂದ್ರನು ಅವಕ್ಕೆ ಉತ್ತರಕೊಡುತ್ತ, ರಮಾನಾಥನಿಗೆ ತನ್ನ ಸಾಕುಮಗನ ಮೇಲೆ ಬಹಳ ಪ್ರೇಮವಿತ್ತೆಂದೂ ಪತ್ರಗಳ ವಿಷಯವನ್ನು ಪ್ರಕಟಿಸೆ ಮಾಡಿದರೆ ಮಗನಿಗೆ ಯೋಚನೆಯೂ ಕಾತರತೆಯೂ ಉಂಟಾಗುವುವೆಂದವನು ಆ ವಿಷಯವನ್ನೇ ಹೇಳಲಿಲ್ಲವೆಂದೂ ತಿಳಿಸಿದನು ಸರ್ಕಾರದವರು ಅದಕ್ಕೆದುರಾಗಿ ವಾದಮಾಡುತ್ತ, ರಮಾನಾಥನಿಗೆ ಅಂತಹ ಇಷ್ಟವಿದ್ದಿದ್ದರೆ ಕುಮುದನಿಗೆ ಈ ವಿಷಯಗಳಾವುವೂ ತಿಳಿದಿಲ್ಲವೆಂದು ಪತ್ರವೊಂದನ್ನು ಬರೆದು ಆ ಕಟ್ಟಿನಲ್ಲಿಯೇ ಇಟ್ಟಿರಲಿಲ್ಲವೇಕೆಂದು ಪ್ರಶ್ನಿಸಿದರು. ರಮಾನಾಥನ ವಿಚಾರಣೆಯಾದಾಗಲಾದರೂ ಅಂತಹ ಪತ್ರದ ವಿಷಯವಾಗಿ ಹೇಳಬಹುದಾಗಿತ್ತೆಂದೂ ಹೇಳಿದರು.

ಕುಮುದನು ಅದಕ್ಕೆ ಉತ್ತರ ಹೇಳಿದನು:—" ರಮಾನಾಥನು ನನ್ನ ಬಳಿ ಇಟ್ಟಿದ್ದ ಪತ್ರಗಳು ಸುರಕ್ಷಿತವಾಗಿರುವುವೆಂದವನು ನಂಬಿದ್ದನು. ನನ್ನ ಸಸಿಯ ಕೊಟಡಿಗೆ ಯಾರೂ ಪ್ರವೇಶಿಸುತ್ತಿರಲಿಲ್ಲವಾಗಿ ಪತ್ರಗಳ ವಿಷಯವು ಯಾರಿಗೂ ತಿಳಿಯುವಂತೆಯೇ ಇರಲಿಲ್ಲ. ಆದುದರಿಂದ ಅದಕ್ಕಾಗಿ ಬೇರೊಂದು ಪತ್ರವನ್ನು ಬರೆದಿಡುವ ಪ್ರಮೇಯವೇ ಇರಲಿಲ್ಲ— ತಾವು ಈಗ ಪತ್ರದ ವಿಷಯವನ್ನು ಹೇಳುತ್ತಲೇ ಒಂದು ವಿಷಯವು ಜ್ಞಾಪಕಕ್ಕೆ ಬರುತ್ತಿದೆ. ನನ್ನ ದಸ್ತಗಿರಿಯಾಗುವುದಕ್ಕೆ ಕೆಲವು ನಿಮಿಷಗಳ ಹಿಂದೆ ರಮಾನಾಥನ ಸೇವಕ ರವಿವರ್ಮನು ನನಗೆ ಪತ್ರವೊಂದನ್ನು ಕೊಟ್ಟನು. ಆಗ ನಾನು ಅಪೂರ್ವವಾದೊಂದು ಸಸಿಯನ್ನು ಪರೀಕ್ಷಿಸುವುದರಲ್ಲಿ ನಿರತನಾಗಿದ್ದೆನು ಎಲ್ಲವನ್ನೂ ಸ್ವಪ್ನದಲ್ಲಿ ಕಂಡಂತಿರುವುದು.

ಆ ಸೇವಕ ರವಿವರ್ಮನು ಎಲ್ಲಿಯೋ ಹೊರಟುಹೋಗಿರುವನು. ಚೆನ್ನಾಗಿ ಹುಡುಕಿ ನೋಡಿದರೆ ಆ ಪತ್ರವು ಸಿಕ್ಕಿದರೂ ಸಿಕ್ಕಬಹುದು".

ಕುಮುದನ ಮಾತುಗಳನ್ನು ಸರ್ಕಾರದವರು ಹೆಚ್ಚಾಗಿ ಗಮನಕ್ಕೆ ತಂದುಕೊಳ್ಳಲಿಲ್ಲ. ರವಿವರ್ಮನು ಆ ರಾಜ್ಯವನ್ನು ಬಿಟ್ಟು ಓಡಿಹೋಗಿದ್ದ ನಾಗಿ ಅವನು ಸಿಕ್ಕುವ ಸಂಭವವಿರಲಿಲ್ಲ. ಅವನನ್ನು ಅನ್ವೇಷಣೆ ಮಾಡುವ ಪ್ರಯತ್ನಕ್ಕೆ ಯಾರೂ ಹೋಗಲಿಲ್ಲ. ಕುಮುದನು ಪತ್ರದ ವಿಷಯವಾಗಿ ಹೆಚ್ಚು ಒತ್ತಾಯಮಾಡಲಿಲ್ಲ ಒಂದುವೇಳೆ ಅದು ಸಿಕ್ಕಿದರೂ ರಾಜ ದ್ರೋಹಕರ ಪತ್ರಗಳನ್ನು ಹತ್ತಿರವೇ ಇಟ್ಟುಕೊಂಡಿದ್ದವನನ್ನು ಸರ್ಕಾರ ದವರು ಸುಮ್ಮನೆ ಬಿಡುವುದಿಲ್ಲವೆಂದವನು ಯೋಚಿಸತೊಡಗಿದ್ದನು.

ನ್ಯಾಯಾಧಿಪತಿಗಳು ಕುಮುದಚಂದ್ರನ ಮೇಲೆ ಬಹಳ ಪ್ರೇಮವನ್ನು ತೋರುವಂತೆ ನಟಿಸಿ ಮತ್ತೇನನ್ನಾದರೂ ಹೇಳುವುದಾದರೆ ಹೇಳಬಹು ದೆಂದಪ್ಪಣೆ ಮಾಡಿದರು. ಕುಮುದಚಂದ್ರನು ಸತ್ಪುರುಷರಿಗಿರುವ ಸಹಜ ವಾದ ಧೈರ್ಯದಿಂದ ಉತ್ತರಕೊಟ್ಟನು —"ಸ್ವಾಮಿ! ತಾವು ಕೇಳುವ ವಿಷಯಗಳಿಗೆ ನಾನು ಸತ್ಯವಾದ ಉತ್ತರವನ್ನು ಮಾತ್ರ ಕೊಡಬಲ್ಲವ ನಾಗಿದ್ದೇನೆ ಅದನ್ನು ಕೇಳೋಣಾಗಲಿ. ಆ ಪತ್ರಗಳ ಕಟ್ಟು ನನ್ನ ಬಳಿ ಹೇಗೆ ಬಂತೆಂಬುದನ್ನು ಆಗಲೇ ವಿಶದಪಡಿಸಿರುತ್ತೇನೆ. ದೇವದೇವನ ಮುಂದೆ ಪ್ರಮಾಣಮಾಡಿ ಹೇಳುತ್ತೇನೆ ಕೇಳಿ. ಆ ಪತ್ರಗಳಲ್ಲಿರುವು ದೇನೆಂಬುದು ನನಗೆ ಮೊದಲೂ ತಿಳಿದಿರಲಿಲ್ಲ, ಈಗಲೂ ತಿಳಿದಿಲ್ಲ. ನನ್ನ ದಸ್ತಗಿರಿಯಾಗುವವರೆಗೂ ಆ ಪತ್ರಗಳು ರಾಜಕೀಯಸಂಬಂಧವಾದು ವೆಂದು ಕೂಡ ನನಗೆ ತಿಳಿದಿರಲಿಲ್ಲ. ಉಮಾನಾಥಬಾಬುಗಳೂ ರಮಾನಾಥ ಬಾಬುಗಳೂ ವಿಲಾಸನಗರಿಯ ದೊರೆಯೊಡನೆ ನಡೆಸಿದ ಪತ್ರವ್ಯವಹಾರ ಗಳು ಅವುಗಳಲ್ಲಿರುವುವೆಂದು ತಾವು ಹೇಳಿದ ಮೇಲೆಯೇ ಬಲ್ಲವನಾ ಗಿದ್ದೇನೆ. ನನ್ನ ಬಳಿ ಈ ಪತ್ರಗಳಿರುವುವೆಂದು ಯಾವನಿಗೇ ಆಗಲಿ ಅದು ಹೇಗೆ ತಿಳಿಯಿತೆಂದು ಅರಿಯಲಾರದವನಾಗಿದ್ದೇನೆ. ನನ್ನ ಪ್ರೀತಿಪಾತ್ರರೂ ಉತ್ತಮರೂ ಅದೃಷ್ಟಹೀನರೂ ಆದ ರಮಾನಾಥಬಾಬುಗಳು ನನಗೆ ಕೊಟ್ಟ ಪತ್ರಗಳಿಂದ ನಾನು ತಪ್ಪಿತಸ್ಥನೆಂದು ಹೇಳಲಾಗದು"

ಕುಮುದಚಂದ್ರನು ಇಷ್ಟು ಹೇಳಿ ಸುಮ್ಮನಾದನು. ನ್ಯಾಯಾಧಿಪತಿಗಳು ತೀರ್ಪನ್ನೀಯುವುದಕ್ಕೆ ಮೊದಲು ತಮ್ಮ ತಮ್ಮಲ್ಲಿಯೇ ಚರ್ಚಿಸಿಕೊಳ್ಳತೊಡಗಿದರು. ಅವರಲ್ಲೊಬ್ಬನು ಎಲ್ಲವನ್ನೂ ಬಹು ಸೂಕ್ಷ್ಮದೃಷ್ಟಿಯಿಂದ ಅರಿಯುವವನಂತೆ ತೋರ್ಪಡಿಸಿಕೊಳ್ಳುತ್ತಿದ್ದನು. ಅವನು ಕುಮುದಚಂದ್ರನನ್ನು ನೋಡಿ, ಅಪರಾಧಿಯು ಪುಷ್ಕವದನನಾಗಿರುವುದರಿಂದ ಮಹಾಭೀಕರಗುಣವುಳ್ಳವನಿರಬೇಕೆಂದೂ, ಮೇಲೆ ನಿರಪರಾಧಿಯಂತ ತೋರ್ಪಡಿಸಿಕೊಳ್ಳುತ್ತ ಅಂತರ್ಯದಲ್ಲಿ ತನ್ನ ಮಿತ್ರರಾದ ಉಮಾನಾಥ ರಮಾನಾಥರ ಮರಣದಂಡನೆಗೆ ತಕ್ಕ ಪ್ರತೀಕಾರ ಮಾಡಲು ಸಮಯನಿರೀಕ್ಷಣೆ ಮಾಡುತ್ತಿದ್ದನೆಂದೂ ಸಿದ್ಧಾಂತ ಮಾಡಿಕೊಂಡನು ಮತ್ತೊಬ್ಬ ನ್ಯಾಯಾಧೀಶನು ತನ್ನ ಅಭಿಪ್ರಾಯವನ್ನು ವಿಶದಪಡಿಸುತ್ತ, ಪುಷ್ಪಗಳ ಬೆಳವಣಿಗೆಯಲ್ಲಿ ಒಬ್ಬನು ಆಸಕ್ತನಾಗಿದ್ದ ಮಾತ್ರಕ್ಕೆ ಅವನು ರಾಜಕೀಯದಿಂದ ದೂರವಿರುವನೆಂದು ಎಂದಿಗೂ ಹೇಳಲಾಗದೆಂದೂ, ಸಸಿಗಳನ್ನು ಬೆಳೆಯುವಂತೆ ತೋರ್ಪಡಿಸಿಕೊಳ್ಳುತ್ತ ಎಷ್ಟೋ ಮಂದಿ ಬೇರೆ ಘೋರಕೃತ್ಯಗಳಲ್ಲಿ ನಿರತರಾಗಿದ್ದ ಸಂಭವವುಂಟೆಂದೂ ಹೇಳಿದನು.

ಕಡೆಗೆ ಮುಖ್ಯ ನ್ಯಾಯಾಧೀಶನು ಎಲ್ಲವನ್ನೂ ವಿವರಿಸುತ್ತ ಮೊಕದ್ದಮೆಯ ಮುಖ್ಯಾಂಶಗಳನ್ನು ಹೇಳತೊಡಗಿದನು.–"ಕುಮುದಚಂದ್ರನು ಪುಷ್ಪಗಳ ಬೆಳವಣಿಗೆಯಲ್ಲಿ ಮಹಾಪ್ರೀತಿಯುಳ್ಳವನಾಗಿರಬೇಕು. ಅಥವಾ ರಾಜಕೀಯದಲ್ಲಿ ಮಹಾಪ್ರೀತಿಯುಳ್ಳವನಾಗಿರಬೇಕು. ಅವನು ರಾಜಕೀಯದಲ್ಲಿ ಆಸಕ್ತನಾಗಿರುವುದು ಪತ್ರಗಳಿಂದ ವ್ಯಕ್ತವಾಗುವುದು. ಅವನ ಬಳಿ ಅನೇಕ ಸಸಿಗಳೂ ಗಿಡಗಳೂ ಇರುವುದರಿಂದ ಅವನು ಪುಷ್ಪಗಳಲ್ಲಿ ಆಸಕ್ತನಾಗಿರುವುದು ವ್ಯಕ್ತವಾಗುವುದು. ಅಂದರೆ ಅವನು ಎರಡರಲ್ಲಿಯೂ ಆಸಕ್ತನಾಗಿರುವನೆಂದು ವ್ಯಕ್ತವಾಯಿತು. ಅಂದಬಳಿಕ ಪುಷ್ಪಗಳಲ್ಲಿ ಮಾತ್ರ ಆಸಕ್ತನೆಂದೂ ರಾಜಕೀಯದಲ್ಲಿ ಅನಾಸಕ್ತನೆಂದೂ ಕುಮುದಚಂದ್ರನು ಹೇಳಿಕೊಂಡುದು ಶುದ್ಧ ಸುಳ್ಳಾಯಿತು ಅವನು ಒಂದು ಕಾರ್ಯದಲ್ಲಿ ಆಸಕ್ತನಂತೆ ತೋರ್ಪಡಿಸಿಕೊಳ್ಳುತ್ತ ಮತ್ತೊಂದು ಕಾರ್ಯದಲ್ಲಿ ಸರ್ವದಾ ನಿರತನಾಗಿರುವನು. ಇಂತಹವರು ಸಮಾಜದಲ್ಲಿ ಮಹಾ

ಭೀಕರರಾದ ವ್ಯಕ್ತಿಗಳು ಸಾರ್ವಜನಿಕ ಶಾಂತಿಗೆ ಇಂತಹವರಿಂದ ಭಂಗ ವುಂಟಾಗುವುದು".

ಈ ವಾದಗಳಿಂದಲೂ ತರ್ಕಗಳಿಂದಲೂ ಒಂದು ವಿಷಯವು ವಿಷದ ವಾಯಿತು—ಅದೇನೆಂದರೆ—"ವಿನಯಸಿಂಹನ ಆಪಳಿತಕ್ಕೆದುರಾಗಿ ನಿಂತ ದ್ರೋಹಿಗಳ ತಂಡವೆಲ್ಲವನ್ನೂ ವಿನಾಶಮಾಡಿಬಿಟ್ಟರೆ ಆ ರಾಜಕುಮಾರನು ನಿಶ್ಚಿಂತನಾಗಿ ರಾಜ್ಯಭಾರ ಮಾಡಬಲ್ಲನು—ರಾಜದ್ರೋಹದ ಮೊಳಕೆಯು ಬೆಳೆಯುವುದಕ್ಕೆ ಮೊದಲೇ ನ್ಯಾಯಾಧೀಶರು ಅದನ್ನು ನಿರ್ಮೂಲ ಮಾಡಿ ಬಿಟ್ಟರೆ ರಾಜಕುಮಾರನು ನಿರಾತಂಕವಾಗಿರಬಲ್ಲನು" ಎಂಬುದು. ಈ ವಿಷಯವು ಮಿಕ್ಕೆಲ್ಲ ವಿಷಯಗಳಿಗಿಂತಲೂ ಹೆಚ್ಚಾಗಿ ನ್ಯಾಯಾಧಿಪತಿಗಳ ಮನಸ್ಸನ್ನು ಕಲಕಿದುದು. ಅವರು ರಾಜದ್ರೋಹದ ಮೊಳಕೆಯನ್ನು ಕತ್ತರಿಸಿಹಾಕಿಬಿಡುವ ಉದ್ದೇಶದಿಂದ ಕುಮುದಚಂದ್ರನಿಗೆ ಮರಣದಂಡನೆ ಯನ್ನು ವಿಧಿಸಿದರು. ಅವನು ಪುಷ್ಪಗಳ ಬೆಳವಣಿಗೆಯಲ್ಲಿರುವವನಂತೆ ತೋರ್ಪಡಿಸಿಕೊಳ್ಳುತ್ತ ರಮಾನಾಥ ಉಮಾನಾಥರ ದ್ರೋಹಚಿಂತನೆಗಳಿಗೆ ಸಹಾಯಕನಾಗಿಯೂ ಉತ್ತೇಜಕನಾಗಿಯೂ ಇದ್ದನೆಂದು ಅವನ ಮೇಲೆ ಆಪಾದನೆಮಾಡಿ ಶಿಕ್ಷೆಯನ್ನು ವಿಧಿಸಿದರು. ಕುಮುದಚಂದ್ರನು ಕಾರಾ ಗೃಹದ ಸಮೀಪದಲ್ಲಿರುವ ಗಲ್ಲಿಗೇ ತೂಗುಹಾಕಲ್ಪಡಬೇಕೆಂದೂ ತೀರ್ಮಾನಿ ಸಿದರು.

ಕುಮುದಚಂದ್ರನು ತನಗೆ ವಿಧಿಸಲ್ಪಟ್ಟ ಶಿಕ್ಷೆಯನ್ನು ಕೇಳಿದನು ಅವನ ಮನಸ್ಸು ವಿಚಲಿತವಾಗಲಿಲ್ಲ. ಅವನು ಕಾರಾಗೃಹಕ್ಕೆ ಕಳುಹಿ ಸಲ್ಪಟ್ಟನು.

* * * *

ಕಾಳೀಚರಣನಿಗೆ ಎಲುಬು ಮುರಿದುಹೋಗಿದ್ದುದರಿಂದ ಜ್ವರವು ಬರಲಾರಂಭವಾಗಿದ್ದಿತು. ಆದುದರಿಂದ ಅವನು ಹಾಸಿಗೆಹಿಡಿದು ಮಲಗಿ ಬಿಟ್ಟನು. ಅವನ ಸಹಾಯಕನೊಬ್ಬನು ಜೈಲರನ ಪದವಿಯನ್ನು ತಾತ್ಕಾ ಲಿಕವಾಗಿ ವಹಿಸಿದ್ದನು. ಅವನು ಕಾರಕೂನನೊಬ್ಬನನ್ನು ಕರೆದುಕೊಂಡು ಕಾರಾಗೃಹದ ಬಳಿಗೆ ಬಂದು ಕುಮುದನ ಕಾರಾಗೃಹದ ಬಾಗಿಲನ್ನು ತೆರೆದನು. ಕಾರಕೂನನ ಹಿಂದೆಯೇ ಪುಷ್ಪಲತೆಯು ಬಾಗಿಲಬಳಿ ನಿಂತ

ದ್ದಳು. ಅವಳು ತನ್ನ ದುಃಖವನ್ನು ಪ್ರಕಾಶಪಡಿಸಬಾರದೆಂದು ಕರವಸ್ತ್ರವೊಂದನ್ನು ಬಾಯಬಳಿ ಇಟ್ಟುಕೊಂಡಿದ್ದಳು.

ಕಾರಕೂನನು ಕುಮುದನ ಬಳಿ ನಿಂತು ತೀರ್ಪನ್ನು ಗಟ್ಟಿಯಾಗಿ ಓದಿ ಹೇಳಿದನು. ಕುಮುದನು ಆಶ್ಚರ್ಯವನ್ನಾಗಲಿ ದುಃಖವನ್ನಾಗಲಿ ಪ್ರಕಾಶಪಡಿಸದೆ ಮೌನವಾಗಿದ್ದನು. ಕಾರಕೂನನು ಅವನನ್ನು ಸಮೀಪಿಸಿ, ತಾವು ಹೇಳಬೇಕಾದುದೇನಾದರೂ ಇದೆಯೆ ಎಂದು ಕೇಳಿದನು. ಕುಮುದಚಂದ್ರನು, 'ಏನೂ ಇಲ್ಲ ಆವರೆ ಪುಷ್ಪಗಳನ್ನು ಬೆಳೆಯುವವನಿಗೆ ಮರಣದಂಡನೆಯಾಗುವುದೆಂದು ಮಾತ್ರ ನಾನೆಂದಿಗೂ ನಂಬಿರಲಿಲ್ಲ" ಎಂದನು

ಕಾರಕೂನನು ಗೌರವಪೂರ್ವಕವಾಗಿ ಕುಮುದಚಂದ್ರನಿಗೆ ಅಭಿವಾದನಮಾಡಿ, ಹೊರಟುಹೋಗಲುದ್ಯುಕ್ತನಾದನು ಆಗ ಕುಮುದನು, "ಅಣ್ಣ!—ತಾವು ಹೇಳಿದುದು—ಅದನ್ನು ಬಲ್ಲಿರಷ್ಟೆ—ಅದು ನಡೆಯುವುದಾವದಿನ?" ಎಂದು ಕೇಳಿದನು. ಅವನು ಕುಮುದಚಂದ್ರನ ಧೈರ್ಯಸ್ಥೈರ್ಯಗಳನ್ನೂ ನಿರಾತಂಕ ಭಾವನೆಯನ್ನೂ ಕಂಡು ಅಚ್ಚರಿಗೊಂಡು, 'ಈ ದಿನವೇ ನಡೆಯುವುದು" ಎಂದನು

ಅದನ್ನು ಕೇಳಿದೊಡನೆಯೇ ಅದಾರೋ ಬಾಗಿಲಬಳಿ ದುಃಖದಿಂದ ಅಳುತ್ತಿದ್ದಂತೆ ಬೋಧೆಯಾಯಿತು. ಕುಮುದನು ಆ ಕಡೆಗೆ ತಿರುಗಿ ನೋಡಿದನು. ಪುಷ್ಪಲತೆಯು ಆ ವೇಳೆಗೆ ಹಿಂತಿರುಗಿ ಕಾಣದಂತೆ ಸ್ವಲ್ಪ ದೂರ ಸರಿದು ನಿಂತಿದ್ದಳು.

ಕುಮುದನು ತನ್ನ ಪ್ರಶ್ನೆಯನ್ನು ಮುಂದುವರಿಸುತ್ತ ಕೇಳಿದನು—ಎಷ್ಟು ಗಂಟೆಗೆ ನಡೆಯುವುದು?"

"ಹನ್ನೆರಡು ಗಂಟೆಗೆ".

"ಹಾಗೆಯೆ? ಈಗ ಸುಮಾರು ಇಪ್ಪತ್ತು ನಿಮಿಷಗಳ ಹಿಂದೆಯೆ ಹತ್ತುಗಂಟೆಗಳಾದ ಶಬ್ದವು ಕೇಳಿಬಂತಲ್ಲವೆ? ನನಗೆ ಹೆಚ್ಚು ಅವಕಾಶವಿರುವಂತೆ ಕಾಣುವುದಿಲ್ಲ".

"ನಿಜ. ತಾವು ದೇವರನ್ನು ಧ್ಯಾನಿಸೋಣಾಗಲಿ".

ಅಷ್ಟು ಹೇಳಿ ಕಾರಕೂನನು ಹೊರಟುಹೋದನು. ಕಾಳೀಚರಣನ ಸಹಾಯಕನು ಬಾಗಿಲನ್ನು ಬಂಧಿಸುವುದಕ್ಕೆ ಪ್ರಯತ್ನಮಾಡಿದನು. ಅಷ್ಟರಲ್ಲಿ ಮುಖದ ಮೇಲೆ ಸೆರಗನ್ನೆಳೆದುಕೊಂಡಿದ್ದ ವ್ಯಕ್ತಿಯೊಂದು ಅವನೊಡನೆ ಪಿಸುಮಾತಿನಲ್ಲಿ ಅದೇನನ್ನೋ ಹೇಳಿದುದು. ಅವನು ಬಿಯಗದ ಕೈಯನ್ನು ವ್ಯಕ್ತಿಯ ಕೈಯಲ್ಲಿಟ್ಟು ತಾನು ಹೋಗಿ ಕಾರಾಗೃಹದ ಮೆಟ್ಟಲುಗಳ ಮೇಲೆ ಕಾವಲು ಕುಳಿತನು. ಮೆಟ್ಟಲುಗಳ ಕೆಳಭಾಗದಲ್ಲಿ ಶ್ವಾನವೊಂದು ಅವನಿಗೆ ಸಹಾಯಕವಾಗಿ ಕಾರಾಗೃಹವನ್ನು ಕಾಯುತ್ತ ಕುಳಿತಿದ್ದಿತು

ವ್ಯಕ್ತಿಯು ಕುಮುದನ ಕಡೆಗೆ ತಿರುಗಿದುದು ಕುಮುದಚಂದ್ರನು ನೋಡಿ ಪುಷ್ಪಲತೆಯನ್ನು ಗುರುತಿಸಿದನು ಅವಳ ಮುಖವು ದುಃಖದಿಂದ ಶುಷ್ಕವಾಗಿ ಬೆಳ್ಳಗಾಗಿತ್ತು. ಅವಳ ಸುಂದರ ನಯನಗಳಿಂದ ಅನರ್ಗಳ ವಾಗಿ ಅಶ್ರುಬಿಂದುಗಳು ಹೊರಟುಬರುತ್ತಿದ್ದುವು. ಅವಳು ಕುಮುದನ ಬಳಿಗೆ ನೇರವಾಗಿ ಹೋಗಿ, "ಅಯ್ಯೋ! ನಾನೇನುಮಾಡಲಿ?" ಎಂದು ಗದ್ಗದ ಸ್ವರದಿಂದ ಹೇಳತೊಡಗಿದಳು. ಅವಳು ಮುಂದೇನನ್ನೋ ಹೇಳ ಲಾರಂಭಿಸಿದಳು. ದುಃಖದಿಂದ ಸ್ವರವೇ ಹೊರಡಲಿಲ್ಲ. ಕುಮುದನು ದುಃಖಪೂರಿತನಾಗಿ, "ಪುಷ್ಪಾ! ಏನು ಹೇಳಬೇಕೆಂದಿರುವೆ? ನನಗೆ ಪ್ರಪಂಚದಲ್ಲಿರಲು ಹೆಚ್ಚು ಅವಕಾಶವಿಲ್ಲ. ಬೇಗನೆ ಹೇಳು" ಎಂದನು.

ಪುಷ್ಪಲತೆಯು ಅತಿಕಷ್ಟದಿಂದ, "ಸ್ವಾಮಿ! ಒಂದು ಉಪಕಾರ ವನ್ನು ತಾವು ಮಾಡೋಣಾಗಲಿ" ಎಂದಳು.

ಕುಮುದಚಂದ್ರ—ಹೀಗೆ ಅಳಬೇಡ ಪುಷ್ಪಾ! ನನ್ನ ಪರಿಣಾಮ ವನ್ನು ಯೋಚಿಸಿದರೆ ಅಷ್ಟು ವ್ಯಸನವಾಗುತ್ತಿಲ್ಲ. ಆದರೆ ನಿನ್ನ ಅಶ್ರುಜಲ ವನ್ನು ನೋಡಿ ನನ್ನ ಹೃದಯವು ವಿದೀರ್ಣವಾಗುತ್ತಿದೆ. ಬಂದಿಯು ಎಷ್ಟು ನಿರಪರಾಧಿಯೋ ಅಷ್ಟು ಧೈರ್ಯದಿಂದಲೂ ಸಂತೋಷದಿಂದಲೂ ಸಾಯುವುದು ಅವನ ಕರ್ತವ್ಯ ಅಳಬೇಡ ಪುಷ್ಪಾ—ಇನ್ನು ಸ್ವಲ್ಪವೂ ಅಳಬಾರದು.

ಪುಷ್ಪಲತೆಯು ಮೊಣಕಾಲೂರಿ ಕುಳಿತು, ನನ್ನ ತಂದೆಯನ್ನು ಕ್ಷಮಿಸಿ ಎಂದು ಕೇಳಿಕೊಂಡಳು.

ಕುಮುದನು ಆಶ್ಚರ್ಯಾನ್ವಿತನಾಗಿ, ನಿನ್ನ ತಂದೆಯೆ? ಆತನು ಮಾಡಿದುದೇನು? ಎಂದನು.

ಪುಷ್ಪಲತೆ—ತಾವು ಮಹಾತ್ಮರು. ಎಲ್ಲವನ್ನೂ ಮರೆತಿರುವಿರಿ. ಅವನು ನಿಮ್ಮನ್ನು ಎಷ್ಟು ನಿಕೃಷ್ಟವಾಗಿ ನೋಡಿದನು. ಎಷ್ಟು ಕ್ರೌರ್ಯವನ್ನು ತೋರಿದನು. ಮರೆತಿರಾ? ಅದವನ ಸ್ವಭಾವ. ಅವನು ಎಲ್ಲರಲ್ಲಿಯೂ ಹಾಗೆಯೇ ವರ್ತಿಸುವನು. ಅವನು ಇದುವರೆಗೆ ಹಿಂಸಿಸಿರುವುದು ನಿಮ್ಮೊಬ್ಬರನ್ನು ಮಾತ್ರವೇ ಅಲ್ಲ

ಕುಮುದಚಂದ್ರ—ಆತನಿಗೆ ಎಲುಬು ಮುರಿದುಹೋಗಿರುವುದಲ್ಲವೆ? ದೇವದೇವನು ಆರೀತಿ ಆತನನ್ನು ಶಿಕ್ಷಿಸಿದ್ದಾನೆ ನಾನಾತನನ್ನು ಕ್ಷಮಿಸಿದ್ದೇನೆ.

ಪುಷ್ಪಲತೆ— ತಮಗೆ ಅನೇಕ ವಂದನೆಗಳು ಸ್ವಾಮಿ!—ಈಗ ಹೇಳೋಣಾಗಲಿ—ನನಗೆ ಹೇಳೋಣಾಗಲಿ—ನನ್ನಿಂದ ಯಾವುದಾದರೂ ಉಪಕಾರವಾಗಬಲ್ಲದೆ?

ಕುಮುದಚಂದ್ರ— ಪುಷ್ಪಾ! ನಿನ್ನ ಸುಂದರ ನಯನಗಳ ಕಣ್ಣೀರನ್ನು ಒರೆಸಿಕೊ. ಅದರಿಂದ ನನಗೆ ಉಪಕಾರಮಾಡಿದಂತಾಗುವುದು

"ಆದಿರಲಿ—ತಮಗೇನು ಉಪಕಾರಮಾಡಲಿ ಹೇಳೋಣಾಗಲಿ"

"ಪುಷ್ಪಾ! ಪ್ರಪಂಚದಲ್ಲಿ ಒಂದು ಗಂಟೆಯ ಹೊತ್ತು ಮಾತ್ರ ಅವಧಿಯುಳ್ಳವನಿಗೆ ಬೇಕಾದುದೇನಿರುವುದು?"

"ಯಾರನ್ನಾದರೂ ನೋಡಲೆಳಸುವಿರಾ?"

"ಯಾರನ್ನೂ ನೋಡಬೇಕಿಲ್ಲ. ಪುಷ್ಪಾ! ಸರ್ವಕಾಲದಲ್ಲಿಯೂ ನಾನು ದೇವರನ್ನು ಪೂಜಿಸಿದ್ದೇನೆ. ಅವನಿಂದ ಸೃಷ್ಟಿತವಾದ ಕೃತಿಗಳನ್ನು ಪ್ರೀತಿಸಿ ಪೂಜಿಸುವುದರಿಂದ ಆತನನ್ನು ಭಜಿಸಿದ್ದೇನೆ. ಅವನು ವಿಧಿಸಿದುದಕ್ಕೆ ತಲೆಬಾಗಿ ನಡೆಯುವುದರಿಂದ ಆತನಿಗೆ ಸಂತೋಷವನ್ನುಂಟುಮಾಡಲೆತ್ನಿಸಿದ್ದೇನೆ. ನನ್ನ ಆತ್ಮವು ಶಾಂತಸ್ಥಿತಿಯಲ್ಲಿದೆ. ದೇವದೇವನೊಡನೆ ಐಕ್ಯವಾಗಿದೆ. ನಾನಾರನ್ನೂ ನೋಡಬೇಕಾಗಿಲ್ಲ—ಆದರೆ ಕಡೆಯಬಾರಿ ದೇವದೇವನ ಮಹಿಮೆಯನ್ನು ವರ್ಣಿಸುವ ಯೋಚನೆಯೊಂದನ್ನು ಮಾಡಿದ್ದೇನೆ. ಆ ಯೋಚನೆಯನ್ನು ಸಾಧಿಸಲು ನೀನು ಸಹಾಯಮಾಡಬೇಕು.

ಅದನ್ನು ನೀನು ನಿಜವಾಗಿ ಸಾಧಿಸುವೆಯಾದರೆ ನನ್ನ ಮನಸ್ಸು ಶಾಂತಿ ಹೊಂದಿದಂತಾಗುವುದು. ಅದರಿಂದ ದೇವದೇವನೂ ತೃಪ್ತಿಗೊಳ್ಳುವನು".

ಪುಷ್ಪಲತೆಯ ಮುಖದಮೇಲೆ ಧಾರಾಕಾರವಾಗಿ ಕಣ್ಣೀರು ಸುರಿಯುತ್ತಿದ್ದಿತು. ಅವಳು ಅಳುತಳುತ, "ಕುಮುದಚಂದ್ರಬಾಬುಗಳೆ! ಹೇಳಿ. ನಾನೇನುಮಾಡಬಲ್ಲೆನು? ಎಂದಳು

ಕುಮುದಚಂದ್ರ—ನನಗೆ ಭಾಷೆಕೊಟ್ಟು ಹೇಳು. ನೀನು ನಗುವುದಿಲ್ಲವಷ್ಟೆ?

ಪುಷ್ಪಲತೆಯು ಅತೀವ ದುಃಖಿತಳಾಗಿ, "ನಗುವೆನೆ?—ಈ ಸಮಯದಲ್ಲಿ ನಗುವೆನೆ?—ಹಾಗಾದರೆ ನನ್ನ ಅಶ್ರುಜಲವು ಕಾಣುವುದಿಲ್ಲವೆ? ಎಂದು ಕಾತರಭಾವದಿಂದ ಕೇಳಿದಳು.

ಕುಮುದನು ಹೇಳತೊಡಗಿದನು—"ಪುಷ್ಪಾ! ನೀನು ನನಗೆ ಅಪರಿಚಿತೆಯಲ್ಲ ನಿನ್ನನ್ನು ನಾನು ಬಹಳವಾಗಿ ನೋಡಿಲ್ಲವಾದರೂ ನಾನು ಕೆಲವು ನಿಮಿಷಗಳಲ್ಲಿಯೇ ನಿನ್ನ ಗುಣವನ್ನು ಕಂಡುಹಿಡಿದುಬಿಟ್ಟದ್ದೇನೆ—ನಿನ್ನಂತಹ ಸುಂದರಿಯನ್ನೂ ನಿನ್ನಂತಹ ಶುದ್ಧಾತ್ಮಳನ್ನೂ ನಾನಿದುವರೆಗೆ ನೋಡಿರಲಿಲ್ಲ ಪುಷ್ಪಾ! ಈಕ್ಷಣವೊದಲ್ಗೊಂಡು ನಿನ್ನ ವಿಚಾರವನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳಲಾರೆ ಕ್ಷಮಿಸು. ಹಚ್ಚಿಕೊಂಡರೆ ಈ ಪ್ರಪಂಚವನ್ನು ಬಿಟ್ಟುಹೋಗುವುದು ಕಷ್ಟವಾದೀತು!"

ಆ ಸಮಯದಲ್ಲಿ ಕಾರಾಗೃಹದ ಗಡಿಯಾರವು ಹನ್ನೊಂದು ಗಂಟೆಗಳನ್ನು ಹೊಡೆಯಿತು. ಕೇಳಿ ಪುಷ್ಪಲತೆಯು ನಡುಗಿದಳು ಕುಮುದಚಂದ್ರನಿಗೆ ಎಲ್ಲವೂ ಅರ್ಥವಾಗಿ, "ನಿಜ, ನಿಜ. ಪುಷ್ಪಾ! ಬೇಗನೆ ಎಲ್ಲವನ್ನೂ ಹೇಳುತ್ತೇನೆ. ಕಾಲವಿಳಂಬಕ್ಕೆ ಅವಕಾಶವಿಲ್ಲ" ಎಂದನು.

ಕುಮುದಚಂದ್ರನು ಈ ವೇಳೆಗೆ ತನ್ನ ಮೂರು ಸಸಿಗಳನ್ನೂ ಶಿಲೆಯ ಹಿಂಭಾಗದಿಂದ ತೆಗೆದು ತನ್ನ ವಕ್ಷಸ್ಥಳದಲ್ಲಿಯೇ ಪುನಃ ಇಟ್ಟುಕೊಂಡಿದ್ದನು. ಪುನಃ ಯಾರೂ ತನ್ನನ್ನು ಶೋಧಿಸುವುದಿಲ್ಲವೆಂದವನು ಧೈರ್ಯಮಾಡಿಕೊಂಡು ಅವುಗಳನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದನು. ಈಗವನು ಅವುಗಳನ್ನಿಟ್ಟಿದ್ದ ಕಾಗದವನ್ನು ವಕ್ಷಸ್ಥಳದಿಂದ ತೆಗೆದು ಹೇಳತೊಡಗಿದನು—"ಪುಷ್ಪಾ! ನನಗೆ ಪುಷ್ಪಗಳೆಂದರೆ ಬಹಳ ಪ್ರೀತಿ. ಪ್ರೀತಿ

ಪ್ರದರ್ಶನದಿಂದ ಪರಮಾತ್ಮನು ಸಂತುಷ್ಟನಾಗುವನು. ಪ್ರಕೃತಿಯನ್ನು ಹುಟ್ಟಿಸಿದಾ ಪರಮಾತ್ಮನು ಪ್ರಕೃತಿಯನ್ನು ಪ್ರೀತಿಸುವವರಮೇಲೆ ಪ್ರೇಮವನ್ನಿಡುವನು ನಾನು ಭಗವಂತನ ಪೂಜೆಮಾಡುವುದಾದರೂ ಹೀಗೆಯೇ. ಅವನ ಕೃತಿಗಳನ್ನು ಪ್ರೀತಿಸಿ ಪೂಜಿಸುವುದರಿಂದ ಅವನನ್ನು ಭಜಿಸುವೆನು —ಪರಮಾತ್ಮನು ಸೃಷ್ಟಿಸಿದ ಪುಷ್ಪಗಳನ್ನು ಪ್ರೀತಿಸುತ್ತಿದ್ದೆನೆಂದು ನಾನು ಹೇಳಿದೆನಲ್ಲವೆ?—ಆದರೆ ಪರಮಾತ್ಮನು ಸೃಷ್ಟಿಸಿದ ನಿನ್ನನ್ನು ನಾನು ಮೊದಲು ನೋಡಿರಲಿಲ್ಲ ಪುಷ್ಪಾ! ಆದುದರಿಂದ ಪುಷ್ಪಗಳಲ್ಲದೆ ಪ್ರೀತ್ಯಾರ್ಹವಾದ ವಸ್ತುಗಳು ಬೇರೆ ಇಲ್ಲವೆಂದು ಭಾವಿಸಿದ್ದೆನು—ಲಜ್ಜಿತಳಾಗಬೇಡ ಪುಷ್ಪಾ! ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಳ್ಳಬೇಡ—ನಿನ್ನನ್ನು ಪ್ರೀತಿಸುತ್ತಿರುವೆನೆಂದು ಹೇಳಿದರೂ ಈಗ ಹೆಚ್ಚು ಸಂತೋಷವಾಗಲಾರದು —ಇನ್ನು ಒಂದುಗಂಟೆಯೊಳಗಾಗಿ ನನ್ನ ಇಹಲೋಕದ ವ್ಯಾಪಾರವು ಮುಗಿದುಹೋಗುವುದು—ಅದಿರಲಿ. ಪುಷ್ಪಾ! ನಾನು ಹೂವುಗಳನ್ನು ಬಹಳವಾಗಿ ಪ್ರೀತಿಸುತ್ತಿದ್ದೆನು ನಾನು ಕರಿಯ ಟ್ಯೂಲಿಪನ್ನು ಕಂಡು ಹಿಡಿದಿದ್ದೇನೆ—ಅಂದರೆ ಕಂಡುಹಿಡಿಯಬಲ್ಲೆನೆಂದು ಭರವಸೆಯುಳ್ಳವನಾಗಿದ್ದೇನೆ. ಅದನ್ನು ಯಾರೂ ಕಂಡುಹಿಡಿಯಲಾರರೆಂದು ಎಲ್ಲರೂ ತಿಳಿದಿರುವರು. ಆದುದರಿಂದ ಅದನ್ನು ಕಂಡುಹಿಡಿದವರಿಗೆ ಒಂದು ಲಕ್ಷ ರೂಪಾಯಿಗಳ ಬಹುಮಾನವನ್ನು ಕೊಡುವುದಾಗಿ ಕಲ್ಯಾಣನಗರಿಯ ಟ್ಯೂಲಿಪ್ ಸಂಘದವರು ಪ್ರಕಟಣೆ ಹೊರಡಿಸಿದ್ದಾರೆ—ಈ ಕಾಗದದಲ್ಲಿ ಆ ಲಕ್ಷ ರೂಪಾಯಿಗಳಿವೆ. ಅದನ್ನು ನಿನಗೆ ನಾನು ಬಹುಮಾನವಾಗಿಕೊಡುತ್ತೇನೆ."

ಪುಷ್ಪಲತೆ—ಇದೇನು ಹೀಗೆ ಹೇಳುವಿರಿ!

ಕುಮುದನು ಪುನಃ ಹೇಳತೊಡಗಿದನು—"ನಿಜ, ನಿಜ. ನಿನಗೇ ಕೊಡುತ್ತೇನೆ. ಅದರಿಂದ ನೀನಾರಿಗೂ ತೊಂದರೆಕೊಟ್ಟಂತಾಗುವುದಿಲ್ಲ, ಪುಷ್ಪಾ! ನಾನು ಪ್ರಪಂಚದಲ್ಲಿ ಏಕಾಂಗಿಯಾಗಿದ್ದೇನೆ ನನ್ನ ತಂದೆ ತಾಯಿಗಳು ತೀರಿಹೋದರು—ನನಗೆ ಅಣ್ಣತಮ್ಮಂದಿರಾಗಲಿ ಅಕ್ಕತಂಗಿಯರಾಗಲಿ ಹುಟ್ಟಲೇ ಇಲ್ಲ—ನಾನು ಯಾರನ್ನೂ ಪ್ರೇಮದಿಂದ ನೋಡಿಲ್ಲ— ನನ್ನನ್ನಾದೀ ಆಗಲಿ ಪ್ರೀತಿಸಿರುವರೋ ಇಲ್ಲವೋ ಅರಿಯೆ. ನೀನು ನೋಡುತ್ತಿರುವಂತೆ ನನ್ನನ್ನೆಲ್ಲರೂ ತ್ಯಜಿಸಿರುವರು. ಈ ದುಃಖಸಮಯ

ದಲ್ಲಿ ನೀನೊಬ್ಬಳು ಮಾತ್ರ ನನ್ನನ್ನು ಸಮಾಧಾನಪಡಿಸುತ್ತ ನನಗೆ ಸಹಾಯಮಾಡಲೆತ್ನಿಸುತ್ತಿರುವೆ".

"ಅದರೆ ಯೋಚಿಸಿನೋಡಿ. ಒಂದು ಲಕ್ಷ ರೂಪಾಯಿಗಳನ್ನು ಹೀಗೆ ಕೊಟ್ಟುಬಿಡಲಾಗುವುದೆ?"

"ಆಗದೇನು? ಈಗ ಸ್ವಲ್ಪ ವಿವರವಾಗಿ ಎಲ್ಲವನ್ನೂ ಹೇಳುವೆನು ಕೇಳು. ನಿನ್ನ ಸುಂದರವದನದ ಜತೆಗೆ ನಿನಗೆ ಲಕ್ಷ ರೂಪಾಯಿಗಳ ಆಸ್ತಿಯಿದ್ದರೆ ನಿನ್ನ ವಿವಾಹವು ಸುಲಭವಾಗಿ ನೆರವೇರುವುದು. ನಿನಗೆ ಖಂಡಿತವಾಗಿಯೂ ಅಷ್ಟು ಹಣವು ದೊರಕುವುದು. ನನ್ನ ಸಸಿಗಳು ಖಂಡಿತವಾಗಿ ಕರಿಯ ಟ್ಯೂಲಿಪ್‌ಗಳನ್ನು ಬಿಡುವುವು. ನಿನಗೆ ಹಣವು ಸಿಕ್ಕುವುದರಲ್ಲಿ ಸಂಶಯವಿಲ್ಲ ಈ ಹಣವನ್ನು ನಾನು ಕೊಡುವುದರಿಂದ ನಾನು ಹೇಳಿದ ಕಾರ್ಯವೊಂದನ್ನು ನಡೆಸುವಂತೆ ನೀನು ಭಾಷೆಕೊಡಬೇಕು. ಏನೆಂದರೆ—ನೀನು ಸುಂದರಯುವಕನೊಬ್ಬನನ್ನು ಮದುವೆಮಾಡಿಕೊಳ್ಳಬೇಕು. ಅವನನ್ನು ನೀನು ಪ್ರೀತಿಸುತ್ತಿರಬೇಕು. ನಾನು ಪುಷ್ಪಗಳನ್ನು ಎಷ್ಟರಮಟ್ಟಿಗೆ ಪ್ರೀತಿಸುವೆನೋ ಅಷ್ಟರಮಟ್ಟಿಗೆ ಅವನು ನಿನ್ನನ್ನು ಪ್ರೀತಿಸುತ್ತಿರಬೇಕು. ಅಂತಹವನನ್ನು ನೀನು ಮದುವೆಯಾಗಿ ಹಣದೊಡನೆ ಸುಖದಿಂದಿರಬೇಕು—ಹೀಗೆ ಮಾಡುವುದಾಗಿ ನೀನು ಪ್ರಮಾಣಮಾಡಿ ಹೇಳಬೇಕು—ಮಧ್ಯೆ ಮಾತನಾಡಬೇಡ ಪುಷ್ಪಾ! ನನಗೆ ಕೆಲವು ನಿಮಿಷಗಳು ಮಾತ್ರ ಉಳಿದಿವೆ. ಅಷ್ಟರಲ್ಲಿ ಎಲ್ಲವನ್ನೂ ಹೇಳಿಬಿಡುವೆನು". ಪುಷ್ಪಲತೆಗೆ ದುಃಖಾತಿಶಯದಿಂದ ಉಸಿರೇ ಕಟ್ಟಿಹೋದಂತಾಗಿತ್ತು. ಕುಮುದಚಂದ್ರನು ಅವಳ ಕೈಯನ್ನು ಹಿಡಿದುಕೊಂಡು ಪುನಃ ಹೇಳತೊಡಗಿದನು—"ಕೇಳು. ನೀನು ಹಣವನ್ನು ಹೊಂದುವ ವಿಧಾನವನ್ನು ವಿವರಿಸುತ್ತೇನೆ. ನೀನು ರತ್ನಗಿರಿಗೆ ಹೋಗು. ನನ್ನ ತೋಟಗಾರನನ್ನು ನೋಡು. ಉದ್ಯಾನವನದಲ್ಲಿ ಆರನೆಯ ನಂಬರನ್ನು ಹಾಕಿರುವ ಭಾಗವೊಂದಿದೆ. ಆ ಭಾಗದಲ್ಲಿರುವ ಮಣ್ಣನ್ನು ಆಳವಾಗಿರುವ ಪೆಟ್ಟಿಗೆಯೊಂದರಲ್ಲಿ ಶೇಖರಿಸಿಡು. ಅದರಲ್ಲಿ ಈ ಮೂರು ಸಸಿಗಳನ್ನೂ ನೆಡಬೇಕು. ಇನ್ನು ಏಳುತಿಂಗಳಲ್ಲಿ ಈ ಸಸಿಗಳು ಹೂವುಗಳನ್ನು ಬಿಡುವುವು. ಹೂವುಗಳು ಗಿಡಗಳಲ್ಲಿ ಕಾಣಿಸಿಕೊಳ್ಳಲಾರಂಭಿಸುತ್ತಲೇ ನೀನು ಬಹಳ ಜಾಗ

ರೂಕಳಾಗಿರಬೇಗು. ರಾತ್ರಿಯಲ್ಲಿ ಅವುಗಳನ್ನು ಗಾಳಿಯಿಂದ ಕಾಪಾಡ ಬೇಕು. ಪ್ರಾತಃಕಾಲದಲ್ಲಿ ಅವುಗಳ ಮೇಲೆ ಹೆಚ್ಚು ಬಿಸಿಲು ಬೀಳದಂತೆ ತಡಿಕೆಗಳನ್ನು ಕಟ್ಟಿ ಅವುಗಳನ್ನು ಕಾಪಾಡಬೇಕು. ಅವು ಕಪ್ಪುಹೂ ಗಳನ್ನು ಬಿಡುವುವು. ನನಗೆ ಆ ವಿಷಯದಲ್ಲಾವಸಂದೇಹವೂ ಇಲ್ಲ. ಆಗ ನೀನು ಟ್ಯೂಲಿಪ್ ಸಂಘದ ಅಧ್ಯಕ್ಷನಿಗೆ ಅವುಗಳನ್ನು ತೋರಿಸು. ಅವನು ಸಂಘದ ಮುಖ್ಯಸದಸ್ಯರಿಗೆ ಅವುಗಳನ್ನು ತೋರಿಸಿ ಅವುಗಳ ಬಣ್ಣಗಳನ್ನು ಪರೀಕ್ಷಿಸುವನು. ಬಳಿಕ ನಿನಗೆ ಲಕ್ಷ ರೂಪಾಯಿಗಳನ್ನು ಕೊಡುವನು".

ಪುಷ್ಪಲತೆಯು ದೀರ್ಘವಾಗಿ ನಿಟ್ಟುಸಿರಿಟ್ಟಳು. ಕುಮುದಚಂದ್ರನು ತನ್ನ ಪ್ರಾಣವು ಹೋಗುವುದೆಂದು ಕಣ್ಣೀರು ಸುರಿಸದಿದ್ದರೂ ವಿಕಸಿತ ವಾಗುವ ಕರಿಯ ಪುಷ್ಪವನ್ನು ನೋಡಲು ಸಾಧ್ಯವಾಗದೆ ಹೋಗುವುದೆಂದು ಅಶ್ರುವರ್ಷಣ ಮಾಡತೊಡಗಿದನು. ಅವನು ಕಣ್ಣೀರನ್ನೊರಸಿಕೊಳ್ಳುತ್ತ ಪುನಃ ಹೇಳತೊಡಗಿದನು—"ಪುಷ್ಪಾ! ಈಗ ನನಗಾವಯೋಚನೆಯೂ ಇಲ್ಲ. ನಾನು ನಿಶ್ಚಿಂತನಾಗಿರಬಲ್ಲೆನು. ಕರಿಯಹೂವನ್ನು ನೀನು "ಪುಷ್ಪಲತಾ" ಎಂದು ಕರೆಯಬೇಕು ತಿಳಿಯಿತೆ? ನೀನಾ ಹೆಸರನ್ನು ಮರೆಯಲಾರೆ. ಆದರೂ—ಒಂದು ಸೀಸದ ಕಡ್ಡಿಯನ್ನು ತೆಗೆದುಕೊ ಆ ಹೆಸರಿನಿಂದಲೇ ಆ ಕುಸುಮವನ್ನು ಕರೆಯಬೇಕೆಂದು ಬರೆದಿಡುತ್ತೇನೆ".

ಪುಷ್ಪಲತೆಯು ಮತ್ತೆ ಕಣ್ಣೀರು ಸುರಿಸುತ್ತ ಪುಸ್ತಕವೊಂದನ್ನು ಕೊಟ್ಟಳು. ಅದರಲ್ಲಿ ರಮಾನಾಥನ ಸಹಿಯಿದ್ದಿತು. ಕುಮುದನು ಅಚ್ಚರಿ ಗೊಂಡು, "ಇದೇನು? ಇದಾರ ಪುಸ್ತಕ?" ಎಂದನು.

ಪುಷ್ಪಲತೆ—ಅಯ್ಯೋ! ಇದು ನಿಮ್ಮ ಗುರುಗಳಾದ ರಮಾನಾಥ ಬಾಬುಗಳ ಗೀತಾ ಪುಸ್ತಕ. ಅದರಿಂದ ಆತನು ಬಂದ ಕಷ್ಟಗಳೆಲ್ಲವನ್ನೂ ಸಹಿಸುವಧೈರ್ಯ ಹೊಂದಿದ್ದನು. ಅವರು ಮೃತಿಹೊಂದಿದ ಬಳಿಕ ಅವರ ಜ್ಞಾಪಕಾರ್ಥವಾಗಿ ಈ ಗೀತಾಪುಸ್ತಕವನ್ನಿಟ್ಟುಕೊಂಡಿದ್ದೇನೆ. ಈ ದಿನ ಈ ಪುಸ್ತಕವನ್ನು ತಂದೆನು. ಅದರಿಂದ ತಮಗೆ ಒಳ್ಳೆಯದಾಗುವುದೆಂದು ನನ್ನ ನಂಬಿಕೆ. ತಾವು ಬರೆಯಬೇಕೆಂದಿರುವುದನ್ನು ಅದರಲ್ಲಿಯೇ ಬರೆ

ಯಿರಿ. ನನಗೆ ಓದಲು ಬಾರದು. ಆದರೂ ಅದರಲ್ಲಿ ತಾವು ಬರೆದುದೆಲ್ಲವೂ ಅಕ್ಷರಶಃ ನಡೆಯುವಂತೆ ನೋಡಿಕೊಳ್ಳುತ್ತೇನೆ.

ಕುಮುದಚಂದ್ರನು ಆ ಗೀತಾ ಪುಸ್ತಕವನ್ನು ಭಕ್ತಿಪೂರ್ವಕವಾಗಿ ಚುಂಬಿಸಿದನು, ಬಳಿಕ ಯಾವುದರಿಂದ ಬರೆಯಲೆಂದನು. ಪುಷ್ಪಲತೆಯು, ಅದರಲ್ಲಿ ಸೀಸದಕಡ್ಡಿಯೊಂದಿದೆ, ಎಂದಳು. ಆ ಸೀಸದಕಡ್ಡಿಯನ್ನು ಉಮಾನಾಥಬಾಬುವು ರಮಾನಾಥನಿಗೆ ಕೊಟ್ಟಿದ್ದನು. ಅದನ್ನವನು ಕಾರಾಗಾರದಲ್ಲಿಯೇ ಬಿಟ್ಟಿದ್ದನು. ಕುಮುದಚಂದ್ರನು ಅದನ್ನು ತೆಗೆದುಕೊಂಡನು. ಗೀತಾಪುಸ್ತಕದ ಮೊದಲನೆಯ ಪುಟವನ್ನು ರಮಾನಾಥನು ಉಪಯೋಗಿಸಿದ್ದನು. ಆದುದರಿಂದ ಈಗ ಕುಮುದಚಂದ್ರನು ಕಡೆಯ ಪುಟದ ಮೇಲೆ ಅವಿಚಲಿತಮನಸ್ಕನಾಗಿ ಬರೆಯತೊಡಗಿದನು—

"ಈ ದಿನ—ಅಂದರೆ 1672ನೇ ಇಸವಿ ಆಗಸ್ಟ್ 23ನೇ ತಾರೀಖಿನ ದಿನ—ನಾನು ನಿರಪರಾಧಿಯಾಗಿದ್ದರೂ ಗಲ್ಲಿಗೇರಿಸಲ್ಪಡುತ್ತಿದ್ದೇನೆ. ನನ್ನ ಆಸ್ತಿಯೆಲ್ಲವನ್ನೂ ಸರ್ಕಾರವು ವಶಪಡಿಸಿಕೊಂಡಿರುವುದರಿಂದ ಈಗೆನಗೆ ಉಳಿದಿರುವ ಏಕಮಾತ್ರ ಆಸ್ತಿಯಾದ ಮೂರು ಸಸಿಗಳನ್ನು ಪುಷ್ಪಲತೆಗೆ ಮನಃಪೂರ್ವಕವಾಗಿ ಕೊಡುತ್ತೇನೆ ಇವು ಮೇ ತಿಂಗಳವೇಳೆಗೆ ಕರಿಯ ಟ್ಯೂಲಿಪ್‌ಗಳನ್ನು ಬಿಡುವುವು. ಆ ಪುಷ್ಪಗಳನ್ನು ಬೆಳೆದವರಿಗೆ ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ಕಲ್ಯಾಣನಗರಿಯ ಟ್ಯೂಲಿಪ್‌ಸಂಘದವರು ಪ್ರಕಟಿಸಿರುವರು. ನನಗೆ ಕೊಡುವುದಕ್ಕೆ ಬದಲಾಗಿ ಅವರು ಪುಷ್ಪಲತೆಗೆ ಆ ಹಣವನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ನನ್ನೆಲ್ಲ ಆಸ್ತಿಗೂ ಅವಳೇ ಹಕ್ಕುದಾರಳಾಗಬೇಕಾದರೆ ಅವಳು ಗೌರವಸ್ಥನಾದ ಯುವಕನೊಬ್ಬನನ್ನು ಮದುವೆಯಾಗಬೇಕು. ಆ ಯುವಕನು ನನ್ನ ವಯಸ್ಸಿನವನಾಗಿರಬೇಕು ಅವಳನ್ನು ಪ್ರೀತಿಸುವವನಾಗಿರಬೇಕು. ಅವಳು ಆ ಪುಷ್ಪವನ್ನು 'ಪುಷ್ಪಲತಾ' ಎಂದೇ ಕರೆಯಬೇಕು.

"ದೇವದೇವನು ನನಗೆ ಕ್ಷಮೆಯನ್ನು ಕೊಡಲಿ. ಪುಷ್ಪಲತೆಗೆ ಆರೋಗ್ಯವನ್ನೂ ಆಯುಷ್ಯವನ್ನೂ ಕೊಡಲಿ!

ಇತಿ

ಕುಮುದಚಂದ್ರ."

ಬಳಿಕ ಬಂದಿಯು ಗೀತಾಪುಸ್ತಕವನ್ನು ಪುಷ್ಪಲತೆಯಕೈಗೆ ಕೊಟ್ಟು ಓದೆಂದನು. ಅವಳು ಕಾತರಭಾವದಿಂದ, "ಅಯ್ಯೋ! ನನಗೆ ಓದಲು ಬಾರದೆಂದು ಆಗಲೇ ಹೇಳಲಿಲ್ಲವೆ" ಎಂದಳು.

ಕುಮುದಚಂದ್ರನು ತನ್ನ ಉಯಿಲನ್ನು ಓದಿಹೇಳಿದನು. ಹುಡುಗಿಯ ದುಃಖವು ಮತ್ತಷ್ಟು ಹೆಚ್ಚಾಯಿತು. ಬಂದಿಯು ಅವಳ ಕೈಗಳನ್ನು ಹಿಡಿದು ಸ್ವಲ್ಪ ನಗುತ್ತೆ, "ನನ್ನ ನಿಯಮುಗಳಿಗೊಪ್ಪಿರುವೆಯಾ?" ಎಂದು ಕೇಳಿದನು.

ಅವಳು ತೊದಲುತ್ತೆ ಏನನ್ನೂ ಹೇಳಲಾರೆನೆಂದಳು.

ಕುಮುದ--ಹೇಳಲಾರೆಯಾ? ಅದೇಕೆ?

ಪುಷ್ಪ—ಅವರಲ್ಲಿ ಒಂದು ವಿಷಯವನ್ನು ಮಾತ್ರ ಒಪ್ಪಿಕೊಳ್ಳಲಾರೆ.

"ಅದಾವುದು? ಎಲ್ಲವೂ ಇತ್ಯರ್ಥವಾಯಿತೆಂದು ಭಾವಿಸಿದ್ದೆನಲ್ಲಾ!"

"ನಾನು ಮದುವೆಯಾಗುವುದಾದರೆ ನೀವು ಲಕ್ಷ ರೂಪಾಯಿಗಳನ್ನು ಕೊಡುವಿರಲ್ಲವೆ?"

"ಅಹುದು"

"ನಾನು ಪ್ರೀತಿಸುವವನನ್ನು ನಾನು ವಿವಾಹಮಾಡಿಕೊಳ್ಳಬೇಕಲ್ಲವೆ?"

"ನಿಜ"

"ಹಾಗಾದರೆ ಈ ಹಣವು ನನ್ನನ್ನು ಸೇರುವುದಿಲ್ಲ. ನಾನಾರನ್ನೂ ಪ್ರೀತಿಸುವುದೂ ಇಲ್ಲ. ಮದುವೆ ಮಾಡಿಕೊಳ್ಳುವುದೂ ಇಲ್ಲ".

ಅಷ್ಟು ಹೇಳಿ ಅವಳು ದುಃಖಾತಿರೇಕದಿಂದ ಮೂರ್ಛಿತಳಾಗುವುದರಲ್ಲಿದ್ದಳು. ಅವಳ ಶುಷ್ಕವದನವನ್ನೂ, ಅವಳು ಮೂರ್ಛಿತಳಾಗುವ ಸಂಭವವನ್ನೂ ನೋಡಿ ಕುಮುದಚಂದ್ರನು ಗಾಬರಿಗೊಂಡು ಅವಳು ಬೀಳದಂತೆ ತನ್ನ ಕೈಗಳನ್ನು ಅಡ್ಡಲಾಗಿ ಹಿಡಿದನು. ಆ ಸಮಯದಲ್ಲಿ ಹೊರಗಡೆ ಅದಾರೋ ಬರುವ ಶಬ್ದವೂ, ನಾಯಿಯು ಗಟ್ಟಿಯಾಗಿ ಬೊಗಳುವ ನಿನಾದವೂ ಕೇಳಿಬಂದುವು.

ಪುಷ್ಪಲತೆಯು ಕೈ ಹಿಸುಕಿಕೊಳ್ಳುತ್ತ, "ಅಯ್ಯೋ! ದೇವರೆ! ತಮ್ಮನ್ನು ಕರೆದುಕೊಂಡುಹೋಗಲು ಬರುತ್ತಿರುವರು. ನನಗೆ ಹೇಳು ವುದು ಮತ್ತೇನೂ ಉಳಿದಿಲ್ಲವೆ?" ಎಂದು ನುಡಿದಳು.

ಅವಳು ತನ್ನ ಮುಖವನ್ನು ಕೈಗಳಲ್ಲಿ ಮುಚ್ಚಿಕೊಂಡು ಮೊಣ ಕಾಲೂರಿ ಕುಳಿತಳು. ಅವಳಿಗೆ ಜ್ಞಾನವೇ ಇಲ್ಲದಂತಾಗಿದ್ದಿತು. ಕುಮುದ ಚಂದ್ರನು ಹೇಳತೊಡಗಿದನು—"ಆ ಸಸಿಗಳನ್ನು ಅತ್ಯಮೂಲ್ಯವಸ್ತು ಗಳಂತೆ ಕಾಪಾಡಿಕೊಂಡು ಬಾ ನಾನು ಹೇಳಿರುವಂತೆ ಅವುಗಳನ್ನು ಬೆಳಸು. ನನಗಾಗಿ ಅಷ್ಟು ಮಾಡು, ಪುಷ್ಪಾ! ಹೋಗಿಬರುತ್ತೇನೆ".

ಪುಷ್ಪಲತೆಯು ತಲೆಯನ್ನೆತ್ತದೆ, "ಹಾಗೆಯೇ ಮಾಡುತ್ತೇನೆ ನೀವು ಹೇಳಿರುವುದೆಲ್ಲವನ್ನೂ ಮಾಡುತ್ತೇನೆ. ವಿವಾಹವೊಂದನ್ನು ಮಾತ್ರ ಮಾಡಿಕೊಳ್ಳಲಾರೆ—ಏಕೆಂದರೆ ಇನ್ನು ನನಗೆ ವಿವಾಹವಾಗುವ ಸಂಭವಿ ವಿಲ್ಲ" ಎಂದಳು

ಒಡನೆಯೇ ಅಮೂಲ್ಯ ಧನರಾಶಿಯಾಗಿದ್ದಾ ಸಸಿಗಳನ್ನು ಅವಳು ತನ್ನ ವಕ್ಷಸ್ಥಳದಲ್ಲಿಟ್ಟುಕೊಂಡಳು ಮರುಕ್ಷಣವೇ ಕಾರಕೂನನು ಬಂದಿಯ ಬಳಿಗೆ ಬಂದನು. ಅವನ ಹಿಂದೆಯೇ ಗಲ್ಲಿಗೇರಿಸುವವನು ಬಂದನು. ಅವನ ಹಿಂದೆ ಕೆಲವರು ಸೈನಿಕರು ಬಂದರು. ಅವನು ಕುಮುದಚಂದ್ರನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗಲು ಬಂದಿದ್ದರು.

ಕುಮುದನು ಅಧೈರ್ಯಪ್ರಕಟಣೆ ಮಾಡಲಿಲ್ಲ. ಡಂಭದ ಶೌರ್ಯಾ ಟೋಪವನ್ನೂ ತೋರಲಿಲ್ಲ. ಬಂದವರನ್ನು ಆತ್ಮೀಯರಂತೆಯೂ ಮಿತ್ರರಂತೆಯೂ ತಿಳಿದನು ಅವರು ತನ್ನ ಹಿಂಸಕರೆಂದು ಭಾವಿಸಲಿಲ್ಲ ಅವನು ತನ್ನ ಕಾರಾಗೃಹದ ಕಿಟಕಿಯಿಂದ ಇಪ್ಪತ್ತು ಹೆಜ್ಜೆಗಳಷ್ಟು ದೂರ ದಲ್ಲಿದ್ದ ವಧ್ಯಸ್ಥಾನವನ್ನು ನೋಡಿದನು ಅಲ್ಲಿ ರಮಾನಾಥ ಉಮಾನಾಥರ ಕಳೇಬರಗಳೀಗ ಇರಲಿಲ್ಲ. ಅವನ್ನು ವಧ್ಯಸ್ಥಾನದಿಂದಾರೋ ತೆಗೆದು ಬಿಟ್ಟಿದ್ದರು. ಬಂದಿದ್ದವರು ಕುಮುದನನ್ನು ಕರೆದುಕೊಂಡು ನಡೆದರು. ಅವನು ಮೆಟ್ಟಿಲುಗಳನ್ನಿಳಿಯುವಾಗ ಪುಷ್ಪಲತೆಯನ್ನು ಕಡೆಯಬಾರಿ ನೋಡಲೋಸುಗ ಹಿಂತಿರುಗಿನೋಡಿದನು. ಸೈನಿಕರ ಕತ್ತಿಗಳ ಹಿಂಭಾಗದಲ್ಲಿ

ಬೆಂಚಿನಮೇಲೆ ಬಿದ್ದಿದ್ದ ವ್ಯಕ್ತಿಯೊಂದುಮಾತ್ರ ಅವನಿಗೆ ಕಾಣಿಸಿದುದು. ಆ ವ್ಯಕ್ತಿಯೇ ಪುಷ್ಪಲತೆ ಅವಳ ಮುಖವು ವಿವರ್ಣವಾಗಿ ಅವಳ ಕೇಶದಾಮವು ಶುಷ್ಕವದನದಮೇಲೆ ಹರಿದಾಡುತ್ತಿತ್ತು. ಆ ಅಜ್ಞಾನಾವಸ್ಥೆಯಲ್ಲಿಯೂ ಅವಳ ಕೈ ಮಾತ್ರ ಅವಳ ವಕ್ಷಸ್ಥಳದಲ್ಲಿದ್ದ ಅಮೂಲ್ಯ ಸಸಿಗಳನ್ನು ಅಪ್ಪಿಕೊಂಡಿದ್ದಿತು. ರಮಾನಾಥಬಾಬುವು ಕಷ್ಟಪಟ್ಟು ಬರೆದಿದ್ದ ಕಾಗದದಲ್ಲಿ ಸಸಿಗಳಿದ್ದುವು. ಪುಷ್ಪಲತೆಯು ಅವುಗಳನ್ನಪ್ಪಿಕೊಂಡು ಬಿದ್ದಿದ್ದಳು. ಕುಮುದಚಂದ್ರನು ಆ ಕಾಗದವನ್ನು ಓದಿಕೊಂಡಿದ್ದರೆ ಖಂಡಿತವಾಗಿ ಅವನ ಪ್ರಾಣವು ಉಳಿಯುತ್ತಿತ್ತು! ಹಾಗೆಯೇ ಪುಷ್ಪವೊಂದು ಚೆನ್ನಾಗಿ ಬೆಳೆಯುತ್ತಿತ್ತು!

## ದ್ವಾದಶ ಪರಿಚ್ಛೇದ

### ವಧೆ

ಕುಮುದಚಂದ್ರನು ವಧ್ಯಸ್ಥಾನಕ್ಕೆ ಹೋಗಲು ಕಾರಾಗೃಹದ ಮೆಟ್ಟಲುಗಳನ್ನಿಳಿದು ಹೋಗತೊಡಗಿದನು. ಮೆಟ್ಟಲುಗಳಬಳಿ ನಾಯಿಯು ಅವನನ್ನೇ ನೋಡುತ್ತಿದ್ದಿತು. ಅದರ ಮುಖದಲ್ಲಿ ಕೂಡ ಸ್ವಲ್ಪ ದಯೆಯು ಕಾಣಬರುವಂತಿದ್ದಿತು. ಅದಕ್ಕೆ ಗಲ್ಲಿಗೇರಿಸಲ್ಪಡುವ ಬಂದಿಗಳು ಪರಿಚಿತರಾಗಿದ್ದಂತೆ ತೋರಿಬರುತ್ತಿದ್ದಿತು. ಬಂಧನಮುಕ್ತರಾಗಿ ಮನೆಗೆ ಹೋಗುವವರನ್ನು ಮಾತ್ರ ಅದು ಕಡಿಯುವಂತೆ ತೋರುತ್ತಿದ್ದಿತು.

ದಾರಿಯುದ್ದಕ್ಕೂ ಜನಸಂದಣಿಯು ವಿಶೇಷವಾಗಿ ಸೇರಿದ್ದಿತು. ಜನರು ಮೂರು ದಿನಗಳ ಹಿಂದೆ ಹರಿಸಿದ ಶೋಣಿತದ ಕಾಲುವೆಯಿಂದ ತೃಪ್ತರಾಗದೆ ಪುನಃ ರಕ್ತದ ಕಾಲುವೆಯನ್ನು ಹರಿಸಲು ಸಿದ್ಧರಾಗಿದ್ದರು. ಆದುದರಿಂದ ಕುಮುದಚಂದ್ರನು ಜನರಿಗೆ ಕಂಡುಬರುತ್ತಲೇ ಅವರೆಲ್ಲರೂ ಗೊಣಗಲಾರಂಭಿಸಿದರು. ಅವರು ಮಾಡುತ್ತಿದ್ದ ಶಬ್ದವು ವಧ್ಯಸ್ಥಾನದವರೆಗೂ ಹರಡಿದ್ದಿತು ಕೆಲವರು ಕೂಗುತ್ತಿದ್ದರು. ಕೆಲವರು ಹೆದರಿಸುತ್ತಿದ್ದರು. ಕೆಲವರು ಗೊಣಗುತ್ತಿದ್ದರು. ಕುಮುದಚಂದ್ರನು ಆ ಶಬ್ದ

ಗಳನ್ನು ಕೇಳುತ್ತಲೇ ಇರಲಿಲ್ಲ. ಏಕೆಂದರೆ ಅವನು ತನ್ನ ಯೋಚನೆಗಳಲ್ಲಿಯೇ ಮಗ್ನನಾಗಿದ್ದನು.

ದುಃಖಮಯವಾದಾ ಪ್ರಯಾಣಸಮಯದಲ್ಲಿ ಕುಮುದನು ಯೋಚಿಸುತ್ತಿದ್ದುದೇನು? ಅವನು ತನ್ನ ಶತ್ರುಗಳ ವಿಷಯವನ್ನಾಗಲಿ ತನ್ನ ನ್ಯಾಯಾಧಿಪತಿಗಳ ವಿಷಯವನ್ನಾಗಲಿ ತನ್ನನ್ನು ಗಲ್ಲಿಗೇರಿಸುವವರ ವಿಷಯವನ್ನಾಗಲಿ ಯೋಚಿಸುತ್ತಿರಲಿಲ್ಲ. ಸ್ವರ್ಗಲೋಕದಿಂದ ತನ್ನ ಕುಸುಮಗಳನ್ನು ನೋಡಬಹುದು—ಈ ಪ್ರಪಂಚದಲ್ಲಿ ಆಶ್ಚರ್ಯಕರ ಕೃತ್ಯಗಳನೇಕವಾಗಿ ನಡೆಯುವುವು—ರಮಾನಾಥ ಉಮಾನಾಥರು ರಾಜಕೀಯದ ವಿಷಯವನ್ನು ಹೆಚ್ಚಾಗಿ ಯೋಚಿಸಿ ಸತ್ತರು-ತಾನು ಕುಸುಮಗಳ ವಿಷಯವನ್ನು ಹೆಚ್ಚಾಗಿ ಯೋಚಿಸಿದುದರಿಂದ ಸಾಯಬೇಕಾಗಿದೆ—ಇವೇ ಮುಂತಾದ ಯೋಚನೆಗಳು ಕುಮುದನ ಮನಸ್ಸಿನಲ್ಲಿದ್ದುವು

ಒಂದೇನಿಮಿಷದಲ್ಲಿ ಪ್ರಾಣವು ಹಾರಿಹೋಗುವುದು—ಹಾಗಿಲ್ಲವಾದರೆ ಒಂದೆರಡುನಿಮಿಷಗಳು ಕಷ್ಟಪಟ್ಟರಾಯಿತು—ಬಳಿಕೆಲ್ಲವೂ ಶಾಂತವಾಗುವುದು—ಹೀಗೆಯೇ ಯೋಚಿಸುತ್ತ ಕುಮುದಚಂದ್ರನು ಜನಗಳ ಕೂಗುಗಳ ಮಧ್ಯೆ ದೃಢಮನಸ್ಸಿನಿಂದ ವಧ್ಯಸ್ಥಾನವನ್ನು ಹತ್ತಿದನು. ಅವನು ರಮಾನಾಥ ಉಮಾನಾಥರ ಸ್ನೇಹವನ್ನು ಹೊಂದಿದ್ದುದಕ್ಕಾಗಿ ಪಶ್ಚಾತ್ತಾಪಪಡುತ್ತಿದ್ದಂತೇನೂ ಕಂಡುಬರುತ್ತಿರಲಿಲ್ಲ ಆ ಮಿತ್ರತ್ವದಿಂದ ಮತ್ತಷ್ಟು ಗರ್ವಿತನಾಗಿದ್ದಂತೆ ತೋರಿಬರುತ್ತಿದ್ದನು.

ಕುಮುದಚಂದ್ರನು ತನ್ನ ಅಂತ್ಯಪ್ರಾರ್ಥನೆಯನ್ನುಮಾಡಿ ವಧ್ಯಸ್ಥಾನದ ಮೇಲಿದ್ದ ಮರದ ತುಂಡಿನಮೇಲೆ ಶಿರಸ್ಸನ್ನಿಟ್ಟನು. ಸ್ವಲ್ಪಹೊತ್ತು ಹಾಗೆಯೇ ಕಾರಾಗೃಹದ ಕಿಟಕಿಯ ಕಡೆಗೆ ಕಣ್ಣುತಿರುಗಿಸಿ ನೋಡುತ್ತಿದ್ದನು. ವಧೆಯ ಸಮಯವು ಸನ್ನಿಹಿತವಾಗುತ್ತಲೇ ಕ್ರೂರಕೂರಸಿಯ ಪೆಟ್ಟನ್ನು ಸುಲಭವಾಗಿ ಸಹಿಸುವ ಸಲುವಾಗಿ ಕಣ್ಣುಮುಚ್ಚಿಕೊಂಡನು.

ವಧೆಮಾಡುವವನ ಕೂರಸಿಯು ಪಳಪಳನೆ ಹೊಳೆಯಿತು. ಅವನು ಅದನ್ನು ಮೇಲಕ್ಕೆತ್ತಿದನು. ಕುಮುದಚಂದ್ರನು ತಾನು ನೋಡಲಾಗದ ಟ್ಯೂಲಿಪದ ವಿಷಯವನ್ನು ಯೋಚಿಸುತ್ತಿದ್ದನು. ಕೂರಸಿಯನ್ನು ಝಳಪಿ

ಸಿದುದರಿಂದ ಬಂದ ಗಾಳಿಯು ಕುಮುದನ ಕುತ್ತಿಗೆಯಬಳಿ ಮೂರುಬಾರಿ ಸುಳಿಯಿತು. ಆದರೆ ಇದೇನು! ಅವನಿಗೆ ನೋವುಂಟಾಗಲೇ ಇಲ್ಲ! ಅವನು ಕಣ್ಣುಬಿಟ್ಟು ನೋಡಿದನು ಆಕಾಶದ ಬಣ್ಣವು ಮೊದಲಿನಂತೆಯೇ ಇದೆ.! ಪ್ರಪಂಚವು ಮೊದಲಿದ್ದಂತೆಯೇ ಇದೆ!

ಆ ಸಮಯುವಲ್ಲಾರೋ ಅವನನ್ನು ಹಿಡಿದೆಬ್ಬಿಸಿದಂತಾಯಿತು. ಅವನು ಸ್ವಲ್ಪ ನಡುಗುತ್ತ ಎದ್ದುನಿಂತನು ಬಳಿಕ ಸುತ್ತಲೂ ನೋಡಿದನು. ಅವನ ಸಮೀಪದಲ್ಲಿ ಅದಾರೋ ಒಂದು ಪತ್ರವನ್ನು ಓದುತ್ತಿದ್ದರು ಅದಕ್ಕೆ ಕೆಂಪು ಅರಗಿನ ಮೊಹರೊಂದಿದ್ದಿತು.

ಮೊದಲಿನಂತೆಯೇ ಸೂರ್ಯನು ಆಕಾಶದಲ್ಲಿ ಪ್ರಕಾಶಿಸುತ್ತಿದ್ದನು. ಮೊದಲಿನಂತೆಯೇ ಕಾರಾಗೃಹದ ಕಿಟಿಕಿಯು ಈಗಲೂ ಕಾಣಬರುತ್ತಿದ್ದಿತು. ಆದರೆ ಜನರು ಮಾತ್ರ ಈಗ ಕೂಗುತ್ತಿರಲಿಲ್ಲ. ಬಹಳ ಆಶ್ಚರ್ಯಾನ್ವಿತರಂತೆ ತನ್ನ ಕಡೆಗೇ ಜನರು ನೋಡುತ್ತಿದ್ದುದನ್ನು ಕುಮುದನು ಕಂಡನು. ಅವನಿಗೆ ಎಲ್ಲವೂ ಅರ್ಥವಾಗತೊಡಗಿತು ಸಮೀಪದಲ್ಲಿಯೇ ನಿಂತವನು ಓದುತ್ತಿದ್ದುದನ್ನು ಕೇಳಿ ಅರ್ಥಮಾಡಿಕೊಳ್ಳತೊಡಗಿದನು.

ರಾಜಕುಮಾರ ವಿನಯಸಿಂಹನು ಯೋಚಿಸಿ ಕುಮುದನನ್ನು ಕೊಂದುಬಿಟ್ಟರೆ ತನ್ನಮೇಲೆ ಅಧಿಕ ಆರೋಪಣೆಗಳು ಉದಯವಾಗಬಹುದೆಂದು ನಿರ್ಧರಿಸಿಕೊಂಡನು ಅದರ ಫಲವಾಗಿ ಕುಮುದನ ಒಳ್ಳೆಯಗುಣಗಳನ್ನೂ ಅವನು ನಿರಪರಾಧಿಯಂತೆ ಕಂಡುಬರುತ್ತಿದ್ದುದನ್ನೂ ಗಮನಿಸಿ ವಿನಯಸಿಂಹನು ಅವನನ್ನು ಕ್ಷಮಿಸಿದ್ದನು. ಈ ವಿಷಯವೇ ಪತ್ರದಲ್ಲಿದ್ದುದು.

ಕುಮುದಚಂದ್ರನು ಪತ್ರದ ವಿಷಯವನ್ನು ಕೇಳುತ್ತ ಕೇಳುತ್ತ ತನಗೆ ಪೂರ್ಣ ಸ್ವಾತಂತ್ರ್ಯವು ದೊರಕಬಹುದೆಂದು ಆಸೆಪಡುತ್ತಿದ್ದನು ಆದರೆ ಅವನ ಯೋಚನೆಯು ತಪ್ಪಾಯಿತು. ಪತ್ರದ ಕಡೆಯಲ್ಲಿ ಮುಖ್ಯ ವಿಷಯವೊಂದು ಬರೆಯಲ್ಪಟ್ಟದ್ದಿತು. ಕುಮುದನಿಗೆ ಮರಣದಂಡನೆಯು ತಪ್ಪಬೇಕೆಂದೂ ಆದರೆ ಆಜೀವಪರ್ಯಂತ ಕಾರಾಗೃಹವಾಸವು ವಿಧಿಸಲ್ಪಡಬೇಕೆಂದೂ ಪತ್ರದ ಕಡೆಯಭಾಗವಲ್ಲಿದ್ದಿತು.

ಕುಮುದನು ಅದನ್ನು ಕೇಳಿದನು. ಮೊದಲವನಿಗೆ ದುಃಖವೂ ನಿರಾಶಾಭಾವನೆಯೂ ಮೂಡಿದುವು. ಕಡೆಗವನು, "ಇರಲಿ. ಎಲ್ಲವೂ ಮುಳುಗಿಹೋಗಿರುವುದೇನು? ಆಜೀವಪರ್ಯಂತದ ಕಾರಾಗೃಹದಲ್ಲಿ ಶುಭ ಸೂಚನೆಗಳಿರುವುವು. ಕಾರಾಗೃಹದಲ್ಲಿ ಪುಷ್ಪಲತೆಯಿರುವಳು. ನನ್ನ ಮೂರು ಸಸಿಗಳೂ ಇರುವುವು" ಎಂದು ಮುಂತಾಗಿ ಯೋಚಿಸಿಕೊಂಡು ಸಮಾಧಾನಪಡತೊಡಗಿದನು.

ಆದರೆ ಅವನನ್ನು ಮಣಿಪುರದ ಕಾರಾಗೃಹಕ್ಕೆ ಕಳುಹಬೇಕೆಂದು ಆಜ್ಞೆಯಾಗಿದ್ದಿತು. ಅದನ್ನು ಕೇಳಿ ಅವನಿಗೆ ಎದೆಯೊಡೆದಂತಾಯಿತು. ಸ್ವಲ್ಪ ಹೊತ್ತಿನಮೇಲೆ, "ಇರಲಿ. ನಾನು ಹೇಗಿದ್ದರೂ ಎಲ್ಲಿದ್ದರೂ ಬದುಕಿರುವೆನಷ್ಟೆ" ಎಂದು ಹೇಳಿಕೊಂಡನು. ಅವನಿಗೆ ತಟ್ಟನೆ ದೊಡ್ಡ ಯೋಚನೆಯುಂಟಾಯಿತು. ಅವನು ರಾಜ್ಯವನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅವನು ನಿಟ್ಟುಸಿರು ಬಿಡುತ್ತೆ, "ಅಯ್ಯೋ! ಮಣಿಪುರವು ಜೌಗುಪ್ರದೇಶ ಸರ್ವದಾ ಗಾಳಿಯ ತುಂಬ ಆವಿಯು ತುಂಬಿರುವುದು. ಟ್ಯೂಲಿಪ್ ಪುಷ್ಪಗಳ ಬೆಳವಣಿಗೆಗೆ ಆ ಭೂಮಿಯು ಒಳ್ಳೆಯದಲ್ಲ!—ಅಲ್ಲದೆ ಪುಷ್ಪಲತೆಯು ಅಲ್ಲಿರುವುದಿಲ್ಲ!" ಎಂದು ಹೇಳಿಕೊಂಡನು.

# ತ್ರಯೋದಶ ಪರಿಚ್ಛೇದ

## ಜನಸಂದಣಿಯಲ್ಲಿದ್ದವನೊಬ್ಬನ ಚಿಂತೆ

ಕುಮುದಚಂದ್ರನು ತನ್ನ ಯೋಚನೆಯಲ್ಲಿ ನಿರತನಾಗಿದ್ದಾಗ ಗಾಡಿಯೊಂದು ವಧ್ಯಸ್ಥಾನಕ್ಕೆ ಬಂದುದು. ಅದು ಬಂದಿಗೋಸ್ಕರವಾಗಿ ಬಂದಿದ್ದಿತು. ಅದರಲ್ಲಿ ಕುಳಿತುಕೊಳ್ಳಬೇಕೆಂದವನಿಗೆ ಆಜ್ಞೆಯಾಯಿತು. ಅವನು ಒಪ್ಪಿಕೊಂಡನು.

ಅವನು ಕಡೆಯಬಾರಿ ಕಾರಾಗೃಹದ ಕಿಟಕಿಯ ಕಡೆಗೆ ತಿರುಗಿನೋಡಿ ಅಲ್ಲಿ ಪುಷ್ಪಲತೆಯ ಮುಖವು ಕಾಣಬಹುದೆಂದು ಉತ್ಸುಕತೆಯಿಂದ ನಿರೀಕ್ಷಿಸುತ್ತಿದ್ದನು. ಆದರೆ ಗಾಡಿಗೆ ಬಲವಾದ ಕುದುರೆಗಳನ್ನು ಕಟ್ಟಿದ್ದುದರಿಂದ

ಅದು ಸರಸರನೆ ಹೊರಟುಹೋಯಿತು. ಸುತ್ತಲೂ ಇದ್ದ ಜನರು ವಿನಯ ಸಿಂಹನ ದಯೆಯನ್ನು ಹೊಗಳುತ್ತಲೂ ರಮಾನಾಥ ಉಮಾನಾಥ ಕುಮುದ ಚಂದ್ರರನ್ನು ಬೈಯುತ್ತಲೂ ಗಲಭೆ ಮಾಡುತ್ತಿದ್ದರು. ಕೆಲವರು, "ನೋಡಿದೆಯಾ! ಇವನು ಉಳಿದುಕೊಂಡನಲ್ಲಾ! ರಮಾನಾಥ ಉಮಾನಾಥರನ್ನು ಬೇಗ ಮುಗಿಸಿದುದೇ ಒಳ್ಳೆಯದಾಯಿತು. ಇಲ್ಲದಿದ್ದರೆ ಗವರ್ನರನು ಅವರನ್ನೂ ಉಳಿಸಿಬಿಡುತ್ತಿದ್ದನು" ಎನ್ನುತ್ತಿದ್ದರು.

ಜನರಮಧ್ಯೆ ಒಳ್ಳೆಯ ಉಡುಪನ್ನುಟ್ಟಿದ್ದ ಪುರುಷನೊಬ್ಬನಿದ್ದನು. ಅವನಿಗೆ ಎಲ್ಲರಿಗಿಂತಲೂ ಹೆಚ್ಚಾಗಿ ನಿರಾಶೆಯಾಗಿದ್ದಿತು ಅವನು ಪ್ರಾತಃ ಕಾಲದಿಂದಲೂ ತನ್ನ ಕಾಲುಗಳನ್ನೂ ಮೊಣಕೈಗಳನ್ನೂ ಬಹಳವಾಗಿ ಉಪಯೋಗಿಸಿ ವಧ್ಯಸ್ಥಾನದಬಳಿ ಇದ್ದ ಸೈನಿಕರ ಪಕ್ಕದಲ್ಲಿಯೇ ನಿಲ್ಲುವುದರಲ್ಲಿ ಜಯಶಾಲಿಯಾಗಿದ್ದನು. ಅಪರಾಧಿಯಾದ ಕುಮುದಚಂದ್ರನ ಕೆಟ್ಟ ರಕ್ತವನ್ನು ಕಾಣಲು ಅನೇಕರು ಕುತೂಹಲಿಗಳಾಗಿದ್ದರು. ಆದರೆ ಪೂರ್ವೋಕ್ತಪುರುಷನಷ್ಟು ಯಾರೂ ಉತ್ಸಾಹಿಗಳಾಗಿರಲಿಲ್ಲ.

ಬಹಳವಾಗಿ ಕೋಪಗೊಂಡಿದ್ದವರು ಕೆಲವರು ಪ್ರಾತಃಕಾಲಕ್ಕೆ ಮೊದಲೇ ಬಂದು ವಧ್ಯಸ್ಥಾನದಬಳಿ ಒಳ್ಳೆಯಸ್ಥಳವನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸಿದ್ದರು. ಆದರೆ ಈ ಪುರುಷನು ಮಾತ್ರ ಅವರನ್ನು ಸೋಲಿಸುವ ಉದ್ದೇಶದಿಂದ ಕಾರಾಗೃಹದ ಬಾಗಿಲಲ್ಲಿಯೇ ರಾತ್ರಿಯನ್ನು ಕಳೆದು ಮುಂಜಾನೆಯಲ್ಲಿಯೇ ಹೊರಟು, ಕೆಲವರನ್ನು ತಳ್ಳಿ ಕೆಲವರನ್ನು ಒದ್ದು ಎಲ್ಲರಿಗಿಂತಲೂ ಮುಂದೆಬಂದು ನಿಂತಿದ್ದನು.

ವಧೆಮಾಡುವವನು ಬಂದಿಯನ್ನು ವಧ್ಯಸ್ಥಾನಕ್ಕೆ ಕರೆತರುತ್ತಲೇ ಈ ಪುರುಷನು ಒಂದು ಕಲ್ಲಿನಮೇಲೆ ನಿಂತುಕೊಂಡನು. ಅಲ್ಲಿಂದ ತಾನು ಇತರರನ್ನು ನೋಡುವುದಕ್ಕೂ ಇತರರು ತನ್ನನ್ನು ನೋಡುವುದಕ್ಕೂ ಅನುಕೂಲವಾಗುವುದೆಂದು ಅವನು ಭಾವಿಸಿಕೊಂಡನು. ಅವನು ವಧೆ ಮಾಡುವವನ ಕಡೆಗೆ ತಿರುಗಿ ಸನ್ನೆಗಳಿಂದಲೇ, "ಎಲ್ಲವೂ ಸರಿಯಾಗಿದೆಯಷ್ಟೆ" ಎಂದು ಸೂಚಿಸಿದನು. ವಧೆಮಾಡುವವನೂ ಸನ್ನೆಯಿಂದಲೇ, "ಸುಮ್ಮನಿರು. ಎಲ್ಲವೂ ಸರಿಯಾಗಿದೆ" ಎಂದುತ್ತರವಿತ್ತನು.

ಈ ಮಹಾಪುರುಷನು ಮತ್ತಾರೂ ಅಲ್ಲ—ನಮ್ಮ ಪೂರ್ವಪರಿಚಿತನಾದ ವಿಷಕಂಠ. ಕುಮುದನ ದಸ್ತಗಿರಿಯಾದಬಳಿಕ ಅವನು ಸಸಿಗಳನ್ನು ಹೊಂದುವುದಕ್ಕಾಗಿ ಸುರನಗರಿಗೆ ಬಂದಿದ್ದನು.

ಮೊದಲು ಅವನು ಕಾಳೀಚರಣನನ್ನು ನೋಡಿ ಅವನನ್ನು ತನ್ನ ಬಲೆಗೆ ಬೀಳಿಸಲೆತ್ನಿಸಿದನು. ಅವನು ಬಲೆಗೆ ಬೀಳಲಿಲ್ಲ ಅವನು ನಾಯಿಯಂತೆ ಬೊಗುಳಿ ಗುರುಗುಟ್ಟುವವನಾದರೂ ಆ ಪ್ರಾಣಿಯ ಭಕ್ತಿಯನ್ನೂ ಹೊಂದಿದವನಾಗಿದ್ದನು. ಆದುದರಿಂದ ಕಾಳೀಚರಣನು ವಿಷಕಂಠನ ದ್ವೇಷಾದಿಗಳನ್ನು ತಿಳಿಯುತ್ತಲೇ ಕುಮುದನ ಸ್ನೇಹಿತನಾವನೋ ಬೇಕೆಂದು ವೇಷಾಂತರದಿಂದ ಬಂದಿರಬೇಕೆಂದೂ ಅವನು ಮಿತ್ರನ ಪರಾರಿಯ ವಿಷಯವಾಗಿ ಪ್ರಯತ್ನಪಡಲು ಬಂದಿದ್ದನೆಂದೂ ಊಹಿಸಿಕೊಂಡು ಕೋಪಗೊಂಡನು ವಿಷಕಂಠನು ಕಾಳೀಚರಣನನ್ನು ಬೇಡಿಕೊಳ್ಳುತ್ತ, “ಅಣ್ಣಾ! ನಾನು ಹೇಳುವ ಕೆಲವು ಸಸಿಗಳನ್ನಾದರೂ ಕದ್ದು ತಂದುಕೊಡು. ಆವು ಕುಮುದಚಂದ್ರನ ಬಳಿಯೇ ಅವನ ವಕ್ಷಸ್ಥಲದಲ್ಲಿರಬೇಕು. ಇಲ್ಲವಾದರೆ ಅವನ ಕಾರಾಗೃಹದಲ್ಲಿಯೇ ಮೂಲೆಯೊಂದರಲ್ಲಿರಬೇಕು” ಎಂದನು. ಕಾಳೀಚರಣನಿಗೆ ಸಂದೇಹವೂ ಕೋಪವೂ ಇಮ್ಮಡಿಯಾದುವು. ಅವನು ವಿಷಕಂಠನನ್ನು ಒದ್ದು ತನ್ನ ನಾಯಿಯನ್ನು ಕರೆದು ಅದನ್ನು ವಿಷಕಂಠನಮೇಲೆ ಬಿಟ್ಟನು.

ನಾಯಿಯು ವಿಷಕಂಠನ ವಸ್ತ್ರದಲ್ಲಿ ಅರ್ಧಭಾಗವನ್ನು ಕಚ್ಚಿಕೊಂಡು ಹೋಯಿತಾದರೂ ಅವನೇನೂ ಧೈರ್ಯಗೆಡಲಿಲ್ಲ ಪುನಃ ಪ್ರಯತ್ನಪಡಲು ಕಾರಾಗೃಹದ ಬಳಿಗೆ ಬಂದನು. ಆದರೆ ಈ ವೇಳೆಗೆ ಕಾಳೀಚರಣನು ಆಕಸ್ಮಿಕವೊಂದರಿಂದ ಕೈ ಮುರಿದುಕೊಂಡು ಜ್ವರಪೀಡಿತನಾಗಿ ಹಾಸಿಗೆ ಹಿಡಿದಿದ್ದನು. ಆದುದರಿಂದ ವಿಷಕಂಠನ ಅಹವಾಲು ಜೈಲರನಿಗೆ ಮುಟ್ಟಲಿಲ್ಲ ಹೀಗಾಗಿ ಅವನು ಜೈಲರನ ಮಗಳಾದ ಪುಷ್ಪಲತೆಯನ್ನು ನೋಡಿದನು, ಸಸಿಗಳನ್ನು ತಂದುಕೊಟ್ಟರೆ ಅವಳಿಗೆ ಒಳ್ಳೆಯ ಸರಿಗೆಯ ಬಟ್ಟೆಗಳನ್ನು ತಂದುಕೊಡುವುದಾಗಿ ಆಶೆ ತೋರಿಸಿದನು ಅವಳಿಗೆ ಆಗಿನ್ನೂ ಸಸಿಗಳ ಬೆಲೆಯು ತಿಳಿದಿರಲಿಲ್ಲ. ಅವಳು ವಿಷಕಂಠನನ್ನು

ವಧೆಮಾಡುವವನ ಬಳಿಗೆ ಕಳುಹಿಸಿದಳು. ಬಂದಿಯ ಸರ್ವವಸ್ತುಗಳಿಗೂ ವಧೆಮಾಡುವವನೇ ಉತ್ತರಾಧಿಕಾರಿಯೆಂದು ಹೇಳಿಕಳುಹಿಸಿದಳು.

ಈ ವೇಳೆಗೆ ಕುಮುದಚಂದ್ರನ ಮೇಲೆ ನ್ಯಾಯಾಧೀಶರು ತೀರ್ಪ ನ್ನಿತ್ತಿದ್ದರು ಆದುದರಿಂದ ವಿಷಕಂಠನು ಯಾರಿಗೂ ಲಂಚವನ್ನೀಯಲು ಸಮಯವಿರಲಿಲ್ಲ. ಹೀಗಾಗಿ ಅವನು ಪುಷ್ಪಲತೆಯ ಬುದ್ಧಿವಾದವನ್ನೇ ಅನುಸರಿಸುವ ಇಚ್ಛೆಯುಳ್ಳವನಾದನು ಅವನು ಒಡನೆಯೇ ವಧೆಮಾಡು ವವನ ಬಳಿಗೆ ಹೋದನು

ಕುಮುದಚಂದ್ರನು ತನ್ನ ಸಸಿಗಳನ್ನು ಎದೆಯಮೇಲಿಟ್ಟುಕೊಂಡು ಪ್ರಾಣಬಿಡುವನೆನ್ನುವುದರಲ್ಲಿ ವಿಷಕಂಠನಿಗಾವ ಸಂದೇಹವೂ ಇರಲಿಲ್ಲ. ಆದರೆ ಅವನು ಎರಡು ಮುಖ್ಯ ವಿಷಯಗಳನ್ನು ಗಮನಿಸಿರಲಿಲ್ಲ. ಪುಷ್ಪಲತೆ —ಅಂದರೆ ಪ್ರೇಮ,—ವಿನಯಸಿಂಹ—ಅಂದರೆ ದಯೆ—ಇವೆರಡು ಅಂಶ ಗಳನ್ನು ಅವನು ಗಮನಿಸಲಿಲ್ಲವಾಗಿ ಮೋಸಹೋದನು. ವಿನಯಸಿಂಹ ನಿಲ್ಲದೆಹೋಗಿದ್ದರೆ ಕುಮುದಚಂದ್ರನು ಸಾಯುವುದೇ ನಿಜವಾಗಿತ್ತು. ಪ್ರೇಮಲತೆಯಿಲ್ಲದೆಹೋಗಿದ್ದರೆ ಕುಮುದನು ತನ್ನೆದೆಯಮೇಲೆ ಸಸಿಗಳ ನ್ನಿಟ್ಟುಕೊಂಡು ಸಾಯುತ್ತಿದ್ದನು.

ವಿಷಕಂಠನು ಮೇಲೆ ಉಕ್ತವಾದ ಅಂಶಗಳನ್ನು ಗಮನಿಸದೆ ನೇರ ವಾಗಿ ವಧೆಮಾಡುವವನ ಬಳಿಗೆ ಹೋಗಿ, ತಾನು ಬಂದಿಯ ಮುಖ್ಯಮಿತ್ರ ನೆಂಬುದಾಗಿಯೂ, ಮೃತನ ಬಟ್ಟೆಗಳೆಲ್ಲವನ್ನೂ ತಾನು ಕೊಂಡುಕೊಳ್ಳುವು ದಾಗಿಯೂ, ಅದಕ್ಕಾಗಿ ನೂರು ರೂಪಾಯಿಗಳನ್ನು ಕೊಡುವುದಾಗಿಯೂ ಹೇಳಿದನು. ನೂರು ರೂಪಾಯಿಗಳನ್ನು ಖರ್ಚುಮಾಡಿದರೇನೆಂದು ವಿಷ ಕಂಠನು ಯೋಚಿಸಿದನು. ನೂರು ರೂಪಾಯಿಗಳಿಂದ ಲಕ್ಷರೂಪಾಯಿಗಳು ಬರುವುವಲ್ಲವೆ? ನೂರಕ್ಕೆ ಸಾವಿರ ರೂಪಾಯಿಗಳ ಬಡ್ಡಿಯನ್ನು ತೆಗೆದು ಕೊಂಡಂತಾಯಿತಲ್ಲವೆ?

ವಧೆಮಾಡುವವನಿಗಾವ ಕಷ್ಟಕೆಲಸವೂ ಇರಲಿಲ್ಲ. ವಧೆಯು ಮುಗಿಯುತ್ತಲೇ ವಿಷಕಂಠನನ್ನು ವಧ್ಯಸ್ಥಾನಕ್ಕೆ ಕಳುಹಿಸಿ ಮೃತನ ದೇಹವನ್ನು ತೆಗೆದುಕೊಂಡುಹೋಗಲು ಅಪ್ಪಣೆಯನ್ನಿತ್ತರೆ ಅವನ ಕೆಲಸವು ಮುಗಿದುಹೋಗುವುದಾಗಿದ್ದಿತು. ಇಷ್ಟು ಸುಲಭಕಾರ್ಯದಿಂದ ನೂರು

ರೂಪಾಯಿಗಳ ಸಂಪಾದನೆಯಾಗುವುದಾದರೆ ಅವನು ಬೇಡವೆನ್ನುವನೆ? ವಧೆಮಾಡುವವನು ಸುಲಭವಾಗಿ ಒಪ್ಪಿಕೊಂಡನು. ಆದರೆ ಹಣವನ್ನು ಮುಂಗಡವಾಗಿಯೇ ಕೊಟ್ಟುಬಿಡಬೇಕೆಂದು ಒಂದು ನಿಯಮವನ್ನು ಹೇಳಿದನು. ಆಟವೊಂದನ್ನು ನೋಡಲು ಹೋಗುವಾಗ ಮುಂಗಡವಾಗಿ ಹಣವನ್ನು ಕೊಡದಿದ್ದರೆ ಹಿಂತಿರುಗುವಾಗ ಅಸಮಾಧಾನವಾಗಿಬಿಟ್ಟಿದ್ದರೆ ಹಣವನ್ನಾರಾದರೂ ಕೊಡುವರೆ? ಅದಕ್ಕಾಗಿಯೇ ವಧೆಮಾಡುವವನು ಮುಂಗಡವಾಗಿ ಹಣವನ್ನು ಕೇಳಿದುದು.

ವಿಷಕಂಠನು ಮುಂಗಡವಾಗಿ ಹಣವನ್ನು ಸಲ್ಲಿಸಿ ಕಾದುಕೊಂಡಿದ್ದನು.

ಮುಂಗಡ ಹಣವನ್ನು ಕೊಟ್ಟಮೇಲೆ ವಿಷಕಂಠನ ಮನಸ್ಸು ಯಾವ ಸ್ಥಿತಿಯಲ್ಲಿತ್ತೆಂಬುದನ್ನು ವಾಚಕರು ಸುಲಭವಾಗಿ ಊಹಿಸಬಹುದು. ಅವನು ಕಾವಲುಗಾರರಾಗಿದ್ದ ಸೈನಿಕರನ್ನು ಆಸಕ್ತಿಯಿಂದ ನೋಡತೊಡಗಿದನು. ಕಾರಕೂನನನ್ನೂ ವಧೆಮಾಡುವವನನ್ನೂ ಹಾಗೆಯೇ ನೋಡತೊಡಗಿದನು. ಕುಮುದಚಂದ್ರನ ನಡಿಗೆಯನ್ನೇ ವೀಕ್ಷಿಸತೊಡಗಿದನು. ಕುಮುದನು ವಧ್ಯಸ್ಥಾನದಲ್ಲಿ ಹೇಗೆ ನಿಲ್ಲುವನು?—ಅಲ್ಲಿಂದ ಹೇಗೆ ಬೀಳುವನು?—ಬೀಳುವಾಗ ಅಮೂಲ್ಯಪಸಿಗಳು ಜಜ್ಜಿಹೋಗುವುವೆ?—ಅವುಗಳನ್ನು ಬಂಗಾರದ ಪೆಟ್ಟಿಗೆಯೊಂದರಲ್ಲಾದರೂ ಇಟ್ಟು ಎದೆಯಬಳಿ ಇಟ್ಟುಕೊಂಡಿರುವನೆ? ಹಾಗಿದ್ದರೆ ಅವು ಜಜ್ಜಿಹೋಗುವುದಿಲ್ಲವಲ್ಲವೆ?—ಇವೇ ಮುಂತಾದ ಯೋಚನೆಗಳು ವಿಷಕಂಠನ ಮನಸ್ಸಿನಲ್ಲಿ ಹಾದುಹೋದುವು

ನಿಧಾನವಾದಷ್ಟಕ್ಕೂ ವಿಷಕಂಠನ ಕೋಪವು ಹೆಚ್ಚುತ್ತಿದ್ದಿತು. ವಧೆಮಾಡುವಾ ಮೂರ್ಖನು ಕತ್ತಿಯನ್ನು ಎಷ್ಟುಹೊತ್ತು ಝಳಪಿಸುವುದು! ಕುಮುದನ ಕತ್ತನ್ನು ಕತ್ತರಿಸಿಬಿಡಬಾರದೆ!

ವಿಷಕಂಠನು ನೋಡುತ್ತಿದ್ದಂತೆಯೇ ಕಾರಕೂನನು ಕುಮುದಚಂದ್ರನ ಕೈಯನ್ನು ಹಿಡಿದುಕೊಂಡು ಅವನನ್ನೆಬ್ಬಿಸಿದನು. ಬಳಿಕ ತನ್ನ ಕಿಸೆಯಿಂದ ಒಂದು ಪತ್ರವನ್ನು ತೆಗೆದು ಗಟ್ಟಿಯಾಗಿ ಓದಿದನು. ಅದರಲ್ಲಿ ಕುಮುದಚಂದ್ರನನ್ನು ಕ್ಷಮಿಸಿರುವುದಾಗಿ ಬರೆಯಲ್ಪಟ್ಟಿದ್ದಿತು ವಿನಯಸಿಂಹನು ಕುಮುದನನ್ನು ಕ್ಷಮಿಸಿಬಿಟ್ಟಿರುವನೆಂದು ವಿಷಕಂಠನಿಗೆ ತಿಳಿಯುತ್ತಲೇ ಅವನು ಮಾನವಗುಣವನ್ನು ತ್ಯಜಿಸಿ ಮೃಗದಂತಾದನು.

ಶಾರ್ದೂಲದ ಕೋಪದ್ವೇಷಗಳೂ, ಹಂದಿಯ ರೋಷಾವೇಶಗಳೂ, ಸರ್ಪದ ಕ್ರೋಧಕ್ರೌರ್ಯಗಳೂ ಆವನನ್ನಾವರಿಸಿ ಅವನು ವಿಕಾರವಾಗಿ ಕೂಗುತ್ತೆ ಕೈಗಳನ್ನಾಡಿಸತೊಡಗಿದನು. ಬಂದಿಯು ಆ ಸಮಯದಲ್ಲೇನಾದರೂ ವಿಷಕಂಠನ ಕೈಗೆ ಸಿಕ್ಕಿಬಿಟ್ಟದ್ದರೆ ಅವನು ಬಂದಿಯಮೇಲೆ ಹಾರಿಬಿದ್ದು ಅವನನ್ನು ತೀರಿಸಿಬಿಡುತ್ತಿದ್ದನು

ಹಾಗಾದರೆ ಕುಮುದಚಂದ್ರನು ಉಳಿದುಕೊಳ್ಳುವನೆ? ಮತ್ತೂ ಮಣಿಪುರಕ್ಕೆ ಹೋಗುವನೆ? ಅಲ್ಲಿಗೆ ಸಸಿಗಳನ್ನೊಯ್ಯುವನೆ? ಅಲ್ಲಿ ಉದ್ಯಾನ ವೊಂದವನಿಗೆ ಸಿಕ್ಕಿ ಅದರಲ್ಲವನು ಕರಿಯ ಪುಷ್ಪಗಳನ್ನು ಬೆಳೆಯುವನೋ ಏನೋ?

ಇದೆಲ್ಲವನ್ನೂ ಯೋಚಿಸುತ್ತೆ ವಿಷಕಂಠನು ತಾನು ನಿಂತಿದ್ದ ಕಲ್ಲಿನಿಂದ ಕೆಳಕ್ಕುರುಳಿದನು. ವಿನಯಸಿಂಹನ ಕಡೆಯವರು ಕೆಲವರು ಸಮೀಪ ದಲ್ಲಿಯೇ ನಿಂತಿದ್ದರು. ಕುಮುದನು ತಪ್ಪಿಸಿಕೊಂಡುದನ್ನರಿತು ಅವರು ಬಹಳ ಖಿನ್ನರಾಗಿದ್ದರು. ವಿಷಕಂಠನು ಬಿದ್ದುದನ್ನು ನೋಡಿ ಅವನು ಸಂತೋಷಪ್ರಕಟಣೆ ಮಾಡುತ್ತಿದ್ದನೆಂದು ಅವರು ನಂಬಿದರು. ಒಡನೆಯೇ ಅವರಲ್ಲಿ ಕೆಲವರು ವಿಷಕಂಠನನ್ನು ಒದ್ದರು. ಕೆಲವರು ಹೊಡೆದರು. ಕೆಲವರು ಬಡಿದರು ಕೆಲವರು ಅವನನ್ನು ಪರಚಿದರು. ಕೆಲವರು ಬೈದು ಉಗುಳಿದರು.

ವಿಷಕಂಠನು ಇದಾವುದನ್ನೂ ಲಕ್ಷಿಸಲಿಲ್ಲ. ಅವನೆದ್ದು ನಿಲ್ಲುತ್ತಲೇ ಕುಮುದನನ್ನು ಕರೆದುಕೊಂಡು ಹೋಗುತ್ತಿದ್ದ ಬಂಡಿಯನ್ನು ಹಿಂಬಾಲಿ ಸಲು ಇಚ್ಛೆಯುಳ್ಳವನಾಗಿ ಅದರ ಕಡೆಗೆ ಓಡತೊಡಗಿದನು. ಹಾಗೆ ಧಾವಿಸುವಾಗ ದಾರಿಯಲ್ಲಿದ್ದ ದೊಡ್ಡಕಲ್ಲೊಂದನ್ನು ದಾಟಲು ಹೋಗಿ ಅದನ್ನೆಡವಿ ಮುಗ್ಗರಿಸಿದನು. ಒಡನೆಯೇ ಅವನಿಗೆ ತಲೆತಿರುಗಿದಂತಾಗಿ ಅವನು ನೂರು ಗಜಗಳಷ್ಟು ದೂರದಲ್ಲಿ ಬಿದ್ದನು. ಸುರನಗರಿಯ ಜನರೆಲ್ಲರೂ ಅವನನ್ನು ತುಳಿದುಕೊಂಡು ನಡೆದ ಬಳಿಕ ಅವನು ಗಾಯ ಗೊಂಡ ದೇಹವನ್ನು ಸವರಿಕೊಳ್ಳುತ್ತೆ, ಅಂಟಿಕೊಂಡಿದ್ದ ಮಣ್ಣನ್ನು ಒದರುತ್ತೆ ಎದ್ದುನಿಂತನು.

ಮತ್ತಾರಾದರೂ ಆಗಿದ್ದರೆ ಒಂದು ದಿನಕ್ಕೆ ಇಷ್ಟು ಕಷ್ಟವು ಸಾಕೆಂದು ಕೊಳ್ಳುತ್ತಿದ್ದರು. ಬಟ್ಟೆಗಳನ್ನು ಹರಿದುಕೊಂಡು, ಮೂಳೆಗಳನ್ನು ಮುರಿದು ಕೊಂಡು ಕಷ್ಟಪಟ್ಟುದು ಸಾಕೆಂದುಕೊಳ್ಳುತ್ತಿದ್ದರು. ಆದರೆ ವಿಷಕಂಠನು ಮಾತ್ರ ತನ್ನ ದೇಹದಮೇಲೆ ಮತ್ತಷ್ಟು ಶಿಕ್ಷೆಯನ್ನು ವಿಧಿಸಬೇಕೆಂದು ನಿಶ್ಚಯಿಸಿದವನಂತೆ ತನ್ನ ಕೇಶಪಾಶವನ್ನು ಗುಚ್ಛಗುಚ್ಛವಾಗಿ ಎಳೆದು ಕಿತ್ತುಹಾಕತೊಡಗಿದನು. ಅಸೂಯೆ, ಕ್ರೋಧ, ನಿರಾಶೆಗಳಿಂದ ಅವನಿಗೆ ತಾನು ಮಾಡುತ್ತಿರುವ ಕೆಲಸವೇನೆಂಬುದು ಕೂಡ ಅಷ್ಟಾಗಿ ತಿಳಿದಿರಲಿಲ್ಲ ವೆಂದು ತೋರುವುದು. ಅವನನ್ನು ನೋಡಿ ಕೆಲವರು ಆಶ್ಚರ್ಯಪಟ್ಟರು. ಮತ್ತೆಕೆಲವರು ಅವನ ಅವಸ್ಥೆಯನ್ನೂ ವೇಷವನ್ನೂ ನೋಡಿ ಗಟ್ಟಿಯಾಗಿ ನಗಲಾರಂಭಿಸಿದರು. ಅವನು ಇದಾವುದನ್ನೂ ಲಕ್ಷಿಸದವನಂತೆ ಅಥವಾ ಅರಿಯದವನಂತೆ ನಿಂತಿದ್ದು ಸ್ವಲ್ಪಹೊತ್ತಿನ ಬಳಿಕ ಅದೆಲ್ಲಿಗೋ ಹೊರಟು ಹೋದನು.

# ಚತುರ್ದಶ ಪರಿಚ್ಛೇದ

## ರತ್ನಗಿರಿಯ ಪಾರಿವಾಳಗಳು

ಮಣಿಪುರದ ಕಾರಾಗಾರದಲ್ಲಿ ಕುಮುದಚಂದ್ರನು ಬಂದಿಯಾಗಿಡ ಲ್ಪಟ್ಟನು. ಅವನನ್ನು ಅಲ್ಲಿಗೆ ಕರೆತಂದ ಸಮಯದಲ್ಲಿ ಒಂದು ಕೊಟಡಿಯು ಬರಿದಾಗಿತ್ತು. ಆ ಕೊಟಡಿಯಲ್ಲಿ ಮೊದಲು ಒಬ್ಬ ಬಂದಿಯು ಇದ್ದವನು ತನ್ನ ಪತ್ನಿಯ ಸಹಾಯದಿಂದ ತಪ್ಪಿಸಿಕೊಂಡು ಓಡಿಹೋಗಿದ್ದನು. ಅದರಲ್ಲಿಯೇ ತನ್ನನ್ನಿಟ್ಟುದು ಶುಭಸೂಚನೆಯೆಂದು ಕುಮುದಚಂದ್ರನು ಭಾವಿಸಿಕೊಂಡನು ಅದು ಮಿಕ್ಕ ಬಂದೀಖಾನೆಗಳಿಗಿಂತ ಹೆಚ್ಚು ವ್ಯತ್ಯಾಸ ವನ್ನೇನೂ ಹೊಂದಿರಲಿಲ್ಲ. ಗೋಡೆಯಲ್ಲಿ ಕಮಾನಿನ ಗೂಡೊಂದನ್ನು ಹಿಂದಿದ್ದ ಬಂದಿಯ ಪತ್ನಿಗೋಸ್ಕರವಾಗಿ ಕಾರಾಗೃಹದವರು ನಿರ್ಮಿಸಿದ್ದರು. ಆ ವ್ಯತ್ಯಾಸವೊಂದನ್ನುಳಿದು ಆ ಬಂದೀಖಾನೆಯು ಇತರ ಬಂದೀಖಾನೆ ಗಳಂತೆಯೇ ಇದ್ದುದು. ಅದು ಸ್ವಲ್ಪ ಎತ್ತರವಾಗಿದ್ದಿತೆಂದು ಹೇಳಬಹುದು. ಅದಲ್ಲದೆ ಅದರ ಸಲಾಕಿಸಹಿತವಾದ ಕಿಟಕಿಯ ಮೂಲಕ ವೀಧಿಯಲ್ಲಿ ನಡೆಯುತ್ತಿದ್ದುದೆಲ್ಲವೂ ಚೆನ್ನಾಗಿ ಕಂಡುಬರುತ್ತಿದ್ದಿತೆಂದು ಹೇಳಬಹುದು.

ಕುಮುದಚಂದ್ರನು ತನ್ನ ಬಂದೀಖಾನೆಯ ಪರಿಸ್ಥಿತಿಯ ವಿಷಯವಾಗಿ ನಿರ್ಲಕ್ಷ್ಯಭಾವದಿಂದಿದ್ದನು. ಅವನಿಗೆ ಬೇಕಾಗಿದ್ದುದು ಅವನಿಗಾವಾಗಲೇ ಆಗಲಿ ದೊರಕುವಂತಿರಲಿಲ್ಲ ಒಬ್ಬ ಯುವತಿಯೂ ಒಂದು ಹೂವೂ ಅವನಿಗೆ ಉತ್ಸಾಹವನ್ನುಂಟುಮಾಡುತ್ತಿದ್ದುವು. ಅವೆರಡೂ ತನ್ನ ಭಾಗಕ್ಕೆ ಅದೃಶ್ಯವಾದುವೆಂದವನು ನಿರುತ್ಸಾಹಿಯಾಗಿದ್ದನು.

ಅದೃಷ್ಟವಶಾತ್ ಅವನು ತಪ್ಪುತಿಳಿದಿದ್ದನು ಆ ಕಾರಾಗಾರದಲ್ಲಿಯೇ ಅದ್ಭುತಘಟನೆಗಳು ಅವನಿಗಾಗಿ ಕಾದಿದ್ದುವೆಂಬ ಅಂಶವನ್ನು ಅವನು ಅರಿತಿರಲಿಲ್ಲ!

ಕುಮುದಚಂದ್ರನೊಂದು ದಿನ ಕಾರಾಗಾರದ ಕಿಟಕಿಯಬಳಿ ನಿಂತು ದೂರದಲ್ಲಿದ್ದ ನದಿಯೊಂದರಮೇಲೆ ಸುಳಿದುಬರುತ್ತಿದ್ದ ಸ್ವಚ್ಛವಾದ ಗಾಳಿಯನ್ನು ಸೇವಿಸುತ್ತಿದ್ದನು ದೂರದಲ್ಲಿ ರತ್ನಗಿರಿಯ ಗಿರಣಿಗಳ ಮೇಲ್ಭಾಗಗಳು ಅವನಿಗೆ ಗೋಚರವಾಗುತ್ತಿದ್ದುವು. ಆಕಡೆಯಿಂದ ಕೆಲವು ಪಾರಿವಾಳಗಳು ಮಣಿಪುರದ ಕಡೆಗೆ ಬಂದು ಮನೆಗಳ ಮಹಡಿಗಳ ಮೇಲೆ ಕುಳಿತುಕೊಳ್ಳುತ್ತಿದ್ದುವು ಅವು ತನ್ನ ಪಟ್ಟಣವಾದ ರತ್ನಗಿರಿಯ ಕಡೆಯಿಂದ ಬರುತ್ತಿದ್ದುದರಿಂದ ಪುನಃ ಆ ಕಡೆಗೇ ಹಾರಿಹೋಗಬಹುದೆಂದು ಕುಮುದನು ಯೋಚಿಸುತ್ತಿದ್ದನು. ಅವುಗಳಲ್ಲೊಂದರ ರೆಕ್ಕೆಗೆ ಕಾಗದವೊಂದನ್ನು ಕಟ್ಟಿ ಕಳುಹಿಸಿದರೆ ಅದು ರತ್ನಗಿರಿಯನ್ನು ಸೇರಬಹುದೆಂದು ಅವನು ಯೋಚಿಸಿದನು. ಕೆಲವುಕ್ಷಣಗಳವರೆಗೆ ಯೋಚಿಸಿ, "ಇರಲಿ. ಹಾಗೆಯೇ ಮಾಡುತ್ತೇನೆ" ಎಂದು ಹೇಳಿಕೊಂಡನು.

ಇಪ್ಪತ್ತೆಂಟು ವರ್ಷಗಳ ಯುವಕನು ಆಜೀವಪರ್ಯಂತವೂ ಕಾರಾಗೃಹವಾಸವನ್ನನುಭವಿಸಬೇಕೆಂದು ಹೇಳಿದರೆ—ಅವನು ಸುಮಾರು ಇಪ್ಪತ್ತೆರಡು ಅಥವಾ ಇಪ್ಪತ್ತುಮೂರು ಸಾವಿರ ದಿನಗಳು ಕಾರಾಗೃಹದಲ್ಲಿರಬೇಕೆಂದು ಹೇಳಿದರೆ—ಅವನು ಬಹಳ ಶಾಂತಭಾವದಿಂದ ಕೆಲಸಮಾಡತೊಡಗುವನು ಕುಮುದನೂ ಹಾಗೆಯೇ ಶಾಂತರೀತಿಯಲ್ಲಿ ವರ್ತಿಸತೊಡಗಿದನು ಅವನಿಗೆ ತನ್ನ ಪಸಿಗಳ ಯೋಚನೆಯೇ ಸರ್ವದಾ ಮನಸ್ಸಿನಲ್ಲಿದ್ದಿತು. ಅವನು ತನ್ನ ಆಹಾರದಲ್ಲಿ ಸ್ವಲ್ಪಮಾತ್ರ ಉಳಿಸಿ ಪಾರಿವಾಳ

ಗಳನ್ನು ಆ ಆಹಾರದ ಕಡೆಗೆ ಎಳೆಯತೊಡಗಿದನು. ಅನೇಕ ಪ್ರಯತ್ನಗಳು ವಿಫಲವಾದ ಬಳಿಕ ಅವನು ಕಡೆಗೆ ಒಂದು ಹೆಣ್ಣು ಪಾರಿವಾಳ ಪಕ್ಷಿಯನ್ನು ಹಿಡಿದನು.

ಎರಡು ಮಾಸಗಳು ಕಳೆಯುವ ವೇಳೆಗೆ ಅವನು ಗಂಡುಪಕ್ಷಿಯೊಂದನ್ನು ಹಿಡಿದನು. ಅವೆರಡನ್ನೂ ಅವನು ಒಟ್ಟಿಗೆ ಸೇರಿಸಿದನು. 1673ನೇ ಇಸವಿಯು ಪ್ರಾರಂಭವಾಗುವ ವೇಳೆಗೆ ಅವು ಕೆಲವು ಮೊಟ್ಟೆಗಳನ್ನಿಟ್ಟವು. ಆಗವನು ಹೆಣ್ಣುಪಕ್ಷಿಯನ್ನು ಹಾರಿಹೋಗಲು ಬಿಟ್ಟನು. ಗಂಡುಪಕ್ಷಿಯನ್ನು ಮೊಟ್ಟೆಗಳ ರಕ್ಷಣಾರ್ಥವಾಗಿ ಬಿಟ್ಟು ಆ ಹೆಣ್ಣು ಪಾರಿವಾಳವು ಸಂತೋಷದಿಂದ ರತ್ನಗಿರಿಯ ಕಡೆಗೆ ಹಾರಿಹೋಯಿತು. ಅದರ ರೆಕ್ಕೆಯಲ್ಲಿ ಚಿಕ್ಕ ಪತ್ರವೊಂದಿದ್ದಿತು.

ಸಾಯಂಕಾಲದ ವೇಳೆಗೆ ಪಾರಿವಾಳವು ಹಿಂತಿರುಗಿ ಬಂದಿತು. ಪತ್ರವು ಅದರ ರೆಕ್ಕೆಯಲ್ಲಿಯೇ ಇನ್ನೂ ಇದ್ದಿತು.

ಹೀಗೆ ಹದಿನೈದು ದಿನಗಳು ಕಳೆದುವು. ಮೊದಲು ಮೊದಲು ಕುಮುದನು ನಿರಾಶೆಹೊಂದಿದನು. ಕಡೆಕಡೆಗೆ ಅವನಿಗೆ ಅಪಾರವಾದ ದುಃಖವುಂಟಾಗತೊಡಗಿತು.

ಹದಿನಾರನೆಯ ದಿನ ಪಾರಿವಾಳವು ಹಿಂತಿರುಗಿ ಬಂದಾಗ ಅದರ ರೆಕ್ಕೆಯಲ್ಲಿದ್ದ ಪತ್ರವು ಮಾಯವಾಗಿತ್ತು. ಆ ಪತ್ರವನ್ನು ಕುಮುದನು ತನ್ನ ವೃದ್ಧ ಸೇವಕಿಯ ಹೆಸರಿಗೆ ಬರೆದಿದ್ದನು. ಅದನ್ನು ಕಂಡವರು ಬೇಗನೆ ಅದನ್ನು ಅವಳಿಗೆ ತಲಪಿಸಬೇಕೆಂದು ಬೇಡಿಕೊಂಡಿದ್ದನು. ಈ ಪತ್ರದಲ್ಲಿ ಪುಷ್ಪಲತೆಗಾಗಿ ಬೇರೊಂದು ಚಿಕ್ಕಪತ್ರವಿದ್ದಿತು.

ಕುಮುದನ ಸೇವಕಿಗೆ ಪತ್ರವು ತಲಪಿದುದು. ಅದು ಹೇಗೆಂದು ಸ್ವಲ್ಪ ವಿವರಿಸುವೆವು.

ರತ್ನಗಿರಿಯನ್ನು ವಿಷಕಂಠನು ಬಿಟ್ಟುಹೋಗುವಾಗ ಅವನ ಮನೆಯನ್ನೂ, ಅವನ ಸೇವಕನನ್ನೂ, ಅವನ ಸಂಶೋಧನಾಗಾರವನ್ನೂ, ಅವನ ದೂರದರ್ಶಕಯಂತ್ರವನ್ನೂ ಬಿಟ್ಟುಹೋದುದಲ್ಲದೆ ಅವನ ಪಾರಿವಾಳಗಳನ್ನೂ ಬಿಟ್ಟುಹೋದನು. ವಿಷಕಂಠನ ಈ ವ್ಯವಸ್ಥೆಯ ಪರಿಣಾಮ

ವಾಗಿ ಅವನ ಸೇವಕನು ಸಂಬಳವಿಲ್ಲದವನಾದನು. ಅವನು ಮೊದಲು ಮೊದಲು ತನ್ನಲ್ಲಿ ಉಳಿದಿದ್ದ ಅಲ್ಪಸ್ವಲ್ಪ ಹಣದಿಂದ ಜೀವಿಸತೊಡಗಿದನು. ಅದು ಮುಗಿದುಹೋಗುತ್ತಲೇ ಅವನು ತನ್ನ ಒಡೆಯನ ಪಾರಿವಾಳಗಳನ್ನು ಭಕ್ಷಿಸತೊಡಗಿದನು. ಈ ವಿಷಯವನ್ನರಿತು ಪಾರಿವಾಳಗಳು ವಿಷಕಂಠರನ ಮನೆಯಿಂದ ಕುಮುದಚಂದ್ರನ ಮನೆಗೆ ಹಾರಿಹೋದುವು.

ಕುಮುದನ ವೃದ್ಧಸೇವಕಿಯು ಯಾರನ್ನೂ ಪ್ರೀತಿಸದೆ ಬದುಕುವುದು ಕಷ್ಟವೆಂದರಿತು ಮನೆಗೆ ಬಂದ ಪಾರಿವಾಳಗಳನ್ನೇ ಪ್ರೀತಿಸತೊಡಗಿದಳು. ವಿಷಕಂಠರನ ಸೇವಕನು ಹದಿನೈದು ಪಕ್ಷಿಗಳನ್ನು ಭಕ್ಷಿಸಿ ಉಳಿದ ಹದಿನೈದು ಪಕ್ಷಿಗಳನ್ನೂ ಭುಂಜಿಸುವ ಉದ್ದೇಶದಿಂದ ಅವುಗಳನ್ನು ಹಿಂದಕ್ಕೆ ಕೊಡ ಬೇಕೆಂದು ಕೇಳಿದನು ಆದರೆ ವೃದ್ಧಸೇವಕಿಯು ಅವುಗಳಲ್ಲೊಂದೊಂದಕ್ಕೂ ಒಂದೊಂದು ರೂಪಾಯಿಯಂತೆ ಕೊಟ್ಟು ಅವುಗಳನ್ನು ಕೊಂಡುಕೊಳ್ಳುವುದಾಗಿ ಹೇಳಿದಳು ಒಂದೊಂದಕ್ಕೂ ದ್ವಿಗುಣಿತವಾದ ಬೆಲೆಯು ದೊರಕುವುದನ್ನು ಕಂಡು ಸೇವಕನು ಸಂತೋಷದಿಂದ ಒಪ್ಪಿದನು. ಹೀಗಾಗಿ ಸೇವಕಿಯು ಪಾರಿವಾಳಗಳ ಒಡತಿಯಾದಳು.

ಪತ್ರವು ಈ ಸೇವಕಿಯನ್ನು ಸೇರಿತೆಂದು ಆಗಲೇ ಹೇಳಿರುವೆವು. ಈಗ ಮುಂದೆ ನಡೆದುದನ್ನು ವಿವರಿಸುವೆವು.

ಫೆಬ್ರವರಿ ತಿಂಗಳಲ್ಲೊಂದುದಿನ ಸಾಯಂಕಾಲ ನಕ್ಷತ್ರಗಳು ಆಗತಾನೆ ಮಿನುಗುಟ್ಟತೊಡಗಿದ್ದುವು. ಆ ಸಮಯವಲ್ಲಿ ಕಾರಾಗಾರದ ಮೆಟ್ಟಲುಗಳ ಬಳಿ ಕುಮುದಚಂದ್ರನಿಗೆ ಧ್ವನಿಯೊಂದು ಕೇಳಿಬಂದು ಅವನು ಚಮಕಿತನಾದನು. ಅವನು ವಕ್ಷಸ್ಥಲದಮೇಲೆ ಕೈಯಿಟ್ಟುಕೊಂಡು ಕೇಳಿದನು. ಆ ಧ್ವನಿಯು ಪುಷ್ಪಲತೆಯ ಅಪ್ಸರನಿಂದಿತಕಂಠಸ್ವರವಾಗಿತ್ತು.

ಪಾರಿವಾಳದ ಪತ್ರವು ಅದೃಶ್ಯವಾದಂದಿನಿಂದ ಈ ಧ್ವನಿಯು ಕಿವಿಯಲ್ಲಿ ಬೀಳಬಹುದೆಂದು ಅವನು ಕಾತುರನಾಗಿದ್ದನು. ಈಗದನ್ನು ಕೇಳಿ ಬಾಗಿಲಬಳಿ ಹೋಗಿ ಕಿವಿಗೊಟ್ಟು ಕೇಳಿದನು. ಸುರನಗರಿಯಲ್ಲಿದ್ದಾಗ ಅವನ ಕಿವಿಯಲ್ಲಿ ಅಮೃತಧಾರೆಯನ್ನು ಸುರಿಸುತ್ತಿದ್ದ ಧ್ವನಿಯೇ ಈಗವನಿಗೆ ಸ್ಪಷ್ಟವಾಗಿ ಕೇಳಿಬರುತ್ತಿದ್ದಿತು.

ಪುಷ್ಪಲತೆಯು ಸುರನಗರಿಯಿಂದ ಈ ಮಣಿಪುರಕ್ಕೆ ಬಂದುದು ಹೇಗೆ? ಬಂದರೂ ಕಾರಾಗೃಹಗಳಿದ್ದ ಸ್ಥಳಕ್ಕೆ ಬಂದುದು ಹೇಗೆ? ಇಲ್ಲಿನ ವರೆಗೆ ಬಂದವಳು ತನ್ನ ಕಾರಾಗಾರವಿದ್ದ ಕೊಟಡಿಗೂ ಅವಳು ಬರಬಹು ದಲ್ಲವೆ?—ಇವೇ ಮುಂತಾದ ಯೋಚನೆಗಳಲ್ಲಿ ಕುಮುದಚಂದ್ರನು ಮಗ್ನ ನಾಗಿದ್ದನು. ಹಾಗವನು ಯೋಚಿಸುತ್ತಿದ್ದಂತೆಯೇ ಕಾರಾಗಾರದ ಬಾಗಿಲಿ ನಲ್ಲಿದ್ದ ಚಿಕ್ಕ ಕಿಟಕಿಯು ತೆರೆಯಲ್ಪಟ್ಟಿತು. ಆ ಕಿಟಕಿಗೆ ಕಬ್ಬಿಣದ ಸಲಾಕಿಗಳಿದ್ದುವು ಆ ಸಲಾಕಿಗಳ ಹಿಂದೆ ಪುಷ್ಪಲತೆಯ ಸುಂದರ ವದನವು ಕಂಡುಬಂದಿತು. ಐದು ತಿಂಗಳಿನಿಂದ ಅವಳಿಗೆ ದುಃಖವುಂಟಾಗಿ ಅವಳ ಮುಖವು ಸ್ವಲ್ಪ ಶುಷ್ಕವಾಗಿದ್ದುದರಿಂದ ಅವಳ ಸೌಂದರ್ಯವು ಮತ್ತಷ್ಟು ವೃದ್ಧಿಹೊಂದಿದ್ದಿತು. ಅವಳು ಸಲಾಕಿಗಳಮೇಲೆ ಮುಖವನ್ನಿಟ್ಟು, "ನಾನು ಇಲ್ಲಿಗೂ ಬಂದಿದ್ದೇನೆ ನೋಡಿ" ಎಂದಳು.

ಕುಮುದನು ಸಂತೋಷದಿಂದ ಕೂಗುತ್ತೆ, "ಪುಷ್ಪಾ! ಪುಷ್ಪಾ!" ಎನ್ನುತ್ತೆ ಕೈಗಳನ್ನು ನೀಡಿದನು.

"ಗಟ್ಟಿಯಾಗಿ ಮಾತನಾಡಬೇಡಿ. ನನ್ನ ತಂದೆಯು ಹಿಂದೆಯೇ ಬರುತ್ತಿದ್ದಾನೆ"

"ನಿನ್ನ ತಂದೆಯೆ?"

"ಅಹುದು. ಮೆಟ್ಟಲುಗಳ ಬಳಿ ಕಾರಾಗಾರದ ಮುಖ್ಯಸ್ಥನೊಡನೆ ಮಾತನಾಡುತ್ತೆ ನಿಂತಿದ್ದಾನೆ. ಈಗ ಬಂದುಬಿಡುತ್ತಾನೆ"

"ಮುಖ್ಯಸ್ಥನೊಡನೆ ಮಾತನಾಡುತ್ತಿದ್ದಾನೆಯೆ?"

"ಕೇಳಿ. ಎಲ್ಲವನ್ನೂ ಕೆಲವು ಮಾತುಗಳಲ್ಲಿ ಹೇಳುತ್ತೇನೆ. ಇಲ್ಲಿಗೆ ಸಮೀಪದಲ್ಲಿರುವ ಹಳ್ಳಿಯೊಂದರಲ್ಲಿ ಗವರ್ನರನು ದನಗಳ ಕೊಟ್ಟಿಗೆ ಯೊಂದನ್ನು ಇಟ್ಟಿದ್ದಾನೆ. ಅವನ ಸೇವಕಿಯಾದ ನನ್ನ ಚಿಕ್ಕಮ್ಮನು ಆ ಕೊಟ್ಟಿಗೆಯನ್ನು ನೋಡಿಕೊಳ್ಳುತ್ತಾಳೆ. ನಾನು ನಿಮ್ಮ ಪತ್ರವನ್ನು ಹೊಂದುತ್ತಲೇ—ಅಯ್ಯೋ! ಅದನ್ನು ನಾನು ಓದಲು ಆಗಲಿಲ್ಲ, ನಿಮ್ಮ ಸೇವಕಿಯು ಓದಿ ಹೇಳಿದಳು—ನನ್ನ ಚಿಕ್ಕಮ್ಮನ ಬಳಿಗೆ ಬೇಗನೆ ಹೋದೆನು. ಅಲ್ಲಿಗೆ ರಾಜಾವಿನಯಸಿಂಹನು ಬರುವವರೆಗೆ ಕಾದಿದ್ದೆನು.

ಆತನು ಬರುತ್ತಲೇ—ಸುರನಗರಿಯಲ್ಲಿರುವ ಕಾರಾಗೃಹದಿಂದ ನನ್ನ ತಂದೆಯನ್ನು ಮಣಿಪುರದ ಕಾರಾಗೃಹಕ್ಕೆ ವರ್ಗಮಾಡಿ ಇಲ್ಲಿನ ಅಧಿಕಾರವನ್ನು ಅವನಿಗೆ ಕೊಡಬೇಕೆಂದು ಬೇಡಿಕೊಂಡೆನು. ಹಾಗೇಕೆ ಬೇಡಿದೆನೆಂದು ಗವರ್ನರನಿಗೆ ತಿಳಿಯುವ ಸಂಭವವಿರಲಿಲ್ಲ ತಿಳಿದಿದ್ದರೆ ಅವನು ಅಪ್ಪಣೆ ಮಾಡುತ್ತಿರಲಿಲ್ಲ ತಿಳಿಯದೆ ಇದ್ದುದರಿಂದ ಅಪ್ಪಣೆ ಮಾಡಿದನು".

"ಹಾಗಾದರೆ ನೀನು ಇಲ್ಲಿಯೇ ಇರುವೆಯಲ್ಲವೆ?"

"ತಾವೇ ನೋಡೋಣಾಗಲಿ"

"ನಿನ್ನನ್ನು ನಿತ್ಯವೂ ನೋಡುವೆನೆ?"

"ಸಾಧ್ಯವಾದಷ್ಟುಬಾರಿ ನೋಡುವಿರಿ".

"ಪುಷ್ಪಾ! ಪುಷ್ಪಾ! ನನ್ನ ಮೇಲೆ ನಿನಗೆ ಸ್ವಲ್ಪ ಪ್ರೀತಿಯಿರುವುದೆ?"

"ಸ್ವಲ್ಪವೆ?—ಚೆನ್ನಾಗಿ ಹೇಳಿದಿರಿ!"

ಕುಮುದನು ಅವಳ ಕೈ ಹಿಡಿಯಲೆತ್ನಿಸಿದನು. ಸಲಾಕಿಗಳ ಅಡಚಣೆಯಿಂದ ಅವಳ ಕೈಬೆರಳುಗಳು ಮಾತ್ರ ಸಿಕ್ಕಿದುವು. ಅವಳು "ನನ್ನ ತಂದೆಯು ಬಂದಂತಿದೆ" ಎನ್ನುತ್ತೆ ತಟ್ಟನೆ ಬಾಗಿಲಿನಿಂದ ಸರಿದು ಹಿಂದಕ್ಕೆ ಹೋದಳು.

ಕಾಳೀಚರಣನು ಸೋಪಾನವನ್ನು ಹತ್ತಿ ಮೇಲಕ್ಕೆ ಬಂದನು.

## ಪಂಚದಶ ಪರಿಚ್ಛೇದ

### ಸಣ್ಣ ಕಿಟಕಿಯ ಅಡಚಣೆ

ಕಾಳೀಚರಣನ ಹಿಂದೆಯೇ ನಾಯಿಯೂ ಬಂದಿತು. ಬಂದಿಗಳನ್ನು ಗುರುತುಹಿಡಿಯಲೋಸುಗ ಜೈಲರನು ಅದನ್ನು ತನ್ನೊಡನೆ ಕರೆತಂದಿದ್ದನು. ತಂದೆಯನ್ನು ನೋಡಿ ಪುಷ್ಪಲತೆಯು, "ನೋಡಪ್ಪಾ! ಈ ಕೊಟಡಿಯಿಂದಲೇ ಹಿಂದೆ ಬಂದಿಯೊಬ್ಬನು ತಪ್ಪಿಸಿಕೊಂಡು ಹೋಗಿದ್ದುದು. ಅವನನ್ನು ನೋಡಿದ್ದೆಯಾ?" ಎಂದಳು.

ಕಾಳೀಚರಣ—ಓಹೋ! ಇದೇ ಕೊಟಡಿಯಿಂದಲೇ ಅಲ್ಲವೆ?—ಅಹುದು-ಅವನನ್ನೂ ನೋಡಿದ್ದೆನು-ಅವನ ಸ್ನೇಹಿತನನ್ನೂ ನೋಡಿದ್ದೆನು-

ಇಬ್ಬರೂ ಕೊರಮರು—ಇರಲಿ. ನನ್ನ ಅಧಿಕಾರವಿರುವವರೆಗೆ ಈ ಕೊಟಡಿ ಯಿಂದ ಯಾರೂ ತಪ್ಪಿಸಿಕೊಂಡು ಹೋಗದಂತೆ ನೋಡಿಕೊಳ್ಳುವೆನು.

ಹಾಗೆ ಹೇಳುತ್ತ ಅವನು ಕತ್ತಲಲ್ಲಿಯೇ ಬಾಗಿಲನ್ನು ತೆರೆದು ಬಂದಿ ಯೊಡನೆ ಮಾತನಾಡತೊಡಗಿದನು.

ನಾಯಿಯು ಕುಮುದನ ಬಳಿಗೆ ಹೋಗಿ ಅವನ ಸುತ್ತಲೂ ತಿರುಗುತ್ತ ಅವನ ಕಾಲುಗಳನ್ನು ಆಘ್ರಾಣಿಸತೊಡಗಿತು ಕಾರಕೂನನೊಡನೆಯೂ ವಧೆಮಾಡುವವನೊಡನೆಯೂ ಹೋಗಿ ಪುನಃ ಬದುಕಿ ಬಂದುದೇಕೆಂದು ಅದು ಕೇಳುವಂತಿದ್ದಿತು. ಪುಷ್ಪಲತೆಯು ಅದನ್ನು ಹಿಂದಕ್ಕೆ ಕರೆದಳು ಅದು ಒಡನೆಯೇ ಅವಳ ಬಳಿಗೆ ಓಡಿಹೋಯಿತು.

ಕಾಳೀಚರಣನು ತನ್ನ ಕೈದೀಪವನ್ನು ಎತ್ತಿಹಿಡಿದು ಸ್ವಲ್ಪ ಬೆಳಕನ್ನು ಕಾರಾಗೃಹದಲ್ಲಿ ಬಿಡುತ್ತ ಹೇಳತೊಡಗಿದನು—

"ಮಹಾಶಯ! ನಾನೇ ಈಗಿನ ಹೊಸ ಜೈಲರು. ತಿಳಿಯಿತೆ? ಎಲ್ಲ ಕೊಟಡಿಗಳೂ ನನ್ನ ಆಡಳಿತಕ್ಕೆ ಸೇರಿವೆ ನಾನೇನೂ ಕೆಟ್ಟವನಲ್ಲ. ಆದರೆ ನಿಯಮನೀತಿಗಳನ್ನೂ ಕಾಯಿದೆಕಟ್ಟಳೆಗಳನ್ನೂ ನಾನು ಅಕ್ಷರಶಃ ಪಾಲಿಸುವೆನು. ತಿಳಿಯಿತೆ?"

ಕುಮುದಚಂದ್ರನು ದೀಪದ ಬೆಳಕಿನಲ್ಲಿ ಬಂದು ನಿಂತು, "ಏನು ಕಾಳೀಚರಣಬಾಬುಗಳೆ! ತಮ್ಮನ್ನು ಚೆನ್ನಾಗಿ ಬಲ್ಲೆ" ಎಂದನು

ಕಾಳೀಚರಣ—ಓಹೋ! ನೀನೆ? ನಿಜವಾಗಿ ಪ್ರಪಂಚದಲ್ಲಿ ಒಬ್ಬರ ನ್ನೊಬ್ಬರು ಹೀಗೆ ಭೇಟಿಮಾಡುವುದು ಆಶ್ಚರ್ಯಕರವೇ ಸರಿ.

ಕುಮುದ—ನಿಜ ಕಾಳೀಚರಣಬಾಬುಗಳೆ! ತಮ್ಮನ್ನು ನೋಡಿ ಬಹಳ ಸಂತೋಷವಾಯಿತು. ತಮ್ಮ ಕೈ ಸರಿಯಾಗಿರಬೇಕು. ಅದರ ಸಹಾಯದಿಂದಲೇ ದೀಪವನ್ನು ಹಿಡಿದಿರುವಿರಿ. ಬಹಳ ಸಂತೋಷ.

ಕಾಳೀಚರಣನು ಹುಬ್ಬು ಗಂಟಿಕ್ಕಿ ಹೇಳತೊಡಗಿದನು—"ಅದೇ ವಿಷಯವೇ ಸ್ವಲ್ಪ ಯೋಚನೆಯನ್ನುಂಟುಮಾಡಿದೆ. ರಾಜಕೀಯ ವಿಚಾರ ದಲ್ಲಿ ಜನರು ದೊಡ್ಡ ತಪ್ಪನ್ನು ಮಾಡಿಬಿಡುವರು. ರಾಜಾವಿನಯಸಿಂಹನು ನಿನ್ನ ಪ್ರಾಣವನ್ನುಳಿಸಿದನು. ನಾನಾಗಿದ್ದರೆ ಹಾಗೆಂದಿಗೂ ಮಾಡು ತ್ತಿರಲಿಲ್ಲ".

ಕುಮುದ—ಅದೇಕೆ ಹಾಗೆ ಹೇಳುವಿರಿ?

ಕಾಳೀಚರಣ—ಏಕೆಂದರೆ ನಿನ್ನಂತಹವನು ಪುನಃ ದ್ರೋಹಮಾಡ ಲೆಳಸುವನು. ನಿನ್ನಂತಹ ವಿದ್ಯಾವಂತರು ಸೈತಾನನೊಡನೆ ಸಂಬಂಧವ ನ್ನಿಟ್ಟುಕೊಂಡಿರುವರು.

"ಚಿಃ! ಎಂತಹಪಾತಃ! ತಮ್ಮ ಕೈಯನ್ನು ಕಟ್ಟಿದುದು ಸರಿಯಾ ಗಿಲ್ಲವೆ? ತಮ್ಮನ್ನು ಕೇಳಿದ ಹಣವು ಹೆಚ್ಚೆಂದೇನಾದರೂ ತೋರಿದುದೆ?"

"ಹಾಗೇನೂ ಇಲ್ಲ ಕೈಯನ್ನು ಬಹಳ ಚೆನ್ನಾಗಿ ಕಟ್ಟಿ ಸರಿಪಡಿ ಸಿರುವೆ. ಅದರಲ್ಲಿ ಸೈತಾನನ ಕೈವಾಡನಿರಬೇಕು. ಆರು ವಾರಗಳೊಳ ಗಾಗಿ ಅನಾಹುತವಾವುದೂ ಸಂಭವಿಸದೇ ಇದ್ದಂತೆಯೇ ಕೈಯನ್ನುಪ ಯೋಗಿಸುತ್ತಿದ್ದೇನೆ. ಕಾರಾಗೃಹದ ಡಾಕ್ಟರನು ಇದನ್ನು ನೋಡಿ ಪುನಃ ಕೈ ಮುರಿದು ಸರಿಯಾಗಿ ಕಟ್ಟಬೇಕೆಂದು ಹೇಳಿದನು. ಅವನ ವೃತ್ತಿಯು ಅವನಿಗೆ ಸರಿಯಾಗಿ ತಿಳಿಯದೆ? ನಾನು ಸರಿಯಾಗಿ ಹಣವನ್ನು ಕೊಟ್ಟಲ್ಲಿ ಮೂರು ತಿಂಗಳಲ್ಲಿ ಕೈಯನ್ನು ಪುನಃ ಸರಿಪಡಿಸುವುದಾಗಿ ಹೇಳುತ್ತಾನೆ".

"ಅದಕ್ಕೆ ತಾವು ಒಪ್ಪಲಿಲ್ಲವೆ?"

"ನಾನು ಬೇಡವೆಂದೆನು ನಮಸ್ಕಾರಮಾಡುವುದಕ್ಕೆ ಅನುಕೂಲ ವಾದರೆ ಸಾಕು ಸೈತಾನನನ್ನು ಕಂಡು ನಗಬಲ್ಲೆನು".

"ಸೈತಾನನನ್ನೇ ಕಂಡು ನಗಬಲ್ಲಿರಾದರೆ ವಿದ್ಯಾವಂತರನ್ನು ಕಂಡು ಮತ್ತಷ್ಟು ನಗಬಲ್ಲಿರಿ ಅಲ್ಲವೆ?"

"ಆಹಾ! ವಿದ್ಯಾವಂತರೆ! ವಿದ್ಯಾವಂತರು! ಹತ್ತಾರು ಸೈನಿಕರ ಮೇಲೆ ಬೇಕಾದರೆ ಕಾವಲಿರಬಲ್ಲೆ. ವಿದ್ಯಾವಂತನೊಬ್ಬನಮೇಲೆ ಕಾವಲಿರ ಲಾರೆ. ಪಾಪ! ಸೈನಿಕರೇನು ಮಾಡುವರು?—ಕುಡಿದು, ಮಾತನಾಡು ತ್ತಿದ್ದು, ಹೊಗೆಬತ್ತಿಯನ್ನು ಸೇದುತ್ತಿದ್ದು, ಮತ್ತರಾಗಿ ಬೀಳುವರು. ಸ್ವಲ್ಪ ಮದ್ಯವನ್ನು ಕೊಟ್ಟರೆ ತೀರಿತು. ಕುರಿಯಮರಿಗಳಂತೆ ಸಾಧುವಾಗಿ ಬಿಡುವರು. ಆದರೆ ವಿದ್ಯಾವಂತರ ವಿಷಯವೇ ಬೇರೆಯಾಗಿಹೋಯಿತು ಕುಡಿಯುವುದು, ಹೊಗೆಬತ್ತಿಯನ್ನು ಸೇದುವುದು, ಗಲಾಟೆಮಾಡುವುದು —ಇವಾವುದನ್ನೂ ಮಾಡುವುದಿಲ್ಲ. ಮತ್ತರಾಗುವುದೇ ಇಲ್ಲ ಬುದ್ಧಿಯನ್ನು ಚುರುಕಾಗಿಟ್ಟುಕೊಂಡಿರುವರು ಆದುದರಿಂದಲೇ ದ್ರೋಹಚಿಂತನೆ ಮಾಡು

ತ್ತಿರಲು ಅನುಕೂಲವಾಗುವುದು. ಅವರು ಒಂದು ಕಾಸನ್ನೂ ಖರ್ಚು ಮಾಡುವುದಿಲ್ಲ. ಆದರೆ ಹೇಳುತ್ತೇನೆ ಕೇಳು. ನೀನು ದ್ರೋಹಮಾಡ ಲೆಳಸುವುದಕ್ಕೆ ಅವಕಾಶ ಕೊಡುವುದಿಲ್ಲ. ನಿನಗೆ ಪುಸ್ತಕಗಳನ್ನಾಗಲಿ ಕಾಗದಗಳನ್ನಾಗಲಿ ಕೊಡುವುದಿಲ್ಲ. ಮೊದಲು ಈ ಕೊಟಡಿಯಲ್ಲಿ ಬಂದಿ ಯಾಗಿದ್ದವನು ಅವನ ಪತ್ನಿಯು ಪುಸ್ತಕಗಳ ಪೆಟ್ಟಿಗೆಯಲ್ಲಿಕುಳಿತೇ ಪರಾರಿಯಾದುದು ".

" ಕಾಳೀಚರಣಬಾಬುಗಳೆ! ಇದುವರೆಗೆ ತಪ್ಪಿಸಿಕೊಳ್ಳುವ ಉಪಾಯ ವನ್ನು ಹುಡುಕುತ್ತಿದ್ದೆನೆಂದು ಹೇಳಿದರೂ ಹೇಳಬಹುದು. ಆದರೆ ಈಗ ಮಾತ್ರ ಖಂಡಿತವಾಗಿ ಆ ಯೋಚನೆಯನ್ನು ತ್ಯಜಿಸಿಬಿಟ್ಟಿದ್ದೇನೆ".

" ಸರಿ, ಸರಿ. ಹುಷಾರಾಗಿರು. ನಾನು ಹೇಳುತ್ತಿರುವ ವಿಷಯವೂ ಅದೇ ಅಂತೂ ರಾಜಾವಿನಯಸಿಂಹನು ದೊಡ್ಡ ತಪ್ಪುಮಾಡಿದನೆಂದು ಹೇಳಬೇಕು.

" ನನ್ನ ತಲೆಯನ್ನು ಕತ್ತರಿಸಲಿಲ್ಲವೆಂದೇ? ತಮ್ಮ ಅಭಿಪ್ರಾಯ ಕ್ಕಾಗಿ ಅನೇಕ ವಂದನೆಗಳು".

"ನೋಡು. ಉಮಾನಾಥ ರಮಾನಾಥರು ಸೊಲ್ಲೆತ್ತದೆ ನಿದ್ರಿಸುತ್ತಿಲ್ಲವೆ?"

" ಕಾಳೀಚರಣಬಾಬುಗಳೆ! ತಾವು ಹೇಳುತ್ತಿರುವುದು ಬಹಳ ಭೀಕರವಾದ ವಿಷಯ. ಅವರಲ್ಲೊಬ್ಬರು ನನ್ನ ಮಿತ್ರರು ಮತ್ತೊಬ್ಬರು ನನ್ನ ಸಾಕುತಂದೆಗಳು. ಈ ವಿಷಯವನ್ನು ಮರೆತಿರಾ?"

" ಮರೆತಿಲ್ಲ. ಅವರಿಬ್ಬರೂ ದ್ರೋಹಿಗಳೆಂಬುದನ್ನೂ ಮರೆತಿಲ್ಲ. ಅಲ್ಲದೆ ಅವರು ಮೃತಪಟ್ಟುದು ಒಳ್ಳೆಯದೆಂದು ಹೇಳುತ್ತಿರುವುದು ಅವರ ಮೇಲಿನ ವಿಶ್ವಾಸದಿಂದಲೇ!"

" ತಾವು ಹೇಳುತ್ತಿರುವುದನ್ನು ನಿಜವೆಂದು ನಂಬಲೇಬೇಕು ಬಾಬುಗಳೆ! ತಮ್ಮ ಅಭಿಪ್ರಾಯವು ನನಗೆ ವಿಶದವಾಗಿಲ್ಲ. ಸ್ವಲ್ಪ ವಿವರಿಸೋಣಾಗಲಿ".

" ಸರಿ. ಹೇಳುತ್ತೇನೆ ಕೇಳು—ನೀನು ವಧ್ಯಸ್ಥಾನದ ಮರದ ತುಂಡಿನ ಮೇಲೆಯೇ ನಿಶ್ಚೇತನನಾಗಿ ಇದ್ದಿದ್ದರೆ................"

" ಏನು?"

“ಹಾಗೆಯೇ ಇದ್ದಿದ್ದರೆ—ನಿನಗಾವ ಕಷ್ಟವೂ ಇರುತ್ತಿರಲಿಲ್ಲ. ಈಗ —ನಾನೇನೂ ಮುಚ್ಚುಮರೆ ಮಾಡುವವನಲ್ಲ—ನನ್ನಿಂದ ಅತಿ ಕಷ್ಟ ಜೀವನವನ್ನನುಭವಿಸುವೆ”.

“ತಮ್ಮ ಅಭಯಪ್ರದಾನಕ್ಕಾಗಿ ಅನೇಕ ವಂದನೆಗಳು”.

ಕುಮುದನು ಹಾಸ್ಯಪ್ರಿಯನಾಗಿ ಕಾಳೀಚರಣನ ಕಡೆಗೆ ತಿರುಗಿ ವ್ಯಂಗ್ಯವಾಗಿ ಕಿರುನಗೆಯನ್ನು ತೋರುತ್ತಿದ್ದಾಗ, ಪ್ರೇಮಲತೆಯು ಹೊರ ಗಡೆನಿಂತು ಪ್ರಕಾಶಮಾನವಾದ ಮುಗುಳ್ನಗೆಯನ್ನು ತನ್ನ ಪ್ರಿಯತಮನ ಕಡೆಗೆ ಬೀರುತ್ತಿದ್ದಳು. ಪ್ರಿಯತಮೆಯ ಪ್ರಫುಲ್ಲಿತವದನವನ್ನು ನೋಡಿ ಕುಮುದನಿಗೆ ಬಹಳ ಸಮಾಧಾನವಾಯಿತು.

ಆ ಸಮಯದಲ್ಲಿ ಕಾಳೀಚರಣನು ಕಾರಾಗೃಹದ ಕಿಟಕಿಯ ಬಳಿಗೆ ಹೋದನು. ಕಿಟಕಿಯುಮೂಲಕ ಅನಂತವಾದ ಆಕಾಶವು ದೃಗ್ಗೋಚರ ವಾಗುತ್ತಿದ್ದಿತು. ಕಾಳೀಚರಣನು, “ಇಲ್ಲಿಂದ ಕಾಣುವುದೇನು?” ಎನ್ನುತ್ತ ಕಿಟಕಿಯುಮೂಲಕ ನೋಡುತ್ತಿದ್ದನು. ಕುಮುದಚಂದ್ರನು ಪುಷ್ಪಲತೆಯ ಕಡೆಗೆ ನೋಡುತ್ತ, “ಇಲ್ಲಿಂದ ಅತಿಮನೋಹರವಾದ ಅತಿಸುಂದರವಾದ ದೃಶ್ಯವು ಕಾಣುವುದು” ಎಂದನು.

ಕಾಳೀಚರಣನು, “ನಿಜ, ನಿಜ. ಬಹಳ ಒಳ್ಳೆಯ ದೃಶ್ಯವು ಕಾಣು ವುದು” ಎಂದನು.

ಆ ಸಮಯದಲ್ಲಿ ಕುಮುದಚಂದ್ರನ ಪಾರಿವಾಳಗಳು ಅಪರಿಚಿತನ ಆಕಾರದಿಂದಲೂ ಧ್ವನಿಯಿಂದಲೂ ಗಾಬರಿಗೊಂಡು ತಮ್ಮ ಗೂಡನ್ನು ಬಿಟ್ಟು ಸಾಯಂಕಾಲದ ಮುಸುಕು ಬೆಳಕಿನಲ್ಲಿಯೇ ಹಾರಿಹೋದುವು. ಕಾಳೀಚರಣನು ಅವನ್ನು ನೋಡಿ, “ಓಹೋ! ಇದೇನು?” ಎಂದನು.

“ಅವು ನನ್ನ ಪಾರಿವಾಳಗಳು!”

“ನಿನ್ನ ಪಾರಿವಾಳಗಳು! ನಿನ್ನ ಪಾರಿವಾಳಗಳು! ಬಂದಿಯಾ ಗಿರುವವನಿಗೆ ಸ್ವಂತ ಪದಾರ್ಥಗಳು ಬೇರೆ ಇರುವುವೆ?”

“ಹಾಗಾದರೆ, ದಯಾಮಯನಾದ ದೇವದೇವನು ಅವುಗಳನ್ನು ಸಾಲವಾಗಿ ನನಗೆ ಕೊಟ್ಟಿದ್ದಾನೆ!”

“ನೋಡಿದೆಯಾ? ಆಗಲೇ ಕಟ್ಟಳೆನಿಯಮಗಳನ್ನು ಮುರಿಯುವ

ಪ್ರಯತ್ನವು ನಡೆದಿದೆ. ಪಾರಿವಾಳಗಳೆ! ಮಹಾಶಯ! ಒಂದು ವಿಷಯ ವನ್ನು ಹೇಳಲೆ?—ನಾಳೆಯೊಳಗಾಗಿ ನಿನ್ನ ಪಾರಿವಾಳಗಳು ನನ್ನ ಸೇವಕನ ಅಡಿಗೆಯ ಮನೆಯನ್ನು ಸೇರುವುವು"

"ಮೊದಲು ತಾವು ಅವುಗಳನ್ನು ಹಿಡಿಯಬೇಕಲ್ಲವೆ? ಇವು ನನ್ನ ವೆಂದು ತಾವು ಒಪ್ಪಿಕೊಳ್ಳುವುದಿಲ್ಲ. ನಿಮ್ಮದಂತೂ ಅಲ್ಲವೇ ಅಲ್ಲವೆಂದು ನಾನು ಹೇಳಬೇಕಾಗಿ ಬಂದಿದೆ".

"ಇದುವರೆಗೆ ನನ್ನವಾಗಿರಲಿಲ್ಲ. ಇನ್ನು ಮೇಲೆ ನನ್ನವಾಗಬಾರ ದೇಕೆ?—ಇಪ್ಪತ್ತುನಾಲ್ಕು ಗಂಟೆಗಳು ಮುಗಿಯುವಷ್ಟರಲ್ಲಿ ಅವುಗಳ ಕೊರಳನ್ನು ಮುರಿದುಬಿಡುತ್ತೇನೆ. ನಿಶ್ಚಿಂತನಾಗಿರು".

ಈ ಭೀಕರವಾದ ವಚನವನ್ನೀಯುತ್ತ ಕಾಳೀಚರಣನು ಕಿಟಕಿ ಯಲ್ಲಿ ಬಗ್ಗಿನೋಡುತ್ತ ಪಾರಿವಾಳಗಳ ಗೂಡನ್ನು ಪರೀಕ್ಷಿಸತೊಡಗಿದನು. ಆ ಸಮಯದಲ್ಲಿ ಕುಮುದಚಂದ್ರನು ಬಾಗಿಲಬಳಿಗೆ ಓಡಿ ಪುಷ್ಪಲತೆಯ ಕೈಯನ್ನು ಪ್ರೀತಿಪುರಸ್ಸರವಾಗಿ ಚುಂಬಿಸಿದನು. ಅವಳು, "ಒಂಭತ್ತು ಗಂಟೆಗೆ ನಿಮ್ಮನ್ನು ನೋಡುತ್ತೇನೆ" ಎಂದಳು.

ಕಾಳೀಚರಣನಿಗೆ ಇದಾವುದೂ ಕಾಣಿಸಲಿಲ್ಲ. ಕೇಳಿಸಲೂ ಇಲ್ಲ. ಅವನು ಕಿಟಕಿಯನ್ನು ಮುಚ್ಚಿ ಕಾರಾಗೃಹದ ಬಾಗಿಲನ್ನೂ ಮುಚ್ಚಿ, ಇತರ ಬಂದಿಗಳಿಗೂ ಇದೇಪ್ರಕಾರವಾಗಿ ದಯೆತೋರುವ ಅಭಿಲಾಷೆಯಿಂದ ಹೊರಟನು. ಅವನ ಪುತ್ರಿಯೂ ಅವನೊಡನೆಯೇ ಹೊರಟಳು.

ಕಾಳೀಚರಣನು ದೂರವಾಗಿ ಹೊರಟುಹೋಗುತ್ತಲೇ ಕುಮುದ ಚಂದ್ರನು ಕಿಟಕಿಯಬಳಿಗೆ ಓಡಿ ಪಾರಿವಾಳಗಳ ಗೂಡನ್ನು ನಾಶಪಡಿ ಸಿದನು. ಕ್ರೂರನಾದ ಕಾಳೀಚರಣನ ಪ್ರೀತಿಗೆ ಆ ಪಕ್ಷಿಗಳನ್ನು ಬಿಡಬಾರ ದೆಂದು ಅವನು ತನ್ನ ಪತ್ರವಾಹಕರ ಗೂಡನ್ನು ನಾಶಪಡಿಸಿಬಿಟ್ಟನು. ಗೂಡಿಲ್ಲದೆ ಅವು ಪುನಃ ಅಲ್ಲಿಗೆ ಬಂದುಸೇರುವಂತಿರಲಿಲ್ಲ.

ಕಾಳೀಚರಣನ ಭೇಟಿ, ಅವನ ಭೀಕರವಚನಗಳು-ಇವುಗಳಾವುವೂ ಕುಮುದನ ಸಂತೋಷವನ್ನು ದೂರಮಾಡಲಿಲ್ಲ. ಪುಷ್ಪಲತೆಯು ಸಮೀಪ ದಲ್ಲಿರುವಳೆಂದೂ ತನ್ನನ್ನು ನೋಡಲು ಬರುವಳೆಂದೂ ಅವನು ಬಹಳವಾಗಿ ಹರ್ಷದಿಂದಿದ್ದನು.

ಒಂಭತ್ತುಗಂಟೆಯ ವೇಳೆಗೆ ಸರಿಯಾಗಿ ಕಾರಾಗಾರದ ಸೋಪಾನ ಗಳ ಮೇಲೆ ಅದಾರೋ ಮೆಲ್ಲನೆ ಬರುತ್ತಿದ್ದಂತೆ ಕುಮುದಚಂದ್ರನಿಗೆ ಭಾಸವಾಯಿತು. ಒಡನೆಯೇ ಬಾಗಿಲಿನ ಸಣ್ಣ ಕಿಟಕಿಯ ಬಳಿ ದೀಪ ವೊಂದು ಕಂಡುಬಂದಿತು. ಆ ಸಣ್ಣ ಕಿಟಕಿಯ ಬಾಗಿಲನ್ನು ಹೊರಗಿನಿಂದ ತೆಗೆಯಲನುಕೂಲವಾಗಿದ್ದಿತು. ಪುಷ್ಪಲತೆಯು ಬೇಗಬೇಗನೆ ಮೆಟ್ಲು ಗಳನ್ನು ಹತ್ತಿಬಂದು ಸಣ್ಣ ಕಿಟಕಿಯ ಬಾಗಿಲನ್ನು ತೆಗೆದು, "ನೋಡಿ ದಿರಾ! ಹೇಳಿದಂತೆ ಒಂಭತ್ತುಗಂಟೆಗೆ ಸರಿಯಾಗಿ ಬಂದಿದ್ದೇನೆ" ಎಂದಳು.

"ಪುಷ್ಪಾ! ನೀನು ಬಹಳ ಒಳ್ಳೆಯವಳು!"

"ಹಾಗಾದರೆ ನನ್ನನ್ನು ನೋಡಲು ನಿಮಗೆ ಸಂತೋಷವಾಗುವುದೆ?"

"ಕೇಳಬೇಕೆ?—ಅದಿರಲಿ ಇಲ್ಲಿಗೆ ಹೇಗೆ ಬಂದೆ? ಎಲ್ಲವನ್ನೂ ಹೇಳು".

"ಕೇಳಿ. ನನ್ನ ತಂದೆಯು ರಾತ್ರಿ ಊಟಮಾಡುತ್ತಲೇ ನಿದ್ರಿಸಿ ಬಿಡುವನು. ಅವನಿಗೆ ಸ್ವಲ್ಪ ಮದ್ಯವನ್ನು ಕೊಟ್ಟು ಅವನು ಸ್ವಲ್ಪ ಚೆನ್ನಾಗಿಯೇ ನಿದ್ರಿಸುವಂತೆ ಮಾಡಿಬಿಡುವೆನು. ಹಾಗೆ ಮಾಡುವುದರಿಂದ ನಿಮ್ಮೊಡನೆ ಒಂದುಗಂಟೆಯ ಕಾಲ ಮಾತನಾಡಲನುಕೂಲವಾಗುವುದು".

"ಪುಷ್ಪಾ! ಪುಷ್ಪಾ! ನಿನಗೆ ಬಹಳ ಕೃತಜ್ಞನಾಗಿರುವೆನು".

"ನಿಮ್ಮ ಸಸಿಗಳನ್ನು ತಂದಿದ್ದೇನೆ".

ಕುಮುದನು ಸಂತೋಷಾತಿಶಯದಿಂದ ಕುಣಿದಾಡಿದನು. ಅವುಗಳ ನ್ನೇನು ಮಾಡಿದೆಯೆಂದು ಕೇಳಲು ಅವನಿಗಿನ್ನೂ ಧೈರ್ಯವುಂಟಾಗಿರಲಿಲ್ಲ. ಅವನು, "ಹಾಗಾದರೆ ಅವುಗಳನ್ನು ಭದ್ರವಾಗಿಟ್ಟುಕೊಂಡಿರುವೆಯಾ?" ಎಂದನು.

"ತಮಗೆ ಅವು ಪ್ರೀತಿದಾಯಕವಾದವುಗಳೆಂದೂ ಅದಕ್ಕಾಗಿ ಅವು ಗಳನ್ನು ನನಗೆ ಕೊಟ್ಟುದಾಗಿಯೂ ಹೇಳಿದ್ದಿರಲ್ಲವೆ?"

"ನಿಜ. ಆದರೆ ನಿನಗೆ ಅವುಗಳನ್ನು ಕೊಟ್ಟಿರುವೆನಾಗಿ ಅವು ನಿನ್ನವಾದುವು. ಅಲ್ಲವೆ?"

"ನೀವು ಮೃತಪಟ್ಟಿದ್ದರೆ ಅವು ನನ್ನವಾಗುತ್ತಿದ್ದುವು. ಅದೃಷ್ಟ ವಶಾತ್ ತಾವು ಬದುಕಿಬಂದಿರಿ. ಓಹೋ! ವಿನಯಸಿಂಹರನ್ನು ಎಷ್ಟು

ವಿಧವಾಗಿ ವಂದಿಸಿದ್ದೆನೆಂದು ಬಲ್ಲಿರಾ? ಅವರಿಗೆ ಎಷ್ಟು ಬಗೆಯಲ್ಲಿ ಸಂತೋಷವಾಗಲೆಂದು ದೇವದೇವನನ್ನು ಕುರಿತು ಪ್ರಾರ್ಥಿಸಿದೆನೋ ಅಷ್ಟು ಬಗೆಯಲ್ಲಿ ಅವರಿಗೆ ಆನಂದವು ಪ್ರಾಪ್ತವಾಗುವುದಾದರೆ ಅವರು ಪ್ರಪಂಚ ದಲ್ಲಿ ಎಲ್ಲರಿಗಿಂತಲೂ ಹೆಚ್ಚು ಸುಖಿಗಳಾಗುವರು. ನಾನು ರಮಾನಾಥ ಬಾಬುಗಳ ಗೀತಾ ಪುಸ್ತಕವನ್ನು ನೋಡಿದೊಡನೆಯೇ ತಮ್ಮ ಸಸಿಗಳನ್ನು ತಮಗೊಪ್ಪಿಸಬೇಕೆಂದು ನಿರ್ಧರಿಸಿದೆನು. ಆದರೆ ಹಾಗೆ ಮಾಡುವುದು ಹೇಗೆಂದರಿಯದೆ ತಲ್ಲಣಿಸುತ್ತಿದ್ದೆನು ಗವರ್ನರ ಬಳಿಗೆ ಹೋಗಿ ಮಣಿ ಪುರದ ಕಾರಾಗೃಹಕ್ಕೆ ನನ್ನ ತಂದೆಯನ್ನು ವರ್ಗಮಾಡಬೇಕೆಂದು ಕೇಳಲಿ ಎಂದು ಯೋಚಿಸುತ್ತಿದ್ದೆನು. ಆ ವೇಳೆಗೆ ತಮ್ಮ ಪತ್ರವು ಬಂದಿತು. ನಾನೂ ನಿಮ್ಮ ಸೇವಕಿಯೂ ಎಷ್ಟು ರೋದಿಸಿದೆವು ಬಲ್ಲಿರಾ? ನಿಮ್ಮ ಪತ್ರ ವನ್ನು ನೋಡುತ್ತಲೇ ನನ್ನ ಮನಸ್ಸು ಹೆಚ್ಚು ದೃಢವಾಯಿತು ಒಡನೆಯೇ ಇಲ್ಲಿಗೆ ಅನತಿದೂರದಲ್ಲಿರುವ ಹಳ್ಳಿಗೆ ಹೋದೆನು. ಉಳಿದುದನ್ನು ತಾವು ಬಲ್ಲಿರಿ".

"ಪುಷ್ಪಾ! ಹಾಗಾದರೆ ನನ್ನ ಪತ್ರವು ಬರುವುದಕ್ಕೆ ಮೊದಲೇ ನನ್ನನ್ನು ಭೇಟಿಮಾಡುವಯೋಚನೆ ಮಾಡಿದ್ದೆಯಾ?"

"ಯೋಚನೆಮಾಡಿದೆನೆ ಎನ್ನುವಿರಾ?—ನನಗೆ ಬೇರೆ ಯೋಚನೆಯೇ ಇರಲಿಲ್ಲ".

ಹೀಗೆ ಲಜ್ಜೆಯನ್ನು ಲಕ್ಷಿಸದೆ ಪ್ರೇಮಲತೆಯು ಪ್ರೇಮವನ್ನು ಪ್ರಕಾಶ ಪಡಿಸಿದುದನ್ನು ಕೇಳಿ ಕುಮುದನಿಗೆ ಅತೀವ ಸಂತೋಷವುಂಟಾಯಿತು. ಅವನು ಕಿಟಕಿಯ ಬಳಿ ಮುಖವನ್ನಿಟ್ಟನು. ಪುಷ್ಪಲತೆಯು ಸ್ವಲ್ಪ ಹಿಂದಕ್ಕೆ ಸರಿದು, "ನನಗೆ ಓದುವುದಕ್ಕೆ ಬರುವುದಿಲ್ಲ. ಪತ್ರಗಳನ್ನು ಓದಲು ಬರುವುದಿಲ್ಲವೆಂದು ಅನೇಕಬಾರಿ ಪಶ್ಚಾತ್ತಾಪ ಪಟ್ಟಿದ್ದೇನೆ. ಆದರೆ ನಿಮ್ಮ ಪತ್ರವನ್ನು ನೋಡಿದಾಗ ಉಂಟಾದಷ್ಟು ಪಶ್ಚಾತ್ತಾಪವು ಮತ್ತಾವಾಗಲೂ ಆಗಿರಲಿಲ್ಲ. ಪತ್ರವನ್ನು ಕೈಯಲ್ಲಿ ಹಿಡಿದಿದ್ದೆನು ಅದು ಇತರರೊಡನೆ ಮಾತನಾಡುತ್ತಿದ್ದಿತು. ಮೂಢಳಾದ ನನ್ನೊಡನೆ ಮೌನವಾಗಿರುತ್ತಿದ್ದಿತು" ಎಂದಳು.

"ಓಹೋ! ಓದಲು ಬಾರದೆಂದು ಅನೇಕವೇಳೆ ಪಶ್ಚಾತ್ತಾಪ ಪಟ್ಟಿರುವೆಯಾ? ಯಾವಸಂದರ್ಭಗಳಲ್ಲಿ ಹಾಗೆ ಮಾಡಿರುವೆ?

"ನನಗಾಗಿ ಬರೆಯಲ್ಪಟ್ಟ ಪತ್ರಗಳೆಲ್ಲವನ್ನೂ ಓದಲಾಗದೆಂದು ಪಶ್ಚಾತ್ತಾಪ ಪಟ್ಟಿದ್ದೇನೆ".

"ಹಾಗಾದರೆ ನಿನಗೆ ಅನೇಕ ಪತ್ರಗಳು ಬರುತ್ತಿದ್ದುವೆ?"

"ನೂರುಗಟ್ಟಲೆ ಬರುತ್ತಿದ್ದುವು".

"ನಿನಗಾರು ಬರೆಯುತ್ತಿದ್ದರು?"

"ಯಾರೆನ್ನುವಿರಾ? ಕಾರಾಗೃಹದ ಮುಂದೆ ಓಡಾಡುತ್ತಿದ್ದ ವಿದ್ಯಾರ್ಥಿಗಳು—ಅಲ್ಲಿ ಹಾದುಹೋಗುತ್ತಿದ್ದ ಎಲ್ಲ ಸೈನಿಕರು—ಎಲ್ಲ ಕಾರಕೂನರು—ನನ್ನ ಕಿಟಕಿಯ ಮೂಲಕ ನನ್ನನ್ನು ನೋಡಿದ ವ್ಯಾಪಾರಗಾರರು—ಎಲ್ಲರೂ ಬರೆಯುತ್ತಿದ್ದರು".

"ಅವೆಲ್ಲವನ್ನೂ ಎಲ್ಲಿಟ್ಟಿರುವೆ ಪುಷ್ಪಾ!"

"ಮೊದಲು ಮೊದಲು ನನ್ನ ಸ್ನೇಹಿತಳೊಬ್ಬಳನ್ನು ಕರೆದು ಎಲ್ಲವನ್ನೂ ನನ್ನ ಮುಂದೆ ಓದೆಂದು ಹೇಳುತ್ತಿದ್ದೆನು. ಅವಳು ಓದಿದುದನ್ನು ಕೇಳಲು ತಮಾಷೆಯಾಗಿರುತ್ತಿತ್ತು. ಈಗ ಕೆಲವು ದಿನಗಳಿಂದ—ಅಯ್ಯೋ! ಈ ಕಗ್ಗವನ್ನು ಕುರಿತು ಯೋಚಿಸುವವರಾರು?—ಎಲ್ಲವನ್ನೂ ಸುಟ್ಟುಹಾಕಿಬಿಡುತ್ತಿದ್ದೇನೆ".

ಕುಮುದನು ಸಂತೋಷದಿಂದಲೂ ಪ್ರೇಮದಿಂದಲೂ ಕೂಡಿದವನಾಗಿ, "ಈಗ ಕೆಲವು ದಿನಗಳಿಂದಲೆ!" ಎಂದು ಕೂಗಿಕೊಂಡನು.

ಪುಷ್ಪಳು ಲಜ್ಜಿತಳಾಗಿ ತಲೆ ತಗ್ಗಿಸಿದಳು. ಅವಳು ಅಪ್ರತಿಭಳಾಗಿ ನಿಂತಿದ್ದುದರಿಂದ ಕುಮುದನು ಸಣ್ಣ ಕಿಟಕಿಯಬಳಿ ಮುಖವಿಟ್ಟುದನ್ನು ಕಾಣಲಿಲ್ಲ. ಕುಮುದನ ಪ್ರೇಮವನ್ನು ತಿಳಿಯುತ್ತಲೇ ಅವಳ ಹೃದಯವು ಡವಡವನೆ ಬಡಿಯತೊಡಗಿತು. ಅವಳು ಒಂದು ಕ್ಷಣಮಾತ್ರ ಹಾಗೆ ನಿಂತಿದ್ದು ಅಲ್ಲಿಂದ ಸರಸರನೆ ಓಡಿಹೋದಳು. ಕುಮುದನು ಒಂಟಿಯಾಗಿ ನಿಲ್ಲಬೇಕಾಯಿತು.

ತಟ್ಟನೆ ಓಡಿಹೋಗುವ ವೇಗದಲ್ಲಿ ಕುಮುದನ ಸಸಿಗಳನ್ನು ಕೊಡುವ ವಿಚಾರವನ್ನೇ ಪುಷ್ಪಲತೆಯು ಮರೆತುಹೋದಳು!

# ಷೋಡಶ ಪರಿಚ್ಛೇದ

## ಗುರು ಶಿಷ್ಯರು

ಪುಷ್ಪಲತೆಗೆ ಬಂದಿಯಮೇಲಿದ್ದಷ್ಟು ದಯೆಯು ಕಾಳೀಚರಣ<br>ಗಿರಲಿಲ್ಲ. ಕಾರಾಗಾರದ ಭವನದಲ್ಲೆಲ್ಲಾ ಒಟ್ಟು ಐದುಜನ ಬಂದಿಗಳಿದ್ದರು ಆದುದರಿಂದ ಅವನ ಕೆಲಸವು ಕಷ್ಟಕರವಾಗಿರಲಿಲ್ಲ ಅವನು ಬಹ ದಿನಗಳಿಂದ ಕೆಲಸಮಾಡಿದ್ದನಾಗಿ ಈಗ ಸುಲಭಸಾಧ್ಯವಾದ ಕಾರ್ಯವನ್ನು ಹೊಂದಿದ್ದನು ಆದರೆ ಅವನು ತನ್ನ ಪ್ರತಿಷ್ಠೆಯಿಂದ ತನ್ನ ಕೆಲಸವನ್ನು ಬಹಳ ದೊಡ್ಡದಾಗಿ ಮಾಡಿಕೊಂಡು ತನ್ನ ಪದವಿಯು ಅತ್ಯುನ್ನತವಾ ಅಧಿಕಾರವೆಂದು ಭಾವಿಸಿಕೊಂಡಿದ್ದನು. ಅದರಂತೆಯೇ ವರ್ತಿಸಲು ಪ್ರಾರಂಭಿಸಿದ್ದನು. ಕುಮುದಚಂದ್ರನು ಮಹಾಪರಾಧಿಯೆಂದು ಕಾಳಿ ಚರಣನು ನಂಬಿದ್ದನು. ಆದುದರಿಂದ ಅವನೇ ಎಲ್ಲ ಬಂದಿಗಳಿಗಿಂತಲು ಭಯಾನಕ ಖೈದಿಯೆಂದು ಜೈಲರನು ತಿಳಿದಿದ್ದನು ಹೀಗಾಗಿ ಅವನ ಕುಮುದನ ಚಲನವಲನಗಳನ್ನು ಅತಿಜಾಗರೂಕತೆಯಿಂದ ಪರೀಕ್ಷಿ ತೊಡಗಿದನು. ಕುಮುದನೊಡನೆ ಕಠಿಣವಾಗಿಯೇ ಮಾತನಾಡತೊಡ ದನು. ವಿನಯಸಿಂಹನಂತಹ ದಯಾಮಯ ಗವರ್ನರನ ಮೇಲೆ ಭೀಕ ವಾದ ದಂಗೆಯನ್ನೆಬ್ಬಿಸಿದುದಕ್ಕಾಗಿ ಬಂದಿಯನ್ನು ಬಹಳ ತುಚ್ಛವಾ ನೋಡುತ್ತ ಅವನನ್ನು ಅನೇಕವಿಧಗಳಲ್ಲಿ ಶಿಕ್ಷಿಸತೊಡಗಿದನು.

ಕಾಳೀಚರಣನು ದಿನಕ್ಕೆ ಮೂರುಬಾರಿ ಕುಮುದನ ಕಾರಾಗೃಹಕ ಬರುತ್ತಿದ್ದನು ಅಪ್ರಕೃತವಾದ ಅನಿರೀಕ್ಷಿತವಾದ ಅಪರಾಧವನ್ನು ಅವನ ಮಾಡುವುದನ್ನು ಕಂಡುಹಿಡಿದುಬಿಡಬೇಕೆಂದು ಜೈಲರನು ಅಕಸ್ಮಾತ್ತಾ ಕಾರಾಗೃಹದ ಬಳಿಗೆ ಬಂದುಬಿಡುತ್ತಿದ್ದನು. ಆದರೆ ಕುಮುದನು ಪತ್ರ ವ್ಯವಹಾರವನ್ನು ನಿಲ್ಲಿಸಿಬಿಟ್ಟಿದ್ದನು. ಏಕೆಂದರೆ ಅವನಾರಿಗೆ ಕಾಗದವನ ಬರೆಯಲಿಷ್ಟಪಡುತ್ತಿದ್ದನೋ ಅಂತಹವರು ಅವನಿಗೆ ಅತಿ ಸಮೀಪದಲ್ಲಿಯ ಇದ್ದರು. ಈ ಸಮಯದಲ್ಲಿ ಕುಮುದಚಂದ್ರನಿಗೆ ಪೂರ್ಣಸ್ವಾತಂತ್ರ ವನ್ನು ಕೊಟ್ಟು ಎಲ್ಲಿಗೆ ಬೇಕಾದರೂ ಹೋಗೆಂದು ಹೇಳಿದ್ದರೆ, ತನ್ನ ಸ ಗಳೂ ತನ್ನ ಪ್ರಿಯತಮೆಯೂ ಇದ್ದ ಕಾರಾಗೃಹದ ಭವನದಲ್ಲಿಯ

ಅವನು ನಿಂತುಬಿಡಲಿಷ್ಟಪಡುತ್ತಿದ್ದನು. ತನ್ನ ಪುಷ್ಪಲತೆಯೂ ತನ್ನ ಕೃಷ್ಣಪುಷ್ಪಗಳ ಸಸಿಗಳೂ ಇಲ್ಲದ ಪ್ರಪಂಚದ ಬೇರೊಂದು ಸ್ಥಳದಲ್ಲಿರಲು ಅವನೆಂದಿಗೂ ಸಮ್ಮತಿಸುತ್ತಿರಲಿಲ್ಲ.

ಪುಷ್ಪಲತೆಯು ತನ್ನ ವಚನದಂತೆ ಪ್ರತಿರಾತ್ರಿಯೂ ಬಂದು ಬಂದಿಯನ್ನು ನೋಡುತ್ತಿದ್ದಳು.

ಪೂರ್ವಪರಿಚ್ಛೇದದಲ್ಲಿ ವರ್ಣಿತವಾದ ವಿಷಯಗಳು ನಡೆದ ಮಾರನೆಯ ದಿನ ಪುಷ್ಪಲತೆಯು ಜಾಗರೂಕಳಾಗಿ ರಹಸ್ಯವಾಗಿ ಕುಮುದನ ಕಾರಾಗೃಹದ ಬಳಿಗೆ ಹೋದಳು. ಕುಮುದನಿಗೆ ಬಾಗಿಲಿನ ಕಿಟಕಿಯ ಮೂಲಕ ಅವನ ಮೂರು ಸಸಿಗಳನ್ನು ಕೊಡಲು ಪ್ರಯತ್ನಿಸಿದಳು. ಆ ಸಸಿಗಳು ಈಗಲೂ ಮೊದಲಿದ್ದ ಕಾಗದದಲ್ಲಿಯೇ ಇದ್ದುವು.

ಕುಮುದನು ಸಸಿಗಳನ್ನು ತೆಗೆದುಕೊಳ್ಳಲಿಲ್ಲ ಅದನ್ನು ಕಂಡು ಪುಷ್ಪಲತೆಗೆ ಆಶ್ಚರ್ಯವಾಯಿತು ಅವನು ಸಸಿಗಳ ವಿಚಾರವಾಗಿ ಅನೇಕ ವಿಧವಾಗಿ ಯೋಚಿಸುತ್ತಿದ್ದನು. ಅವನು ಪುಷ್ಪಲತೆಯನ್ನು ನೋಡಿ ಹೇಳತೊಡಗಿದನು—"ಕೇಳು ಪುಷ್ಪಾ! ನಾವು ನಮ್ಮ ಆಸ್ತಿಯೆಲ್ಲವನ್ನೂ ಒಂದೇ ಹಡಗಿನಲ್ಲಿ ಇಡಬಾರದು ಇದುವರೆಗೆ ಕರಿಯಟ್ಯೂಲಿಪ್‌ಗಳನ್ನು ತಯಾರಿಸುವುದೇ ದುಸ್ತರವೆಂದು ಎಲ್ಲರೂ ಭಾವಿಸಿರುವರು. ನಾವು ಆ ಕೆಲಸವನ್ನು ಸಾಧಿಸಿ ಕೀರ್ತಿಪಡೆಯಬೇಕಲ್ಲವೆ? ಆದುದರಿಂದ ನಾವು ಎಷ್ಟು ಜಾಗರೂಕರಾಗಿದ್ದರೆ ಅಷ್ಟು ಒಳ್ಳೆಯದು. ನಾವು ಯಾವವಿಧದಲ್ಲಿಯೂ ಪಶ್ಚಾತ್ತಾಪ ಪಡುವಂತಿರಬಾರದು. ನಾವೇನುಮಾಡಬೇಕೆನ್ನುವುದನ್ನು ಹೇಳುತ್ತೇನೆ ಕೇಳು".

ಪುಷ್ಪಲತೆಗೆ ಪುಷ್ಪಗಳ ಬೆಳವಣಿಗೆಯು ಹೆಚ್ಚು ರುಚಿಕರವಾಗಿರಲಿಲ್ಲವಾದರೂ ಪ್ರಿಯತಮನ ಸಂತೋಷಕ್ಕಾಗಿ ಎಲ್ಲವನ್ನೂ ಶ್ರದ್ಧೆಯಿಂದ ಕೇಳತೊಡಗಿದಳು. ಅವನು ಪುನಃ ಹೇಳತೊಡಗಿದನು—"ಪುಷ್ಪಾ! ನಿಮ್ಮ ಕಾರಾಗೃಹದ ಭವನಕ್ಕೆ ಸೇರಿದಂತೆ ಉದ್ಯಾನವೊಂದಾಗಲಿ—ಅಂಗಳವೊಂದಾಗಲಿ—ಕಡೆಗೆ ಮಹಡಿಯೊಂದಾಗಲಿ ಇರುವುದಲ್ಲವೆ?"

"ನಮ್ಮಲ್ಲಿ ಒಳ್ಳೆಯ ಉದ್ಯಾನವಿದೆ. ಅದರಲ್ಲಿ ಒಳ್ಳೆಯ ಮರಗಳಿವೆ".

"ಆ ಭೂಮಿಯಿಂದ ಸ್ವಲ್ಪ ಮಣ್ಣನ್ನು ತರುವೆಯಾ? ಅದನ್ನು ಪರೀಕ್ಷಿಸಬೇಕು".

"ನಾಳೆಯದಿನ ತರುತ್ತೇನೆ".

"ಸ್ವಲ್ಪ ಮಣ್ಣನ್ನು ಬಿಸಿಲಿರುವ ಪ್ರದೇಶದಿಂದಲೂ ಸ್ವಲ್ಪ ಮಣ್ಣನ್ನು ನೆರಳಿರುವ ಸ್ಥಳದಿಂದಲೂ ತರಬೇಕು. ಮಣ್ಣು ಒಣಗಿರುವಾಗಲೂ ಹಸಿಯಾಗಿರುವಾಗಲೂ ಹೇಗಿರುವುದೆಂದು ಪರೀಕ್ಷಿಸಬೇಕು".

"ಖಂಡಿತವಾಗಿ ತರುತ್ತೇನೆ".

"ಸರಿಯಾದ ಭೂಮಿಯನ್ನೂ ಅದರ ಮಣ್ಣನ್ನೂ ಪರೀಕ್ಷಿಸಿದ ಬಳಿಕ ನಮ್ಮ ಮೂರು ಸಸಿಗಳನ್ನೂ ವಿಭಾಗಮಾಡಬೇಕು. ನೀನು ಒಂದು ಸಸಿಯನ್ನು ತೆಗೆದುಕೊಂಡು ಹೋಗಿ ನೆಡಬೇಕು. ನಾನು ಒಪ್ಪಿದ ಭೂಮಿಯಲ್ಲಿ ನಾನು ಹೇಳಿದ ದಿನ ನೆಡಬೇಕು. ನಾನು ಹೇಳಿದಂತೆ ಅದನ್ನು ಬೆಳಸಿದರೆ ಅದು ಖಂಡಿತವಾಗಿ ಹೂ ಬಿಡುವುದು".

"ಅದನ್ನು ಒಂದು ಕ್ಷಣವೂ ಬಿಡದೆ ನೋಡುತ್ತಿರುತ್ತೇನೆ".

"ನನಗೆ ಮತ್ತೊಂದು ಸಸಿಯನ್ನು ಕೊಡು. ಅದನ್ನು ನನ್ನೀ ಕಾರಾಗಾರದಲ್ಲಿ ಬೆಳಸುತ್ತೇನೆ. ನಿನ್ನನ್ನು ನೋಡಲಾಗದಿರುವ ಸಮಯ ವನ್ನು ಕಳೆಯಲು ನನಗೆ ಅನುಕೂಲವಾದಂತಾಗುವುದು. ನನ್ನ ಸಸಿಯು ಬೆಳೆಯುವುದೆಂಬ ಆಶೆಯೇನೂ ನನಗೆ ಹೆಚ್ಚಾಗಿಲ್ಲ. ನನ್ನ ಸ್ವಕಾರ್ಯ ದುರಂಧತೆಗೆ ಈ ಸಸಿಯು ಬಲಿಯಾಗುವುದೆಂದು ತೋರುವುದು. ಹೇಗಾದರೂ ಆಗಲಿ. ಒಂದೊಂದುವೇಳೆ ಇಲ್ಲಿಗೂ ಸ್ವಲ್ಪ ಬಿಸಿಲು ಬರುವುದು. ಆದಷ್ಟುಮಟ್ಟಿಗೆ ನನ್ನ ಕಾರಾಗಾರವು ಶಾಖವಾಗಿರುವಂತೆ ಮಾಡುವೆನು. ಕಡೆಯ ಸಸಿಯನ್ನು ನಾವು—ಅಂದರೆ ನೀನು—ಭದ್ರ ಪಡಿಸಿಟ್ಟಿರಬೇಕು. ಮೊದಲನೆಯ ಸಸಿಯೂ ಎರಡನೆಯ ಸಸಿಯೂ ಕೆಟ್ಟುಹೋದರೆ ಮೂರನೆಯದಾದರೂ ಹೂ ಬಿಡುವಂತೆ ನೋಡಿಕೊಳ್ಳ ಬೇಕು. ಪುಷ್ಪಾ! ಹೀಗೆ ಮಾಡುವುದರಿಂದ ನಮಗೆ ಲಕ್ಷರೂಪಾಯಿಗಳ ಆಸ್ತಿಯು ಸಿಕ್ಕುವುದು ಕಷ್ಟವಾಗುವುದಿಲ್ಲ. ಆಗ ನಿನಗೆ ವಿವಾಹವಾಗಲು ಅನುಕೂಲವಾಗುವುದು. ನಮ್ಮ ಕಾರ್ಯವು ಸಫಲವಾದರೆ ಬಹಳ ಸಂತೋಷವಾಗುವುದಲ್ಲವೆ!"

"ಈಗೆಲ್ಲವೂ ತಿಳಿಯಿತು. ನಾಳೆಯದಿನ ಮಣ್ಣನ್ನು ತರುತ್ತೇನೆ. ನಿಮ್ಮ ಸಸಿಗೂ ನನ್ನ ಸಸಿಗೂ ಸರಿಯಾದುದನ್ನು ನೋಡಿ ಹೇಳಿರಿ. ನಿಮ್ಮ ಸಸಿಯ ಮಣ್ಣನ್ನು ಸ್ವಲ್ಪಸ್ವಲ್ಪವಾಗಿ ಅನೇಕಬಾರಿ ತರುತ್ತೇನೆ. ಒಂದೇ ಬಾರಿ ಹೆಚ್ಚಾಗಿ ತರಲು ಅನುಕೂಲವಾಗದು".

"ಈ ಕಾರ್ಯದಲ್ಲಿ ಅವಸರಪಡಬೇಕಾದುದೇನೂ ಇಲ್ಲ. ನಮ್ಮ ಸಸಿಗಳನ್ನು ನೆಡಲು ಇನ್ನೂ ಒಂದು ತಿಂಗಳ ಅವಕಾಶವಿರುವುದು. ಆದುದರಿಂದ ಇನ್ನೂ ವ್ಯವಧಾನವು ಬಹಳವಾಗಿರುವುದು ನಾನು ಹೇಳಿದಂತೆ ಮಾತ್ರ ಸಸಿಯನ್ನು ಬೆಳಸಬೇಕು".

"ಖಂಡಿತವಾಗಿ ಹಾಗೆಯೇ ಮಾಡುತ್ತೇನೆ".

"ಸಸಿಯನ್ನು ನೆಟ್ಟಮೇಲೆ ನನಗೆ ಅದರ ವಿಷಯವನ್ನು ಮೇಲಿಂದ ಮೇಲೆ ಹೇಳುತ್ತಿರಬೇಕು—ವಾಯುಗುಣವು ಹೇಗಿರುವುದು-ಯಾರಾದರೂ ಪಾತಿಗಳಲ್ಲಿ ಕಾಲಿಡುವರೆ-ಪಕ್ಕದಲ್ಲಿರುವ ಭೂಮಿಯಲ್ಲಿ ಹೆಜ್ಜೆಗಳ ಗುರುತುಗಳು ಸಿಕ್ಕುವುವೆ?—ಇವೆಲ್ಲವಿಷಯಗಳನ್ನೂ ತಿಳಿಸಬೇಕು. ರಾತ್ರಿಯಲ್ಲಿ ಉದ್ಯಾನವನದಲ್ಲಿ ಬೆಕ್ಕುಗಳು ಓಡಾಡುವುವೆ ಎಂದು ತಿಳಿಯಬೇಕು. ರತ್ನಗಿರಿಯಲ್ಲಿದ್ದಾಗ ಎರಡು ಬೆಕ್ಕುಗಳು ನನ್ನ ಉದ್ಯಾನವನದಲ್ಲಿ ಬಹಳ ತೊಂದರೆಯನ್ನುಂಟುಮಾಡಿ ನನ್ನ ಸಸ್ಯಭೂಮಿಗಳನ್ನು ಕೆಡಿಸಿದ್ದುವು".

"ಎಲ್ಲವನ್ನೂ ಸರಿಯಾಗಿನೋಡಿ ತೊಂದರೆಯಾಗದಂತೆ ವ್ಯವಸ್ಥೆ ಮಾಡುತ್ತೇನೆ".

"ಚಂದ್ರನ ಬೆಳಕಿರುವಾಗ ನಿನ್ನ ಉದ್ಯಾನವನ್ನೇನಾದರೂ ನೋಡಿರುವೆಯಾ, ಪುಷ್ಪಾ?"

"ನಾನು ಮಲಗುವ ಕೊಟಡಿಯಿಂದ ನೋಡಿದರೆ ಉದ್ಯಾನವು ಕಾಣುವುದು"

"ಸರಿ. ಬೆಳದಿಂಗಳಲ್ಲಿ ಗೋಡೆಗಳಿಂದ ಇಲಿಗಳೇನಾದರೂ ಬರುವುವೆ ನೋಡು. ಇಲಿಗಳು ಎಲ್ಲವನ್ನೂ ಕತ್ತರಿಸಿಹಾಕಿಬಿಡುವುವು".

"ನೋಡುತ್ತೇನೆ—ಬೆಕ್ಕುಗಳಾಗಲಿ—ಇಲಿಗಳಾಗಲಿ—ಇದ್ದರೆ "

"ನನಗೆ ಹೇಳುವೆಯಾ?—ಸರಿ. ಅಲ್ಲದೆ—ಬೆಕ್ಕುಗಳಿಗಿಂತಲೂ ಇಲಿಗಳಿಗಿಂತಲೂ ಭೀಕರವಾಗಿರುವ ಪ್ರಾಣಿಯೊಂದಿದೆ".

"ಅದಾವ ಪ್ರಾಣಿ?"

"ಮನುಷ್ಯನೆಂಬ ಪ್ರಾಣಿ! ಪುಷ್ಪಾ! ಮಾನವನು, ಒಂದು ರೂಪಾಯನ್ನು ಕೂಡ ಕದ್ದು ಕಾರಾಗೃಹವನ್ನು ಸೇರಿರುವುದನ್ನು ಬಲ್ಲೆಯಾ? ಅಂತಹುದರಲ್ಲಿ ಅವನು ಲಕ್ಷರೂಪಾಯಿಗಳನ್ನು ಕದಿಯಲು ಹಿಂತೆಗೆಯುವನೆ?"

"ಉದ್ಯಾನವನ್ನು ನಾನು ಮಾತ್ರ ಪ್ರವೇಶಿಸುವೆನು. ಮತ್ತಾರೂ ಅಲ್ಲಿಗೆ ಬರುವುದಿಲ್ಲ".

"ನಿನ್ನನ್ನು ಎಷ್ಟು ಹೊಗಳಿದರೂ ಸಾಲದು, ಪುಷ್ಪಾ! ನನ್ನ ಆನಂದವೆಲ್ಲವೂ ನಿನ್ನಿಂದಲೇ ಬರಬೇಕಾಗಿರುವುದು".

ಪುಷ್ಪಲತೆಯು ಕೈನೀಡಿದಳು. ಅದರಲ್ಲಿ ಸಸಿಯೊಂದಿದ್ದಿತು. ಕುಮುದನು ಪ್ರೀತಿಪುರಸ್ಸರವಾಗಿ ಅವಳ ಕೈ ಬೆರಳುಗಳನ್ನು ಚುಂಬಿಸಿದನು. ಅವಳ ಅನುಪಮರೂಪರಾಶಿಗಾಗಿ ಅವಳ ಕೈಯನ್ನು ಚುಂಬಿಸಿದನೋ? ಅಥವಾ ಆ ಕೈಯಲ್ಲಿ ಅಮೂಲ್ಯವಾದ ಸಸಿಯಿತ್ತೆಂದು ಆ ಕೈಯನ್ನು ಚುಂಬಿಸಿದನೋ? ಆ ವಿಷಯವನ್ನು ನಮಗಿಂತ ಹೆಚ್ಚು ಬುದ್ಧಿಯುಳ್ಳವರು ನಿರ್ಧರಿಸಲೆಂದು ಬಿಟ್ಟು ಸೌಖ್ಯವಾಗಿರುವೆವು.

ಪುಷ್ಪಲತೆಯು ಉಳಿದೆರಡು ಸಸಿಗಳನ್ನೂ ವಕ್ಷಸ್ಥಳಕ್ಕಪ್ಪಿಕೊಂಡು ಹೊರಟುಹೋದಳು. ಆ ಸಸಿಗಳು ಅತ್ಯಮೂಲ್ಯವಾದ ಕೃಷ್ಣಪುಷ್ಪಗಳನ್ನು ಬಿಡುವುವೆಂದು ವಕ್ಷಸ್ಥಳಕ್ಕಪ್ಪಿಕೊಂಡಳೋ? ಅಥವಾ ಅವು ತನ್ನ ಪ್ರಿಯತಮನಿಂದ ಬಂದುವೆಂದು ವಕ್ಷಸ್ಥಳಕ್ಕಪ್ಪಿಕೊಂಡಳೋ? ಈ ವಿಷಯವನ್ನು ಮೇಲೆ ಹೇಳಿದ ಸಮಸ್ಯೆಗಿಂತ ಹೆಚ್ಚು ಸುಲಭವಾಗಿ ನಿರ್ಧರಿಸಬಹುದೆಂದು ತೋರುವುದು. ಅದು ಹೇಗಾದರೂ ಇರಲಿ. ಕುಮುದನಿಗಂತೂ ಅಂದಿನಿಂದ ಜೀವನವು ಸುಖಮಯವಾಗತೊಡಗಿದುದು.

ಪುಷ್ಪಲತೆಯು ಕುಮುದನಿಗೆ ಒಂದು ಸಸಿಯನ್ನು ಕೊಟ್ಟಿದ್ದಳೆಂದು ಹಿಂದೆಯೇ ಹೇಳಿದ್ದೇವೆ. ಅವಳು ಪ್ರತಿದಿನವೂ ಉದ್ಯಾನದಿಂದ ತನ್ನ ಕೈಯಲ್ಲಿ ಸ್ವಲ್ಪ ಮಣ್ಣನ್ನು ತರುತ್ತಿದ್ದಳು. ಕುಮುದನು ಅದನ್ನು ಪರೀಕ್ಷಿಸಿ ಉತ್ತಮವಾಗಿದೆಯೆಂದು ತಿಳಿದು ತನ್ನ ಸಸಿಗಾಗಿ ಉಪಯೋಗಿಸುತ್ತಿದ್ದನು. ಅವನು ತನಗೆ ಕೊಡಲ್ಪಟ್ಟಿದ್ದ ಹೂಜಿಯೊಂದನ್ನು ಉಪಾಯವಾಗಿ ಒಡೆದು

ಪುಷ್ಪಕುಂಡವೊಂದನ್ನು ತಯಾರಿಸಿದನು. ಅದರಲ್ಲಿ ಉದ್ಯಾನದ ಮಣ್ಣನ್ನು ಸ್ವಲ್ಪವೂ ನದಿಯಬಳಿ ಇದ್ದ ಒಣಗಿದ ಮಣ್ಣನ್ನು ಸ್ವಲ್ಪವೂ ಮಿಶ್ರಮಾಡಿದನು. ಇದು ಸಸಿಗೆ ಉತ್ತಮವಾದ ಭೂಮಿಯಂತಾಯಿತು. ಅವನು ಏಪ್ರಿಲ್ ತಿಂಗಳ ಮೊದಲಭಾಗದಲ್ಲಿ ತನ್ನ ಸಸಿಯನ್ನು ಆ ಹೂಜಿಯಲ್ಲಿ ನೆಟ್ಟನು.

ಪುಷ್ಪಲತೆಯು ಪ್ರತಿದಿನವೂ ಬಂದು ಕುಮುದನೊಡನೆ ಸಂಭಾಷಣೆ ಮಾಡುತ್ತಿದ್ದಳು. ಸಂಭಾಷಣೆಯಲ್ಲಿ ಪುಷ್ಪಗಳ ಪುರೋಭಿವೃದ್ಧಿಯ ವಿಚಾರವೇ ಮುಖ್ಯಸ್ಥಾನವನ್ನು ಪಡೆದಿದ್ದಿತು. ಪುಷ್ಪಳಿಗೆ ಪುಷ್ಪಗಳ ವಿಚಾರವಾಗಿ ಪಾರಪ್ರವಚನವಾಗುತ್ತಿದ್ದಿತು. ಆದರೂ ಸರ್ವದಾ ಪುಷ್ಪಗಳ ವಿಷಯವನ್ನೇ ಮಾತನಾಡಲಾಗುವುದೆ? ಅವರು ಇತರವಿಷಯಗಳ ಮೇಲೂ ಸಂಭಾಷಣೆ ನಡೆಸತೊಡಗಿದರು. ಪುಷ್ಪಗಳ ವಿಷಯಮಾತ್ರವಲ್ಲದೆ ಇನ್ನೂ ಅನೇಕ ವಿಷಯಗಳ ವಿಚಾರವಾಗಿ ಮಾತನಾಡಬಹುದೆಂದು ಆಗ ಕುಮುದನಿಗೆ ಅರಿವುಂಟಾಗತೊಡಗಿತು. ಇಂತಹ ಸಂಭಾಷಣೆಯಲ್ಲಿ ಒಂದು ದುಃಖಕರವಾದ ವಿಷಯಕ್ಕೆ ಮಾತ್ರ ಕುಮುದನು ಅನೇಕಬಾರಿ ಲಕ್ಷ್ಯಕೊಡುತ್ತಿದ್ದನು. ಪುಷ್ಪಲತೆಯು ತನ್ನ ತಂದೆಯ ಮನಸ್ಸಿನಂತೆಯೇ ನಡೆಯಬೇಕಲ್ಲವೆ? ಅವನ ಮನಸ್ಸು ಪ್ರವರ್ತಿಸುವ ರೀತಿಯಮೇಲೆ ಕುಮುದನ ಸೌಖ್ಯವು ನಿಂತಿದ್ದುದು. ಈ ವಿಷಯವು ಬಂದಿಗೆ ಬಹಳ ದುಃಖದಾಯಕವಾಗಿದ್ದಿತು. ಕಾಳೀಚರಣನು ಮಣಿಪುರದ ಮೇಲೆ ಬೇಸರಗೊಂಡು ಹೊರಟರೇನುಗತಿ? ಇಲ್ಲಿನ ಹವಾಗುಣವು ಹಿತಕರವಲ್ಲವೆಂದು ಹೊರಟುಬಿಟ್ಟರೇನುಮಾಡುವುದು? ಇಲ್ಲಿನ ಮದ್ಯಕ್ಕಿಂತ ಬೇರೆಕಡೆಯ ಸುರೆಯು ಹೆಚ್ಚು ಹಿತಕರವೆಂದವನಿಗೆ ತೋರಿಬಿಟ್ಟರೇನುಗತಿ? ಆ ಸಮಯದಲ್ಲಿ ಕುಮುದನೂ ಪುಷ್ಪಳೂ ಅಗಲಬೇಕಾಗಿ ಬರುವುದು. ಈ ವಿಷಯವನ್ನು ಯೋಚಿಸಿ ಕುಮುದನು, ತನ್ನ ಪ್ರಿಯತಮೆಗೆ ಹೇಳತೊಡಗಿದನು—"ಪುಷ್ಪಾ! ಅಂತಹ ಸಂದರ್ಭದಲ್ಲಿ ಏನುಮಾಡುವುದು? ನಿನಗೆ ಓದಲು ಬರುವುದಿಲ್ಲ. ನಾನು ಬರೆದುದನ್ನು ನೀನು ಓದಲಾರೆ. ನಿನ್ನ ಯೋಚನೆಗಳನ್ನು ನನಗೆ ಬರೆಯಲಾರೆ".

ಅಂತಹ ಸಂದರ್ಭವೊದಗಬಹುದೆಂದು ಪುಷ್ಪಲತೆಯೂ ಕುಮುದ ನಷ್ಟೇ ಭೀತಿಗೊಂಡಿದ್ದಳು. ಅವಳು, "ಇರಲಿ ನಿತ್ಯವೂ ನಮಗೆ ಒಂದು ಗಂಟೆಯ ಸಮಯವಿದೆ. ಅದನ್ನು ಒಳ್ಳೆಯ ರೀತಿಯಲ್ಲಿ ಉಪಯೋಗಿ ಸೋಣ" ಎಂದಳು.

"ಅದೇಕೆ–ಈಗ ಒಳ್ಳೆಯ ರೀತಿಯಲ್ಲಿ ಉಪಯೋಗಿಸುತ್ತಿಲ್ಲವೇನು?"

"ಇನ್ನೂ ಹೆಚ್ಚು ಉಪಯೋಗಕರವಾದ ರೀತಿಯಲ್ಲಿ ಉಪಯೋಗಿ ಸೋಣ. ನನಗೆ ಓದುವುದಕ್ಕೂ ಬರೆಯುವುದಕ್ಕೂ ಕಲಿಸಿರಿ. ನಿಮ್ಮ ಪಾಠಗಳನ್ನು ಸರಿಯಾಗಿ ಗಟ್ಟಿಮಾಡುತ್ತೇನೆ ಹಾಗೆ ನಾನು ಕಲಿತು ದಾದರೆ ನಮ್ಮ ಇಷ್ಟವಿಲ್ಲದೆ ನಾವು ಅಗಲಲಾಗುವುದಿಲ್ಲ".

"ಓಹೋ! ಹಾಗಾದರೆ ನಾವು ಸರ್ವಕಾಲದಲ್ಲಿಯೂ ಸುಖವಾ ಗಿರುವೆವು!"

ಪುಷ್ಪಲತೆಯು ನಕ್ಕು ಹೇಳತೊಡಗಿದಳು—"ನೀವು ಯಾವಾಗಲೂ ಕಾರಾಗೃಹದಲ್ಲಿಯೇ ಇರುವಿರಾ? ರಾಜಾವಿನಯಸಿಂಹನು ನಿಮ್ಮ ಪ್ರಾಣ ಗಳನ್ನುಳಿಸಿದಂತೆಯೇ ಬಂಧವಿಮೋಚನರನ್ನಾಗಿಯೂ ಮಾಡಲಾರನೆ? ಆಗ ನೀವು ನಿಮ್ಮ ಆಸ್ತಿಯನ್ನು ಪುನಃ ಹೊಂದಿದವರಾಗಿ ಐಶ್ವರ್ಯವಂತ ರಾಗುವಿರಿ ಆಗ ನೀವು ಕುದುರೆಯ ಗಾಡಿಯಲ್ಲಿ ಹೋಗುವಿರಿ ಬಡ ಪುಷ್ಪಲತೆಯನ್ನು ಆ ಸಮಯದಲ್ಲಿ ಲಕ್ಷಿಸುವಿರಾ? ವಧೆಮಾಡುವವ ನಂತಿರುವ ಜೈಲರನ ಪುತ್ರಿಯನ್ನು ಲಕ್ಷಿಸುವಿರಾ?"

ಕುಮುದನು ಅಂತಹ ಕೆಟ್ಟ ಯೋಚನೆಯನ್ನೇ ಮಾಡಬೇಡವೆಂದು ಹೇಳಲು ಹೋದನು. ಅವಳು ಅಷ್ಟರಲ್ಲಿ ನಗುತ್ತ, "ನಿಮ್ಮ ಸಸಿಯು ಹೇಗಿದೆ?" ಎಂದಳು.

ಸಸಿಯ ವಿಷಯವನ್ನೆತ್ತುತ್ತಲೇ ಕುಮುದನು ಮತ್ತೆಲ್ಲವಿಷಯವನ್ನೂ ಮರೆಯುವನೆಂದು ಅವಳಿಗೆ ತಿಳಿದಿದ್ದಿತು. ಅದರ ವಿಷಯವನ್ನೆತ್ತಿದರೆ ಅವನು ಪುಷ್ಪಳನ್ನೂ ಮರೆತುಬಿಡುತ್ತಿದ್ದನು ಅವನು ಒಡನೆಯೇ, "ನನ್ನ ಸಸಿಯು ಬಹಳ ಚೆನ್ನಾಗಿ ಬೆಳೆಯುತ್ತಿದೆ. ಅದರ ಮೈಕಟ್ಟು ಕಪ್ಪಾಗುತ್ತಿದೆ. ಮೊಳಕೆಯು ಹೊರಟಿದೆ. ಇನ್ನು ಎಂಟುದಿನಗಳಲ್ಲಿ— ಅಥವಾ ಇನ್ನೂ ಬೇಗನೆ ಮೊಗ್ಗುಗಳು ಕಾಣುವುವು" ಎಂದನು

"ನಾನು ನೀವು ಹೇಳಿದಂತೆಯೇ ಬಹಳಮಟ್ಟಿಗೆ ಕೆಲಸ ಮಾಡಿದ್ದೇನೆ".

"ಪುಷ್ಪಾ! ನೀನೇನು ಮಾಡಿರುವೆ. ಎಲ್ಲವನ್ನೂ ಹೇಳು".

ಕುಮುದನು ಸ್ವಲ್ಪ ಸಮಯಕ್ಕೆ ಮುಂಚೆ ಪುಷ್ಪಳಲ್ಲಿ ಎಷ್ಟು ಪ್ರೀತಿಯನ್ನು ಪ್ರಕಟಿಸಿದ್ದನೋ ಈಗ ಪುಷ್ಪಗಳಮೇಲೆಯೂ ಅಷ್ಟೇ ಪ್ರೇಮವನ್ನು ಪ್ರಕಾಶಪಡಿಸುತ್ತಿದ್ದನು. ಹೀಗೆ ತನ್ನಮೇಲೂ ಪುಷ್ಪಗಳಮೇಲೂ ಪ್ರಕಟಿತವಾದ ದ್ವಂದ್ವಪ್ರೇಮವನ್ನು ಕಂಡು ಪುಷ್ಪಲತೆಯು ಕಿರುನಗೆಯನ್ನು ತೋರುತ್ತ ಹೇಳತೊಡಗಿದಳು—"ನೀವು ಹೇಳಿದಂತೆ ಸಸ್ಯಭೂಮಿಯನ್ನು ಸೃಷ್ಟಿಸಿದ್ದೇನೆ. ಸಮೀಪದಲ್ಲಿ ಗೋಡೆಗಳಾಗಲಿ ವೃಕ್ಷಗಳಾಗಲಿ ಇಲ್ಲದ ಸ್ಥಳವನ್ನೇ ಕಂಡುಹಿಡಿದಿದ್ದೇನೆ. ಸಸ್ಯಭೂಮಿಯಲ್ಲಿ ಸ್ವಲ್ಪ ಒದ್ದೆಯಾಗಿರುವ ಮರಳನ್ನು ಹಾಕಿದ್ದೇನೆ. ಕಲ್ಲುಗಳಾವುವೂ ಇಲ್ಲದಂತೆ ನೋಡಿಕೊಂಡಿದ್ದೇನೆ".

"ಸರಿ, ಪುಷ್ಪಾ! ಸರಿ".

"ಈ ಸಸಿಯನ್ನು ನೆಡಬೇಕೆಂದು ನೀವು ಹೇಳುವುದನ್ನೇ ಎದುರು ನೋಡುತ್ತಿದ್ದೇನೆ.- ನನ್ನ ಸಸ್ಯಭೂಮಿಯಲ್ಲಿ ಒಳ್ಳೆಯ ಗಾಳಿಯೂ, ಬಿಸಿಲೂ, ಬೇಕಾದಷ್ಟು ನೀರೂ ಇರುವುವಾದುದರಿಂದ ನೀವು ಸಸಿಯನ್ನು ನೆಟ್ಟ ಬಹುಕಾಲದಮೇಲೆ ನಾನು ನೆಡಬಹುದು".

ಕುಮುದನು ಕೈ ಚಪ್ಪಾಳೆಯನ್ನು ಹಾಕುತ್ತ ಅತೀವ ಸಂತೋಷದಿಂದ, "ನಿಜ, ಪುಷ್ಪಾ! ನಿಜ. ನೀನು ಒಳ್ಳೆಯ ಶಿಷ್ಯಳು. ನೀನು ಲಕ್ಷರೂಪಾಯಿಗಳನ್ನು ಗೆಲ್ಲುವುದರಲ್ಲಾವಸಂದೇಹವೂ ಇಲ್ಲ" ಎಂದನು.

"ಅದಿರಲಿ, ನಿಮ್ಮ ಶಿಷ್ಯಳು ಪುಷ್ಪಗಳನ್ನು ಬೆಳೆಸುವುದನ್ನು ಕಲಿಯುವುದಲ್ಲದೆ ಬೇರೆವಿಷಯಗಳನ್ನೂ ಕಲಿಯಬೇಕು ತಿಳಿಯಿತೆ?"

"ನಿಜ, ನಿಜ. ನೀನು ಓದಲು ಕಲಿಯಬೇಕೆಂದು ನನಗೂ ಇಷ್ಟವಿದೆ".

"ಯಾವಾಗ ಪ್ರಾರಂಭಿಸೋಣ?"

"ಈಗಲೇ"

"ಬೇಡ. ನಾಳೆ ಆಗಲಿ"

"ನಾಳೆಯೆ? ಅದೇಕೆ?"

"ಏಕೆಂದರೆ ಈ ದಿನ ಒಂದುಗಂಟೆಯು ಕಳೆಯಿತು. ನಾನು ಹೊರಡ ಬೇಕು".

"ಆಗಲೇ ಒಂದುಗಂಟೆಯು ಕಳೆಯಿತೆ?—ನಾಳೆ ಏನನ್ನು ಓದೋಣ ಪುಷ್ಪಾ!"

"ನನ್ನಲ್ಲಿ ಒಂದು ಪುಸ್ತಕವಿದೆ—ಅದು ನಮಗೆ ಅದೃಷ್ಟವನ್ನು ತರುವುದೆಂದು ನನ್ನ ನಂಬಿಕೆ"

"ಹಾಗಾದರೆ ನಾಳೆಯೇ ಪ್ರಾರಂಭಿಸೋಣ"

"ಸರಿ"

ಮರುದಿನ ಪುಷ್ಪಲತೆಯು ರಮಾನಾಥಬಾಬುವಿನ ಗೀತಾ ಪುಸ್ತಕ ವನ್ನು ತೆಗೆದುಕೊಂಡು ಬಂದಳು.

# ಸಪ್ತದಶ ಪರಿಚ್ಛೇದ

## ಮೊದಲನೆಯ ಸಸಿ

ಪುಷ್ಪಲತೆಯು ಪುಸ್ತಕವನ್ನು ತರುತ್ತಲೇ ಪ್ರಣಯಿಗಳ ಪಾಠಪ್ರವ ಚನಗಳು ಪ್ರಾರಂಭಿಸಲ್ಪಟ್ಟುವು. ಸಲಾಕೆಯ ಕಿಟಕಿಯ ಮುಖಾಂತರ ಅವರು ಒಬ್ಬರ ಮುಖವನ್ನೊಬ್ಬರು ನೋಡಲನುಕೂಲವಾಗಿದ್ದಿತೇ ಹೊರತು ಅದರ ಮೂಲಕ ಪುಸ್ತಕಪಠನವು ಪ್ರಯಾಸಕರವಾಗಿದ್ದಿತು. ಪುಷ್ಪಲತೆಯು ಒಂದು ಕೈಯಲ್ಲಿ ಪುಸ್ತಕವನ್ನು ಸಲಾಕೆಗಳ ಬಳಿ ಇಡುವಳು. ಮತ್ತೊಂದು ಕೈಯಲ್ಲಿ ದೀಪವೊಂದನ್ನು ಹಿಡಿಯುವಳು. ಕುಮುದನು ಹುಲ್ಲುಕಡ್ಡಿ ಯೊಂದನ್ನು ತೆಗೆದುಕೊಂಡು ಒಂದೊಂದು ಅಕ್ಷರವನ್ನೂ ತಿಳಿಯ ಹೇಳುವನು. ಹೀಗೆಯೇ ಪಾಠಪ್ರವಚನವು ನಡೆಯುವುದು. ಕುಮುದನಿಗೆ ಹೇಳಿಕೊಡಲು ಎಷ್ಟು ಸಂತೋಷವಾಗುವುದೋ ಅದಕ್ಕಿಂತಲೂ ಹೆಚ್ಚಾಗಿ ಪುಷ್ಪಲತೆಗೆ ಕಲಿಯಲು ಸಂತೋಷವಾಗುವುದು.

ಕ್ರಮವಾಗಿ ಪ್ರತ್ಯುತ್ಪನ್ನಮತಿಯುಳ್ಳ ಪುಷ್ಪಲತೆಯು ಪಾಠಗಳೆಲ್ಲ ವನ್ನೂ ಬೇಗಬೇಗನೆ ಕಲಿಯತೊಡಗಿದಳು. ಪಾಠಗಳು ಅತಿ ಕಠಿಣ

ವಾದಾಗ ಆ ಪ್ರಣಯಿಗಳು ಪ್ರೇಮದಿಂದಲೂ ಪರಸ್ಪರ ಉತ್ಪನ್ನವಾಗಿದ್ದ ಸ್ನೇಹದಿಂದಲೂ ಅವುಗಳನ್ನು ಸುಲಭವಾಗಿರುವಂತೆ ಪರಿವರ್ತನೆ ಮಾಡಿ ಬಿಡುತ್ತಿದ್ದರು ಪುಷ್ಪಲತೆಯು ತನ್ನ ಕೊಟಡಿಗೆ ಹಿಂತಿರುಗಿದ ಬಳಿಕ ತನ್ನ ಪಾರಗಳನ್ನು ಗಟ್ಟಿಮಾಡುತ್ತಿದ್ದಳು. ಆಗ ಅವಳಿಗೆ ಅನಿರ್ವಚನೀಯವಾದ ಆನಂದವುಂಟಾಗುತ್ತಿದ್ದಿತು

ಒಂದು ದಿನ ರಾತ್ರಿ ಪುಷ್ಪಲತೆಯು ಎಂದಿಗಿಂತಲೂ ಅರ್ಧಗಂಟೆಯಷ್ಟು ತಡವಾಗಿ ಬಂದಳು ಕುಮುದನು ಕಾತರನಾಗಿ ಹಾಗೇಕೆ ಆಯಿತೆಂದು ಕೇಳಿದನು.

ಪುಷ್ಪಲತಾ--ನನ್ನ ಮೇಲೆ ಕೋಪಿಸಿಕೊಳ್ಳಬೇಡಿ ನನ್ನ ತಪ್ಪಿನಿಂದ ಹಾಗಾಗಲಿಲ್ಲ. ನನ್ನ ತಂದೆಯು ವೃದ್ಧಗೃಧ್ರವೊಂದರೊಡನೆ ಸ್ನೇಹವನ್ನು ಬೆಳಿಸಿದ್ದಾನೆ. ಆ ಗೃಧ್ರಮುದುಕನು ಸುರನಗರಿಯಲ್ಲಿದ್ದಾಗ ಅವನೊಡನೆ ಸ್ನೇಹವನ್ನು ಬೆಳೆಸಲು ಬರುತ್ತಿದ್ದನು ಅಲ್ಲಿದ್ದಾಗ ಕಾರಾಗೃಹಗಳನ್ನು ತೋರಿಸೆಂದು ನನ್ನ ತಂದೆಯನ್ನು ಕೇಳುತ್ತಿದ್ದನು. ಅವನೇನೋ ಒಳ್ಳೆಯವನೇ—ಸ್ವಲ್ಪ ಕುಡಿಯುತ್ತಾನೆ, ವಿನೋದಕರ ಕತೆಗಳನ್ನು ಹೇಳುತ್ತಾನೆ ತನ್ನ ಹಣವನ್ನು ತಟ್ಟನೆ ಖರ್ಚುಮಾಡಲು ಒಪ್ಪುತ್ತಾನೆ.

ಕುಮುದನು ಆಶ್ಚರ್ಯಾನ್ವಿತನಾಗಿ. "ಅವನ ವಿಷಯವು ಮತ್ತೇನೂ ತಿಳಿಯದೆ?" ಎಂದು ಕೇಳಿದನು

"ಇಲ್ಲ ಈಗ ಸುಮಾರು ಎರಡುವಾರಗಳಿಂದ ಮಾತ್ರ ನನ್ನ ತಂದೆಯು ಈ ನೂತನ ಮಿತ್ರನನ್ನು ನೋಡುತ್ತಿದ್ದಾನೆ. ಅವನು ನನ್ನ ತಂದೆಯನ್ನು ಮೇಲಿಂದಮೇಲೆ ಭೇಟಿಮಾಡಲು ಆತುರನಾಗಿದ್ದಾನೆ".

ಕುಮುದನು ಕಾತರಭಾವದಿಂದ ತಲೆಯನ್ನಲ್ಲಾಡಿಸುತ್ತ, ಅಪಾಯವಾವುದೋ ಸಂಭವಿಸಬಹುದೆನ್ನುವಂತೆ ಯೋಚಿಸುತ್ತ ಹೇಳತೊಡಗಿದನು- "ಹಾಗೆಯೆ? ಅವನಾವನೋ ಗೂಢಚಾರನಿರಬೇಕು ಬಂದಿಗಳನ್ನೂ ಜೈಲರನ್ನೂ ಕಾಯುಲೋಸುಗ ಅಂತಹವರು ಆಗಾಗ ಬರುವುದುಂಟು".

ಪುಷ್ಪಲತೆಯು ಸ್ವಲ್ಪ ನಕ್ಕು ಹೇಳತೊಡಗಿದಳು—"ನನಗೆ ಆ ವಿಷಯದಲ್ಲಿ ನಂಬಿಕೆಯಿಲ್ಲ ಅವನು ಗೂಢಚಾರನಂತೆ ಯಾರನ್ನಾದರೂ

ಕಾಯಲು ಬಂದಿರುವುದು ನಿಜವಾದರೆ ನನ್ನ ತಂದೆಯಮೇಲಂತೂ ಅವನು ಖಂಡಿತವಾಗಿ ಕಣ್ಣಿಟ್ಟಿಲ್ಲ"

"ಮತ್ತಾರಮೇಲೆ ಕಣ್ಣಿಟ್ಟಿರುವನು?"

"ನನ್ನ ಮೇಲಿರಬಹುದು".

"ನಿನ್ನ ಮೇಲೆಯೆ?"

ಪುಷ್ಪಲತೆಯು ನಕ್ಕು ಕೂಡದೇಕೆ ಎಂದಳು.

ಕುಮುದಚಂದ್ರನು ದೀರ್ಘವಾಗಿ ಶ್ವಾಸಬಿಡುತ್ತ, 'ನಿಜ ನಿನ್ನನ್ನು ಮದುವೆಯಾಗಲು ಅನೇಕರು ಇಷ್ಟಪಡುವರು ಇವನು ನಿನ್ನ ಪತಿಯಾಗುವನೋ ಏನೋ?" ಎಂದನು

"ಅದಕ್ಕೆ ವಿರೋಧವಾಗಿ ಕೂಡ ಏನನ್ನೂ ಹೇಳಲಾರೆ"

"ಅಂತಹ ಸುಖಮಯ ಪರಿಸ್ಥಿತಿಯು ಪ್ರಾಪ್ತವಾಗಬಹುದೆಂದು ನಂಬಲು ಕಾರಣವಿದೆಯೆ?"

"ಅಂತಹ ಭಯಾನಕ ಪರಿಸ್ಥಿತಿಯೆಂದು ಹೇಳಿರಿ, ಕುಮುದಚಂದ್ರ ಬಾಬುಗಳೆ!"

"ನೀನು ಹೇಳುವುದು ನಿಜ ಪುಷ್ಪಾ!—ಸರಿ ಅಂತಹ ಭಯಾನಕ ಪರಿಸ್ಥಿತಿಯೆಂದೇ ಹೇಳುತ್ತೇನೆ"

"ಕಾರಣವೇನೆಂದರೆ "

"ಹೇಳು. ಕೇಳಲು ಬಹಳ ಕಾತುರನಾಗಿದ್ದೇನೆ"

"ಈ ಮನುಷ್ಯನು ಸುರನಗರಿಯಲ್ಲಿ ಅನೇಕಬಾರಿ ಕಾರಾಗೃಹದ ಬಳಿಗೆ ಬರುತ್ತಿದ್ದನು—ಈಗ ಚೆನ್ನಾಗಿ ಸ್ಮೃತಿಗೆ ಬರುತ್ತಿಗೆ—ನೀವು ಅಲ್ಲಿ ಬಂದಿಗಳಾಗಿದ್ದಾಗಲೇ ಅವನ್ನು ಬರುತ್ತಿದ್ದುದು. ನಾನು ಆ ಕಾರಾಗೃಹವನ್ನು ಬಿಟ್ಟೊಡನೆಯೇ ಅವನೂ ಅದನ್ನು ಬಿಟ್ಟನು. ನಾನು ಇಲ್ಲಿಗೆ ಬರುತ್ತಲೇ ಇಲ್ಲಿಗೂ ನನ್ನ ಹಿಂದೆಯೇ ಬಂದಿದ್ದಾನೆ ಸುರನಗರಿಯಲ್ಲಿದ್ದಾಗ ನಿಮ್ಮನ್ನು ನೋಡಲು ಬರುತ್ತಿದ್ದುದಾಗಿ ಸುಳ್ಳನ್ನೇ ವಿವನನ್ನು ಹೇಳುತ್ತಿದ್ದನು".

"ನನ್ನನ್ನು ನೋಡುವುದೆ?"

"ಅಹುದು. ಅದೊಂದು ಸೇವವಾಗಿರಬೇಕು. ಏಕೆಂದರೆ—ಈಗಲೂ ನೀವು ನನ್ನ ತಂದೆಯ ಬಂದಿಯಾಗಿರುವಿರಾದರೂ ನಿಮ್ಮನ್ನು ಅವನು ಲಕ್ಷ್ಯಕ್ಕೇ ತಂದುಕೊಂಡಿಲ್ಲ. ಅಲ್ಲದೆ ನೆನ್ನೆಯದಿನ ನನ್ನ ತಂದೆಯ ಬಳಿ ಅವನು ಹೇಳುತ್ತಿದ್ದುದನ್ನು ಕೇಳಿದೆನು—ನಿಮ್ಮ ಪರಿಚಯವೇ ಅವನಿಗಿಲ್ಲವಂತೆ!"

"ಹೇಳು ಪುಷ್ಪಾ! ಮುಂದೆ ಹೇಳು ಅವನಾರೆನ್ನುವುದನ್ನೂ ಅವನಿಗೇನು ಬೇಕೆನ್ನುವುದನ್ನೂ ಕಂಡುಹಿಡಿಯಲೆತ್ನಿಸುತ್ತೇನೆ"

"ಕುಮುದಚಂದ್ರಬಾಬುಗಳೆ! ನಿಮ್ಮಲ್ಲಿ ಅಭಿಮಾನವಿರುವ ಮಿತ್ರರಾದರೂ ಹೀಗೆ ಬಂದಿರಬಹುದೆ?"

"ನನಗಾವಮಿತ್ರರೂ ಇಲ್ಲ, ಪುಷ್ಪಾ! ನನ್ನ ವೃದ್ಧಸೇವಕಿಯೊಬ್ಬಳೇ ನನ್ನ ಮಿತ್ರಳು ಅವಳು ಹೀಗೆ ಎಂದಿಗೂ ಬರುವುದಿಲ್ಲ ಅವಳು ನಿನ್ನ ಬಳಿಗಾಗಲಿ ನಿನ್ನ ತಂದೆಯ ಬಳಿಗಾಗಲಿ ನೇರವಾಗಿ ಬಂದು, 'ನನ್ನ ಮಗು ಇಲ್ಲಿದೆ ನನಗೆ ಎಷ್ಟು ದುಃಖವಾಗಿದೆ ನೋಡಿದಿರಾ? ಅವನನ್ನು ಒಂದುಗಂಟೆ ಮಾತ್ರ ನೋಡಲು ಅವಕಾಶಕೊಡಿ. ಬಳಿಕ ನಾನು ಬದುಕಿರುವವರೆಗೂ ನಿಮ್ಮ ಶ್ರೇಯಃಪ್ರಾರ್ಥನೆ ಮಾಡುತ್ತಿರುತ್ತೇನೆ' ಎನ್ನುವಳು. ಇಲ್ಲ. ಪುಷ್ಪಾ! ಇಲ್ಲ—ಆ ಸೇವಕಿಯನ್ನು ಬಿಟ್ಟರೆ ನನ್ನಲ್ಲಿ ಅಭಿಮಾನವುಳ್ಳ ಮಿತ್ರರು ಮತ್ತಾರೂ ಇಲ್ಲ".

"ಹಾಗಾದರೆ ನಾನು ಮೊದಲು ಯೋಚಿಸಿದ ವಿಚಾರಕ್ಕೆ ಹಿಂತಿರುಗಬೇಕು ಅದನ್ನು ಸಮರ್ಥಿಸುವ ಬೇರೊಂದು ವಿಚಾರವನ್ನು ಹೇಳುತ್ತೇನೆ. ಅದನ್ನೂ ಕೇಳಿ ನೆನ್ನೆಯ ದಿನ ನಿಮ್ಮ ಸಸಿಯನ್ನು ನೆಡಲೋಸುಗ ಸಸ್ಯಭೂಮಿಯನ್ನು ಸರಿಪಡಿಸುತ್ತಿದ್ದೆನು ಆ ಸಮಯದಲ್ಲಿ ವೃಕ್ಷಗಳ ಬಳಿ ಛಾಯೆಯೊಂದನ್ನು ನೋಡಿದೆನು ಅದಾರದಿರಬಹುದೆಂದು ನಾನು ಹಿಂತಿರುಗಿ ನೋಡಲಿಲ್ಲ ಆದರೆ ಆ ಛಾಯೆಯು ಆ ಮನುಷ್ಯನದೇ ಎಂದು ಖಂಡಿತವಾಗಿ ಹೇಳಬಲ್ಲೆನು ಅವನು ಮರೆಯಾಗಿ ನಿಂತಿದ್ದನು. ನಾನು ನೆಲವನ್ನು ಅಗೆಯುತ್ತಿದ್ದುದನ್ನು ನೋಡಿದನು. ಅವನು ನನ್ನನ್ನೇ ಹಿಂಬಾಲಿಸಿ ಬಂದುದು. ನನ್ನ ಚಲನವಲನಗಳನ್ನೇ ಪರೀಕ್ಷಿಸುತ್ತಿದ್ದುದು.

ನಾನು ಮಾಡುತ್ತಿದ್ದ ಕೆಲಸಗಳೆಲ್ಲವನ್ನೂ ಬಹಳ ಜಾಗರೂಕತೆಯಿಂದ ಕಾದುನೋಡುತ್ತಿದ್ದನು ".

" ಓಹೋ! ಸರಿ, ಸರಿ ಅವನು ನಿನ್ನನ್ನು ಪ್ರೀತಿಸತೊಡಗಿದ್ದಾನೆ ಅವನೇನು ಯುವಕನಾಗಿದ್ದಾನೆಯೆ? ಸುಂದರನಾಗಿದ್ದಾನೆಯೆ?"

ಕುಮುದನು ಅಷ್ಟು ಹೇಳಿ ಆಸಕ್ತಿಯಿಂದಲೂ ಕಾತರತೆಯಿಂದಲೂ ಪುಷ್ಪಲತೆಯ ಮುಖವನ್ನೇ ನೋಡುತ್ತಿದ್ದನು ಅವಳು ಗಹಗಹಿಸಿ ನಕ್ಕು,

" ಯುವಕನಾಗಿಯೆ? ಸುಂದರನಾಗಿಯೆ?—ಅವನೊಬ್ಬ ಕುರೂಪಿ—ನೋಡಲು ಭೀಕರನಾಗಿದ್ದಾನೆ-ಸುಮಾರು ಐವತ್ತುವರ್ಷಗಳ ವಯಸ್ಸಿನವನು ಸರಿಯಾಗಿ ನನಗೆದುರಾಗಿ ನಿಂತು ನನ್ನನ್ನು ನೋಡುವುದಕ್ಕಾಗಲಿ ನನ್ನೊಡನೆ ಮಾತನಾಡುವುದಕ್ಕಾಗಲಿ ಅವನಿಗೆ ಧೈರ್ಯವಿಲ್ಲ ಹಾಗೊಂದು ವೇಳೆ ಮಾತನಾಡಿದರೆ ಮೆಲ್ಲನೆ ಸಣ್ಣದನಿಯಲ್ಲಿ ಮಾತನಾಡುವನು" ಎಂದಳು

" ಅವನ ಹೆಸರೇನು?"

" ನಿರಂಜನಬಾಬು '

" ಅವನಾರೋ ನಾನರಿಯೆ"

" ನೋಡಿದಿರಾ! ಅವನು ನಿಮಗಾಗಿ ಬಂದಿಲ್ಲವೆಂದು ಖಂಡಿತವಾಯಿತು ".

" ಅದು ಹೇಗಾದರೂ ಇರಲಿ—ಪುಷ್ಪಾ! ಅವನು ನಿನ್ನನ್ನು ಪ್ರೀತಿಸುತ್ತಿದ್ದರೂ—ಅದರಲ್ಲಿ ಅಸಂಭವವಾದುದೇನೂ ಇಲ್ಲ, ನಿನ್ನನ್ನು ನೋಡಿದವರೆಲ್ಲರೂ ನಿನ್ನನ್ನು ಪ್ರೀತಿಸುವರು—ನೀನು ಮಾತ್ರ ಅವನನ್ನು ಪ್ರೀತಿಸುತ್ತಿಲ್ಲವಷ್ಟೆ?"

"ಖಂಡಿತವಾಗಿಯೂ ಇಲ್ಲ"

"ನನ್ನ ಮನಸ್ಸಿಗೆ ಆತಂಕವಿಲ್ಲದಂತಿರಲೆ?"

"ಓಹೋ! ಇರಬಹುದು ಅದಕ್ಕೆ ಅಭ್ಯಂತರವಿಲ್ಲ"

" ಹಾಗಾದರೆ ಸರಿ. ನಿನಗೀಗ ಓದುವುದಕ್ಕೆ ಬರುವುದಷ್ಟೆ. ನನ್ನ ವಿರಹತಾಪವನ್ನೂ ನನ್ನ ದುಃಖಾಸೂಯೆಗಳನ್ನೂ ಬರೆದುಕೊಟ್ಟರೆ ಎಲ್ಲವನ್ನೂ ಓದುವೆಯಾ?"

"ಓದುತ್ತೇನೆ. ಆದರೆ ನೀವು ದೊಡ್ಡ ಅಕ್ಷರಗಳಲ್ಲಿ ಚೆನ್ನಾಗಿ ಬರೆಯಬೇಕು".

ಈ ಸಂಭಾಷಣೆಯಿಂದ ಪುಷ್ಪಲತೆಗೆ ಸ್ವಲ್ಪ ಕಷ್ಟವು ತೋರಿಬರುತ್ತಿದ್ದಿತಾಗಿ ಅವಳು, "ಅದಿರಲಿ-ನಿಮ್ಮ ಪುಷ್ಪವು ಹೇಗೆ ಬೆಳೆಯುತ್ತಿದೆ?" ಎಂದು ಕೇಳಿ ಮಾತು ಮರೆಸಿದಳು

ಕುಮುದನು ಹೇಳತೊಡಗಿದನು—"ಪುಷ್ಪಾ! ನನಗೆಷ್ಟು ಸಂತೋಷವಾಗಿದೆ ಬಲ್ಲೆಯಾ? ಈ ದಿನ ಹೂಜಿಯಲ್ಲಿದ್ದ ಮಣ್ಣನ್ನು ಸ್ವಲ್ಪ ಓರೆಮಾಡಿ ಬಿಸಿಲಲ್ಲಿ ನೋಡಿದೆನು ಎಲೆಗಳು ಹೊರಡುವ ಚಿಹ್ನೆಗಳು ಕಾಣುತ್ತಿವೆ ಗವರ್ನರನು ಪ್ರಾಣವನ್ನು ಉಳಿಸಿದಾಗ ಉಂಟಾದ ಸಂತೋಷಕ್ಕಿಂತಲೂ ಹೆಚ್ಚು ಸಂತೋಷವು ಈ ಚಿಹ್ನೆಗಳನ್ನು ನೋಡಿದಾಗ ನನಗುಂಟಾಯಿತು."

ಪುಷ್ಪಲತೆಯು ಸ್ವಲ್ಪ ನಕ್ಕು, "ಹಾಗಾದರೆ ಶುಭ ಸೂಚನೆಗಳು ಕಾಣುತ್ತಿವೆಯೆ?" ಎಂದಳು

"ನಿಜ, ನಿಜ ಕಾಣುತ್ತಿವೆ"

"ನನ್ನ ಸಸಿಯನ್ನು ನೆಡುವುದಾವಾಗ?"

"ಸರಿಯಾದ ಸಮಯವನ್ನು ನೋಡಿ ಸರಿಯಾದ ದಿನವನ್ನು ಗೊತ್ತುಮಾಡುವೆನು ಆದರೆ ನೀನೇನು ಮಾಡಿದರೂ ರಹಸ್ಯವಾಗಿ ಮಾಡಬೇಕು ಯಾರನ್ನೂ ನಿನ್ನ ಸಹಾಯಕ್ಕೆ ಕರೆಯಬೇಡ ನಿನ್ನ ರಹಸ್ಯವನ್ನು ಪ್ರಪಂಚದಲ್ಲಾರಿಗೂ ತಿಳಿಸಬೇಡ ಪುಷ್ಪಗಳನ್ನು ಬಲ್ಲವರು ಸಸಿಯನ್ನು ನೋಡಿದೊಡನೆಯೇ ಅದರ ಬೆಲೆಯನ್ನು ಕಂಡುಹಿಡಿಯಬಲ್ಲರು. ಆದುದರಿಂದ ಮೂರನೆಯ ಸಸಿಯನ್ನು ಪೆಟ್ಟಿಗೆಯೊಂದರಲ್ಲಿ ಭದ್ರಪಡಿಸಿ ಪೆಟ್ಟಿಗೆಗೆ ಬೀಯಗವನ್ನು ಹಾಕಿಟ್ಟಿರು".

"ನೀವು ಯಾವ ಕಾಗದದಲ್ಲಿ ಆ ಸಸಿಯನ್ನು ಸುತ್ತಿಟ್ಟದ್ದಿರೋ ಅದರಲ್ಲಿಯೇ ಈಗಲೂ ಆ ಸಸಿಯಿದೆ ನನ್ನ ರೇಷ್ಮೆಯ ಸೀರೆಯೊಂದರ ಕೆಳಗೆ ಅದನ್ನಿಟ್ಟಿದ್ದೇನೆ. ಆದುದರಿಂದ ಅದರ ಮೇಲೆ ನೀರು ಬೀಳುವುದಿಲ್ಲ. ಭಾರವೂ ಬೀಳುವುದಿಲ್ಲ—ಅದಿರಲಿ, ನಾನು ಈಗಲೇ ಹೊರಟುಬಿಡಬೇಕು".

"ಅದೇನು? ಇಷ್ಟು ಬೇಗನೆ ಹೊರಡಬೇಕೆ?"

"ಅಹುದು, ಅಹುದು".

"ಬಂದುದೇ ತಡವಾಯಿತು. ಬೇಗನೆ ಹೊರಟುಹೋಗುವುದು ಬೇರೆ".

"ನನ್ನ ತಂದೆಯು ನಾನು ಬಾರದಿರುವುದನ್ನು ನೋಡಿ ಅಸಮಾಧಾನ ಪಡಬಹುದು. ಅಲ್ಲದೆ ನನ್ನ ನೂತನ ಪ್ರೀತಿಪಾತ್ರನು ಪ್ರತಿಸ್ಪರ್ಧಿಯೊಬ್ಬನಿರುವನೆಂದು ಸಂಶಯಿಸಬಹುದು."

ಆ ಮಾತುಗಳನ್ನು ಹೇಳುತ್ತಿದ್ದಾಗ ಅವಳು ಅದೇನನ್ನೋ ಕಿವಿಗೊಟ್ಟು ಕೇಳುತ್ತಿದ್ದಳು.

ಕುಮುದಚಂದ್ರನು ಚಕಿತನಾಗಿ, ಅದೇನೆಂದು ಕೇಳಿದನು.

"ಅದೇನೋ ಶಬ್ದವಾದಂತಾಯಿತು"

"ಎಂತಹ ಶಬ್ದ?"

"ಆರಾರೋ ಮೆಟ್ಟಿಲಮೇಲೆ ನಡೆದುಹೋದಂತೆ ಕೇಳಬಂದಿತು"

"ನಿನ್ನ ತಂದೆಯಾಗಲಿ ಮೆಟ್ಟಿಲಿನ ಬಳಿ ಬರಲಿ, ನನ್ನ ಬಹುದು. ಅವನು ಎಷ್ಟೆಷ್ಟರ ದೂರದಿಂದಲೇ ನನ್ನ ಹೆಜ್ಜೆಯ ಧ್ವನಿಯನ್ನು ಕೇಳಬಲ್ಲನು"

"ನನ್ನ ತಂದೆಯು ಇಷ್ಟಿಗೆ ಮಲಗಿರಲಾರನು. ಅವನು ಖಂಡಿತವಾಗಿ ಬಲ್ಲ ... ಆದರೆ ..."

"ಆದರೆ ... ಏನು?"

"ಆದರೆ— ನಿರಂಜನಬಾಬುವು ಬಂದಿದ್ದನೋ ಏನೋ ಹೇಳಲಾಗದು"

ಪುಷ್ಪಲತೆಯು ಮೆಟ್ಟಿಲುಗಳ ಕಡೆಗೆ ಓಡಿದಳು. ಮೆಟ್ಟಿಲುಗಳ ಕೆಳಭಾಗದಲ್ಲಿದ್ದ ಬಾಗಿಲಿನಲ್ಲಿ ಆರಾರೋ ಬೇಗನೆ ಸುತ್ತಿ ಹೊರಟುಹೋಗುತ್ತಿದ್ದುದು ಅವಳಿಗೆ ಕಂಡುಬಂದಿತು. ಕುಮುದನು ಅದೆಲ್ಲವನ್ನೂ ಅರಿತು ಬಹಳ ದುಃಖಿತನಾದನು. ಅವನ ದುಃಖಸಂಪದೆಗೆ ಆಗ ಈ ಪ್ರಸಂಗವು ಅಂಕುರಾರ್ಪಣವಾಗಿತ್ತೆಂದು ಅವನರಿತಿರಲಿಲ್ಲ!

ಮರುದಿನ ಯಾವ ಘಟನೆಯೂ ನಡೆಯಲಿಲ್ಲ. ಕಾಳೀಚರಣನು ಮೂರು ಬಾರಿ ಬಂದು ನೋಡಿಕೊಂಡು ಹೋದನು. ಅವನಿಗಾವ ಸಂಶಯವೂ ತೋರಲಿಲ್ಲ. ಅವನು ಬೇರೆಬೇರೆ ಸಮಯಗಳಲ್ಲಿ ತಟ್ಟನೆ ಬಂದು

ಪರೀಕ್ಷಿಸತೊಡಗಿದನು ಹಾಗೆ ಮಾಡಿ ಬಂದಿಯ ರಹಸ್ಯಗಳನ್ನರಿಯ ಲೆತ್ನಿಸಿದನು ಇದನ್ನರಿತ ಕುಮುದಚಂದ್ರನು ತನ್ನ ಹೂಜಿಯನ್ನು ರಾಟೆಯೊಂದರ ಮೂಲಕ ಕಿಟಕಿಯಲ್ಲಿ ಇಳಿಯಬಿಟ್ಟು ಕಾಳೀಚರಣನಿಗೆ ಏನೂ ಕಾಣದಂತೆ ಉಪಾಯಮಾಡಿದ್ದನು ಹಂಚುಗಳ ಮೇಲೆಯೂ ಗೋಡೆಗಳ ಮೇಲೆಯೂ ಬೆಳೆಯುವ ಸಸ್ಯವರ್ಗದಿಂದ ಕುಮುದನು ರಾಟೆಯ ಹಗ್ಗವನ್ನು ತಯಾರುಮಾಡಿದ್ದನು ಈ ಹಗ್ಗದ ಸಹಾಯ ದಿಂದ ಬಂದಿಯು ತನ್ನ ಹೂಜಿಯನ್ನು ಕಿಟಕಿಯ ಸಮೀಪಕ್ಕೆ ಎಳೆಯು ತ್ತಿದ್ದನು ಬೇಡವಾದಾಗ ಪುನಃ ಅವನ್ನು ಕಳಕ್ಕೆ ಬಿಡುತ್ತಿದ್ದನು. ರಾಟೆಯ ಹಗ್ಗವು ಪರೀಕ್ಷಕನಿಗೆ ಗೋಚರವಾಗದಿರುವಂತೆ ಕುಮುದ ಚಂದ್ರನು ಅವಕ್ಕೆ ಗೋಡೆಯಮೇಲಿನ ಪಾಚಿಯನ್ನು ಹಚ್ಚಿದ್ದನು

ಕಾಳೀಚರಣನಿಗೆ ಯಾವ ಸಂಶಯವೂ ಉಂಟಾಗಲಿಲ್ಲ ಹಾಗೆಯೇ ಎಂಟು ದಿನಗಳು ಕಳೆದುವು ಒಂದು ದಿನ ಬೆಳಗ್ಗೆ ಕುಮುದಚಂದ್ರನು ತನ್ನ ಸಸಿಯನ್ನು ನೋಡುವ ಆನಂದದಲ್ಲಿ ಮುಳುಗಿದ್ದನು ಆ ಸಸಿ ಯಿಂದ ಮೊಳಕೆಯು ಹೊರಟಿದ್ದಿತು ಗಾಳಿಯು ಬಹಳ ವೇಗವಾಗಿ ಬೀಸಿ ಕಾರಾಗೃಹವನ್ನೆಲ್ಲಾ ನಡುಗಿಸುತ್ತ ಶಬ್ದಮಾಡುತ್ತಿದ್ದಿತು. ಆ ಸಮಯದಲ್ಲಿ ಕಾಳೀಚರಣನು ಮೆಟ್ಟಲುಗಳನ್ನು ಹತ್ತಿಬಂದುದು ಕುಮುದನಿಗೆ ಕೇಳಿಬರಲಿಲ್ಲ ತಟ್ಟನೆ ಬಾಗಿಲು ತೆರೆಯಲ್ಪಟ್ಟಿತು

ಅಪರಿಚಿತವಾದ ಅತಏವ ನಿಷಿದ್ಧಕರವಾದ ವಸ್ತುವು ಬಂದಿಯ ಕೈಯಲ್ಲಿದ್ದುದನ್ನು ಕಂಡು ಕಾಳೀಚರಣನು ತಟ್ಟನೆ ಆ ವಸ್ತುವಿನ ಮೇಲೆ ಹಾರಿಬಿದ್ದನು ಗೃಧ್ರವು ತನ್ನ ಆಹಾರದ ಮೇಲೆ ಹಾರಿಬಿದ್ದಂತಾಯಿತು. ಕಾಳೀಚರಣನ ಒರಟು ಹಸ್ತವು—ಅದೇ ಹಸ್ತವನ್ನೇ ಕುಮುದನು ಸರಿಪಡಿಸಿದ್ದುದು—ಹೂಜಿಯ ಮಧ್ಯಭಾಗದಲ್ಲಿದ್ದ ಮಣ್ಣನ್ನು ತೆಗೆದು ಕೊಂಡಿತು ಒಡನೆಯೇ ಜೈಲರನು. "ಇಲ್ಲಿರುವುದೇನು?—ಆಹಾ! ನಿನ್ನ ಕೃತ್ರಿಮವನ್ನು ಕಂಡುಹಿಡಿದೆನಲ್ಲವೆ?" ಎಂದು ಗರ್ಜಿಸಿದನು.

ಕುಮುದಚಂದ್ರನು ನಡುಗುತ್ತ, "ನನ್ನ ಕೃತ್ರಿಮವೆ? ಇಲ್ಲ. ಅಂತಹುದೇನೂ ಇಲ್ಲ" ಎಂದನು.

ಕಾಳೀಚರಣ—ಆಹಾ! ಸಿಕ್ಕಿಬಿದ್ದಿಯಾ?—ಒಂದು ಹೂಜಿ—ಅದರಲ್ಲಿ ಮಣ್ಣು—ಇದರಲ್ಲಿ ಅದೇನೋ ರಹಸ್ಯವಿರಬೇಕು.

ತನ್ನ ಮರಿಗಳನ್ನು ಅಪಹರಿಸಿಕೊಂಡು ಹೋದ ಗೃಧ್ರವನ್ನು ಕಾತರಭಾವದಿಂದ ನೋಡುವ ಹಕ್ಕಿಯಂತೆ ಕುಮುದಚಂದ್ರನು ಚಿಂತೆಯಿಂದ ಜೈಲರನ ಕಡೆಗೆ ನೋಡುತ್ತ ಅವನನ್ನು ಬೇಡುತ್ತ, "ಕಾಳೀಚರಣ ಬಾಬುಗಳೆ ಅದೇನೂ ಇಲ್ಲ" ಎಂದು ಮುಂತಾಗಿ ಹೇಳುತ್ತಿದ್ದನು

ಕಾಳೀಚರಣನು ತನ್ನ ಕೆಟ್ಟ ಕೈಗಳಿಂದ ಹೂಜಿಯ ಮಣ್ಣನ್ನು ಕೆದಕುತ್ತಿದ್ದನು. ಕುಮುದಚಂದ್ರನು ಶುಷ್ಕವದನನಾಗಿ, "ಸ್ವಾಮಿ! ಹುಷಾರಾಗಿರಿ, ಹುಷಾರಾಗಿರಿ" ಎಂದು ಕೂಗಿಕೊಂಡನು

ಕಾಳೀಚರಣನು, "ಹುಷಾರಾಗಿರಬೇಕೆ?—ನೀನು ನಿಪಾತವಾಗು! ಯಾವುದು ಕೆಡುವುದೆಂದು ಹುಷಾರಾಗಿರಬೇಕು?'' ಎಂದು ಗರ್ಜಿಸಿದನು

ಕುಮುದಚಂದ್ರ-ಹುಷಾರಾಗಿರಿ ಸ್ವಾಮಿ! ಕಾಳೀಚರಣಬಾಬುಗಳೆ! ಅದನ್ನು ಜಜ್ಜಿಬಿಡುತ್ತಿದ್ದೀರಿ!

ಹಾಗೆ ಹೇಳುತ್ತ ಕುಮುದಚಂದ್ರನು ತಟ್ಟನೆ ಹೂಜಿಯನ್ನು ಕಾಳೀಚರಣನ ಕೈಗಳಿಂದ ಕಿತ್ತುಕೊಂಡು ತನ್ನ ಕಂಕುಳ ಕೆಳಗೆ ಅಡಗಿ ಸಿಟ್ಟುಕೊಂಡನು.

ವೃದ್ಧರಲ್ಲಿ ಸಾಮಾನ್ಯವಾಗಿ ಕಂಡುಬರುವ ಹಟಮಾರಿತನವು ಕಾಳೀಚರಣನಲ್ಲಿಯೂ ಕಂಡುಬರುತ್ತಿದ್ದಿತು. ವಿನಯಸಿಂಹನಮೇಲೆ ನಡೆದ ಪಿತೂರಿಯೊಂದನ್ನು ತಾನು ಪತ್ತೆಮಾಡಿದವನಂತೆ ಭಾವಿಸಿಕೊಂಡು ಕಾಳೀಚರಣನು ಕೋಲೊಂದನ್ನು ಎತ್ತಿಹಿಡಿದು ಕುಮುದನ ಕಡೆಗೆ ನುಗ್ಗಿದನು ಬಂದಿಯು ನಡುಗುವುದನ್ನು ನೋಡಿ ತನ್ನ ಪ್ರಾಣಗಳಿಗಾಗಿ ಕುಮುದನು ನಡುಗುತ್ತಿದ್ದನೆಂದೂ ಹೂಜಿಗಾಗಿ ಅಲ್ಲವೆಂದೂ ಭಾವಿಸಿಕೊಂಡನು ಆದುದರಿಂದ ಕಾಳೀಚರಣನು ಬಲಾತ್ಕಾರವಾಗಿ ಹೂಜಿಯನ್ನು ಬಂದಿಯ ಕೈಯಿಂದ ಕಸಿದುಕೊಳ್ಳುವ ಪ್ರಯತ್ನ ಮಾಡುತ್ತ, "ಓಹೋ! ನೋಡಿದೆಯೋ? ಎಷ್ಟು ಗಲಾಟೆ ಮಾಡುತ್ತಿರುವೆ!" ಎಂದನು.

ಕುಮುದನು, "ನನ್ನ ಹೂವನ್ನು ಬಿಡು" ಎಂದನು.

ವೃದ್ಧನು ಉತ್ತರಕೊಡುತ್ತ, "ಆಹಾ! ಹೂವನ್ನು ಬಿಡಬೇಕೋ? ಬಂದಿಗಳು ಹೂಡುವ ಆಟಗಳೆಲ್ಲವನ್ನೂ ಬಲ್ಲೆ" ಎಂದನು

ಕುಮುದನು, "ಪ್ರತಿಜ್ಞೆಮಾಡಿ ಹೇಳುತ್ತೇನೆ .ಬೇಕಾದರೆ . " ಎನ್ನುತ್ತ ಏನನ್ನೋ ಹೇಳತೊಡಗಿದನು

ಕಾಳೀಚರಣನು ಅರ್ಧೋಕ್ತಿಯಲ್ಲಿಯೇ ಬಂದಿಯ ಮಾತನ್ನು ತಡೆಯುತ್ತ, ನೆಲವನ್ನು ಸಶಬ್ದವಾಗಿ ತುಳಿಯುತ್ತ, "ಬಿಡು, ಬಿಡು, ಇಲ್ಲವಾದರೆ ಕಾವಲುಗಾರನನ್ನು ಕರೆಯುತ್ತೇನೆ" ಎಂದನು

ಕುಮುದಚಂದ್ರನು, "ಯಾರನ್ನು ಬೇಕಾದರೂ ಕರೆ ನನ್ನ ಪ್ರಾಣವು ಹೋದಮೇಲೆಯೇ ನಿನಗೀ ಹೂವು ಸಿಕ್ಕುವುದು" ಎಂದುತ್ತರ ವಿತ್ತನು.

ಕಾಳೀಚರಣನು ಕೋಪಕಂಪಿತನಾಗಿ ಹೂಜಿಯಲ್ಲಿದ್ದ ಮಣ್ಣಿನಲ್ಲಿ ತಟ್ಟನೆ ಎರಡನೆಯ ಬಾರಿ ಕೈಯನ್ನು ಹಾಕಿದನು ಈ ಬಾರಿ ಅದರಲ್ಲಿದ್ದ ಸಸಿಯನ್ನು ಹೊರಕ್ಕೆಳೆದನು. ಅದು ನಿಜವಾಗಿಯೂ ಕೃಷ್ಣವರ್ಣವುಳ್ಳು ದಾಗಿತ್ತು ಕುಮುದನು ಹೂಜಿಯನ್ನು ಸೆಳೆ ಸಂತುಷ್ಟನಾಗಿಯೇ ನಿಂತಿದ್ದನು. ಅದರ ಅಮೂಲ್ಯಸಂಪತ್ತು ಅಪಹರಿಸಲ್ಪಟ್ಟಿತ್ತೆಂದು ಅವನಿನ್ನೂ ಅರಿತಿರ ಲಿಲ್ಲ ಕಾಳೀಚರಣನು ಸಸಿಯನ್ನು ನೆಲದಮೇಲೆ ರಭಸದಿಂದೊಗೆದನು. ಉತ್ತರಕ್ಷಣವೇ ಸಸಿಯು ಕಾಳೀಚರಣನ ದಪ್ಪ ಪಾದರಕ್ಷೆಗಳ ಕೆಳಗೆ ಸಿಕ್ಕಿ ನುಚ್ಚುನೂರಾಯಿತು

ಮಿಂಚಿಹೋದ ಬಳಿಕ ಕುಮುದನು ಸಸಿಯ ಖೂನಿಯನ್ನು ಸ್ವಂತ ಕಣ್ಣುಗಳಿಂದಲೇ ಕಂಡನು ಅವನು ಸಸಿಯ ಮೃತಕಳೇಬರವನ್ನು ಕಂಡು ಎದೆಯೊಡೆದವನಾಗಿ ಕೇಳಿದವರಿಗೂ ಹೃದಯವಿದ್ರಾವಕವಾಗುವ ರೀತಿ ಯಲ್ಲಿ ಚೀತ್ಕರಿಸಿದನು ಎಂತಹವರಿಗೂ ಆ ಚೀತ್ಕಾರದಿಂದ ಮನಸ್ಸು ಕರಗುತ್ತಿದ್ದಿತು. ಕಾಳೀಚರಣನು ಬಹಳ ದೊಡ್ಡ ಕಾರ್ಯವನ್ನು ಮಾಡಿ ದವನಂತೆ ಸಂತೋಷಭರಿತನಾಗಿದ್ದನು

ತಟ್ಟನೆ ಕಾಳೀಚರಣನನ್ನು ಹೊಡೆಯುವ ಯೋಚನೆಯು ಕುಮುದನ ಮನಸ್ಸಿನಲ್ಲಿ ಉದ್ಭವಿಸಿದುದು ಅವನ ಮುಖವು ಕೆಂಪೇರಿದುದು ಅವನ ಅವನ ಕಣ್ಣುಗಳು ಕೆಂಡಗಳನ್ನುಗಿದುವು ಅವನು ತನ್ನ ಕೈಯ್ಯಲ್ಲಿದ್ದ

ಹೂಜಿಯನ್ನೆತ್ತಿ ಹಿಡಿದನು. ಇನ್ನೊಂದು ನಿಮಿಷದಲ್ಲಿ ಅದನ್ನವನು ಕೇಶ ರಹಿತವಾಗಿದ್ದಾ ಜೈಲರನ ತಲೆಯಮೇಲೆ ಬಡಿದುಬಿಡುತ್ತಿದ್ದನು. ಅಷ್ಟರಲ್ಲಿ ಅವನಿಗೆ ಚೀತ್ಕಾರವೊಂದು ಕೇಳಿಬಂದಿತು. ನೋಡಲಾಗಿ ಪುಷ್ಪಲತೆಯು ಶುಷ್ಕವದನಳಾಗಿ ನಡುಗುತ್ತೆ ಎದುರಿಗೆ ನಿಂತಿದ್ದಳು. ಕೈಗಳನ್ನು ಮೇಲಕ್ಕೆತ್ತಿ ಹಿಡಿದು ಹೊಡೆಯುವುದನ್ನು ನಿಷೇಧಿಸುತ್ತೆ ಅವಳು ತನ್ನ ತಂದೆಗೂ ತನ್ನ ಪ್ರಿಯತಮನಿಗೂ ಮಧ್ಯೆ ಬಂದು ನಿಂತಳು.

ಆ ಸಮಯದಲ್ಲಿ ತನಗೊದಗಿದ್ದ ವಿಪತ್ತು ಕಾಳೀಚರಣನಿಗೆ ತಿಳಿದು ಬಂದಿತು. ಅವನು ಬಾಯಿಗೆ ಬಂದಂತೆ ಬಂದಿಯನ್ನು ಬೈಯಲಾರಂಭಿಸಿದನು.

ಕುಮುದಚಂದ್ರನು, ಕೋಪಶೋಕಗಳಿಂದ ಕೂಡಿದವನಾಗಿ " ನಿಜವಾಗಿಯೂ ನೀನು ಅತಿತುಚ್ಛನಾಗಿರಬೇಕು ಹಟಿಮಾರಿಯಾಗಿರಬೇಕು ಬಡವನಾದ ಬಂದಿಗಿದ್ದ ಏಕಮಾತ್ರ ಸಂತೋಷವನ್ನೂ ನಾಶಪಡಿಸಿರುವೆ" ಎಂದನು.

ಪುಷ್ಪಲತೆಯೂ ಕೂಡ ತಂದೆಯನ್ನು ಆಕ್ಷೇಪಿಸುತ್ತೆ, " ಅಪ್ಪಾ! ಇದೇನು ನಾಚಿಕೆಗೇಡಿನ ಕೆಲಸ! ನಿಜವಾಗಿ ನೀನು ದೊಡ್ಡ ಅಪರಾಧವನ್ನೇ ಮಾಡಿರುವೆ" ಎಂದಳು.

ಮುದುಕನು ಕೋಪದಿಂದ ಉರಿದುಬೀಳುತ್ತೆ, ಅವಳ ಕಡೆಗೆ ತಿರುಗಿ, " ಆಹಾ! ನೀನೊಬ್ಬಳು ಬಂದೆಯೋ? ಹರಟೆಯಮಲ್ಲಿ! ನಿನಗೆ ಸಂಬಂಧವಿಲ್ಲದುದನ್ನು ಯೋಚಿಸುತ್ತೆ ಹಾಳಾಗಬೇಡ. ಬೇಗನೆ ಇಲ್ಲಿಂದ ತೊಲಗು" ಎಂದನು

ಕುಮುದನು ಶೋಕಪೂರಿತನಾಗಿ, " ನಾನೆಂತಹ ನಿರ್ಭಾಗ್ಯನು" ಎಂದು ಹೇಳಿಕೊಂಡನು.

ಕಾಳೀಚರಣನು ಹೂವನ್ನು ಸರಿಯಾಗಿ ನೋಡಿ ಎಲ್ಲವನ್ನೂ ಅರಿತು ಸ್ವಲ್ಪ ಲಜ್ಜಿತನಾಗಿ, " ನಿಜವಾಗಿ ಇವನಲ್ಲಿದ್ದುದು ಹೂವೇನು?—ನಿನಗೆ ಎಷ್ಟು ಹೂವುಗಳನ್ನು ಬೇಕಾದರೂ ತೆಗೆದುಕೊ. ನನ್ನ ಉದ್ಯಾನದಲ್ಲಿ ಮುನ್ನೂರು ಟ್ಯೂಲಿಪ್‌ಗಳಿವೆ" ಎಂದನು.

ಕುಮುದಚಂದ್ರ—ನಿನ್ನ ಟ್ಯೂಲಿಪ್‌ಗಳೊಡನೆ ಸೈತಾನನ ಬಳಿಗೆ

ಹೋಗು. ನೀನೂ ಸೈತಾನನೂ ಒಟ್ಟಿಗಿರಬೇಕಾದವರು. ಕೋಟ್ಯಾಂತರ ಟ್ಯೂಲಿಪ್‌ಗಳು ಕೂಡ ಈಗ ನೀನು ಹಾಳುಮಾಡಿದ ಹೂವಿನ ಸಮಾನ ವಾಗಲಾರವು

ಕಾಳೀಚರಣ—ಓಹೋ! ಹಾಗೇನು?—ನೋಡಿದೆಯಾ? ನೀನು ಟ್ಯೂಲಿಪ್‌ಪುಷ್ಪಕ್ಕಾಗಿ ವ್ಯಥೆಪಡುತ್ತಿಲ್ಲ ಆ ಕಳ್ಳ ಸಸಿಯಲ್ಲಿ ಏನೋ ಮಾಟವಿದ್ದಿರಬೇಕು ನಿನಗೆ ಪ್ರಾಣದಾನಮಾಡಿದ ರಾಜಾವಿನಯಸಿಂಹನ ಮೇಲೆ ಅದಾವುದೋ ಪಿತೂರಿಯನ್ನು ನಡೆಸುತ್ತಿರುವೆ—ಆ ಸಸಿಯಲ್ಲಿ ಪತ್ರಗಳಾವುವೋ ಇದ್ದುವೆಂದು ತೋರುವುದು. ನಾನು ಮೊದಲಿನಿಂದಲೂ ಹೇಳುತ್ತಿಲ್ಲವೆ—ನಿನ್ನ ತಲೆಯನ್ನು ಹಾರಿಸಿಬಿಟ್ಟಿದ್ದರೆ ಚೆನ್ನಾಗಿತ್ತೆಂದು.

ಪುಷ್ಪಲತೆಯು,"ಅಪ್ಪಾ! ಇದೇನು ಹೀಗೆ ಹೇಳುತ್ತಿರುವೆ!" ಎಂದಳು.

ಕಾಳೀಚರಣನು ಪುನಃ ಹೇಳತೊಡಗಿದನು—"ಸರಿ, ಸರಿ ಈಗಾಗಿರುವುದೇ ಸರಿಯಾದುದು. ನೀನು ಎಷ್ಟು ಬಾರಿ ಈ ಉಪಾಯವನ್ನು ಹೂಡುವೆಯೋ ಅಷ್ಟು ಬಾರಿ ಈ ಸಸಿಗಳನ್ನು ನಾಶಪಡಿಸುತ್ತೇನೆ ಅಣ್ಣಾ! ನಾನು ಮೊದಲೇ ಹೇಳಿದುದು ಜ್ಞಾಪಕದಲ್ಲಿದೆಯೆ? ಇಲ್ಲಿ ನಿನ್ನ ಜೀವನವು ಬಹಳ ಕಷ್ಟಮಯವಾಗುವಂತೆ ಮಾಡುವುದಾಗಿ ಹೇಳಿದ್ದೆನಲ್ಲವೆ?"

ಕುಮುದಚಂದ್ರನು, "ನೀನು ಹಾಳಾಗು!" ಎಂದು ಹೇಳಿ, ನಡುಗುವ ಕೈಗಳಿಂದ ತನ್ನ ಸಸಿಯ ಶೇಷಾಂಶಗಳನ್ನು ಆರಿಸಿಕೊಂಡನು ಪುಷ್ಪಲತೆಯು ಮೆಲ್ಲನೆ, "ಪ್ರಿಯತಮ! ಮತ್ತೊಂದು ಸಸಿಯನ್ನು ನಾಳೆಯ ದಿನ ನೆಡೋಣ" ಎಂದು ಹೇಳಿದಳು. ಅವಳಿಗೆ ಅವನ ಹೃದಯಾಂತರಾಳದಲ್ಲಿದ್ದ ಅತೀವ ದುಃಖವು ವೇದ್ಯವಾಗಿದ್ದಿತು. ಕುಮುದನ ಹೃದಯದ ಗಾಯಗಳಿಗೆ ಅವಳ ಅತುಳ ಪ್ರೀತಿಯ ಮಾತುಗಳು ಹಿತಕರವಾದ ತೈಲ ತುಂತುರುಗಳಂತಿದ್ದುವು.

## ಅಷ್ಟಾದಶ ಪರಿಚ್ಛೇದ

### ಪುಷ್ಪಲತೆಯ ಪ್ರೀತಿಪಾತ್ರ

ಪುಷ್ಪಲತೆಯು ಕುಮುದನಿಗೆ ಸಮಾಧಾನಮಾಡುತ್ತ ಅವನಿಗೆ ಆಪ್ಯಾಯನವಾಗಿದ್ದ ಮಾತುಗಳನ್ನು ಹೇಳುತ್ತಿದ್ದಂತೆಯೇ ಕಾರಾಗೃಹದ

ಮೆಟ್ಟಿಲುಗಳ ಮೇಲೆ ಯಾವುದೋ ಧ್ವನಿಯು ಕೇಳಿಬಂದಿತು. ಅದು, "ಏನು? ಸಮಾಚಾರವೇನಾದರೂ ಉಂಟೋ?" ಎಂದು ಕೇಳುತ್ತಿದ್ದಿತು

ಪುಷ್ಪಲತೆಯು, "ಅಪ್ಪಾ! ಕೇಳಿದೆಯಾ?" ಎಂದಳು.

ಕಾಳೀಚರಣ—ಏನು ಕೇಳುವುದು?

ಪುಷ್ಪಲತೆ — ನಿರಂಜನಬಾಬುಗಳು ನಿನ್ನನ್ನು ಕೂಗುತ್ತಿದ್ದಾರೆ. ಅವರು ಬಹಳ ಕಳವಳಪಡುತ್ತಿರುವಂತಿದೆ.

ಕಾಳೀಚರಣ—ಇಲ್ಲಿ ಸ್ವಲ್ಪಗಲಾಟೆಯಾಗುತ್ತಿತ್ತೇನು? ಈ ಡಾಕ್ಟರನು ನನ್ನನ್ನು ಖೂನಿಮಾಡಿಬಿಡುತ್ತಿದ್ದನೆಂದು ಕಾಣುವುದು. ಇವರು—ಈ ವಿದ್ಯಾವಂತರು—ಯಾವಾಗಲೂ ಬಹಳ ತೊಂದರೆಕೊಡುವವರು.

ಅಷ್ಟುಹೇಳಿ ಜೈಲರನು ಮೆಟ್ಟಿಲುಗಳ ಕಡೆಗೆ ಕೈ ತೋರಿಸುತ್ತ, "ನಡೆ, ನೀನೂ ನಡೆ ದಾರಿತೋರಿಸು" ಎಂದನು. ಬಳಿಕ ಬಾಗಿಲಿಗೆ ಬೀಯಗವನ್ನು ಹಾಕಿ ಭದ್ರಪಡಿಸಿ, "ಬಂದೆ, ನಿರಂಜನಬಾಬುಗಳೆ! ಬಂದೆ" ಎಂದು ಕೂಗಿಕೊಂಡನು

ಕಾರಾಗೃಹದಲ್ಲಿ ಕುಮುದನೊಬ್ಬನೇ ಉಳಿದನು ಅವನ ಒಡನಾಡಿಯಾಗಿ ಅವನ ದುಃಖವು ಮಾತ್ರ ಉಳಿಯಿತು. ಅವನು ತನ್ನಲ್ಲಿಯೇ ಗೊಣಗಿಕೊಳ್ಳುತ್ತ, "ಅಯ್ಯೋ! ಕಟುಕ! ನಿನ್ನ ಕಾಲಕೆಳಗೆ ನನ್ನನ್ನೇ ನೀನು ತುಳಿದುದು! ನನ್ನನ್ನೇ ಖೂನಿಮಾಡಿದುದು! ನಾನಿನ್ನು ಉಳಿಯುವಂತಿಲ್ಲ!" ಎಂದು ಹೇಳಿಕೊಂಡನು

ಅವನು ಅದೇ ದುಃಖದಲ್ಲಿ ಕಾಹಿಲೆ ಬೀಳುತ್ತಿದ್ದನು ಆದರೆ ಅವನ ದುಃಖವನ್ನು ಮರೆಸುವುದಕ್ಕಾಗಿ ವಿಧಾತನು ಪುಷ್ಪವೊಂದನ್ನು ಕೊಟ್ಟಿದ್ದನು. ಆ ಪುಷ್ಪಕ್ಕೆ ಪುಷ್ಪಲತೆಯೆಂಬ ಹೆಸರಿದ್ದಿತು.

ರಾತ್ರಿಯಲ್ಲಿ ಎಂದಿನಂತೆ ಪುಷ್ಪಲತೆಯು ಹಿಂದಿರುಗಿ ಬಂದಳು. ಅವಳು ಬರುತ್ತಲೇ, "ಇನ್ನುಮೇಲೆ ನೀವು ಪುಷ್ಪಗಳನ್ನು ಬೆಳೆಸಲು ಏನೂ ಅಡ್ಡಿಯಿಲ್ಲವೆಂದು ನನ್ನ ತಂದೆಯು ಹೇಳಿದ್ದಾನೆ" ಎಂದಳು

ಕುಮುದನು ವಿಷಣ್ಣವದನದಿಂದಲೇ, "ಅದು ಹೇಗೆ ತಿಳಿಯಿತು?" ಎಂದನು.

"ನನಗೆ ತಿಳಿದುದು ಹೇಗೆಂದರೆ—ಅವನು ಹೇಳಿದುದರಿಂದಲೇ!"

"ನನ್ನನ್ನು ಮೋಸಗೊಳಿಸಲು ಹಾಗೆ ಹೇಳಿದ್ದಾನೆ".

"ಇಲ್ಲ. ಅವನು ಪಶ್ಚಾತ್ತಾಪ ಪಡುತ್ತಿದ್ದಾನೆ".

"ಆಹಾ! ಸರಿ. ಇಷ್ಟು ನಿಧಾನವಾಗಿ—ಎಲ್ಲವೂ ಮಿಂಚಿಹೋದ ಮೇಲೆ—ಪಶ್ಚಾತ್ತಾಪಪಟ್ಟರೇನುಫಲ?"

"ತಾನಾಗಿ ಅವನು ಪಶ್ಚಾತ್ತಾಪಪಡಲಿಲ್ಲ".

"ಹಾಗಾದರೆ ಮತ್ತಾರ ಬಲಾತ್ಕಾರದಿಂದಲೋ ಪಶ್ಚಾತ್ತಾಪ ಪಡುತ್ತಿದ್ದಾನೆಯೆ?"

"ಅವನ ಸ್ನೇಹಿತನು ಅವನನ್ನು ಹೇಗೆ ನಿಂದಿಸಿ ಬೈದನೆಂದು ನೀವರಿತಿಲ್ಲ"

"ಆಹಾ! ನಿರಂಜನಬಾಬುವೆ! ಅವನು ನಿನ್ನನ್ನು ಬಿಟ್ಟುಹೋಗುವುದಿಲ್ಲವೆ?

"ಅವನು ಮುಟ್ಟಿಗೆ ನನ್ನೊಡನೆಯೇ ಇರಲೆತ್ನಿಸುತ್ತಾನೆ".

ಕುಮುದನ ಮನಸ್ಸಿನಲ್ಲಿದ್ದ ಅಸೂಯೆಯು ಆ ಮಾತುಗಳನ್ನು ಕೇಳಿ ಸ್ವಲ್ಪ ಕಡಮೆಯಾಯಿತು ಅವನು, "ಸರಿ ಪಶ್ಚಾತ್ತಾಪದ ವಿಚಾರವನ್ನು ಹೇಳು" ಎಂದನು

"ನನ್ನ ತಂದೆಯ ಸ್ನೇಹಿತನು ಎಲ್ಲವನ್ನೂ ಕೇಳಲು ಕುತೂಹಲಪಟ್ಟು ಪ್ರಶ್ನೆಮಾಡಿದನು ಊಟದ ಸಮಯದಲ್ಲಿ ನನ್ನ ತಂದೆಯು ಎಲ್ಲವನ್ನೂ ವಿವರಿಸಿದನು ಸಸಿಯ ಕತೆಯನ್ನು ವಿಸ್ತಾರವಾಗಿ ಹೇಳಿದನು. ತಾನು ಅದನ್ನು ತುಳಿದುಹಾಕಿದುದನ್ನೂ ವಿಶದಪಡಿಸಿದನು.

ಕುಮುದನು ಅದನ್ನು ಕೇಳಿ ದೀರ್ಘವಾಗಿ ನಿಟ್ಟುಸಿರಿಟ್ಟನು. ಪುಷ್ಪಲತೆಯು ಹೇಳತೊಡಗಿದಳು—"ನೀವು ಆ ಸಮಯದಲ್ಲಿ ನಿರಂಜನಬಾಬುವನ್ನು ನೋಡಬೇಕಾಗಿತ್ತು! ಅವನು ಕಾರಾಗೃಹದ ಭವನಕ್ಕೇ ಬೆಂಕಿಹಚ್ಚಲು ಸಿದ್ಧನಾದವನಂತೆ ಕಂಡುಬಂದನು. ಅವನ ಕಣ್ಣುಗಳು ಕೆಂಪುಕಿಡಿಗಳನ್ನು ಕಾರುತ್ತಿದ್ದುವು ಅವನು ಕ್ರೋಧದಿಂದ ಕಂಪಿಸುತ್ತಿದ್ದನು ಅವನು ಒಂದು ನಿಮಿಷದವರೆಗೆ ಮುಷ್ಟಿಯನ್ನೆತ್ತಿನಿಂತನು. ಅವನು ನನ್ನ ತಂದೆಯ ಕತ್ತನ್ನು ಕಿವಿಚಿಬಿಡುವನೆಂದು ನನಗೆ ಭೀತಿಯಾಯಿತು. ಅವನು, 'ನಿಜವಾಗಿ ಹಾಗೆ ಮಾಡಿದೆಯಾ? ಸಸಿಯನ್ನು

ತುಳಿದು ಚೂರು ಚೂರು ಮಾಡಿದೆಯಾ ?' ಎಂದನು. ನನ್ನ ತಂದೆಯು, 'ನಿಜವಾಗಿ ಹಾಗೆಯೇ ಮಾಡಿದ್ದೇನೆ' ಎಂದನು.

"ನಿರಂಜನಬಾಬುವು, 'ಎಂತಹ ದುಷ್ಕೃತ್ಯ! ಎಷ್ಟು ಅಸಹ್ಯಕರ ವಾದ ಕೆಲಸ! ನೀನು ಮಹಾಪರಾಧವನ್ನು ಮಾಡಿರುವೆ' ಎಂದನು.

"ನನ್ನ ತಂದೆಯು ಮೂಕನಂತಾದನು. ಸ್ವಲ್ಪಹೊತ್ತಿನ ಬಳಿಕ, 'ನೀನೂ ಹುಚ್ಚನಾದೆಯಾ ?' ಎಂದು ಕೇಳಿದನು"

ಕುಮುದಚಂದ್ರನು ಸಂತೋಷಭರಿತನಾಗಿ, "ಆಹಾ! ಆ ನಿರಂಜನನು ಎಷ್ಟು ಒಳ್ಳೆಯ ಮನುಷ್ಯ! ಪ್ರಾಮಾಣಿಕ! ದಯಾರ್ದ್ರಹೃದಯವುಳ್ಳವನು" ಎಂದನು

ಪುಷ್ಪಲತೆಯು ಪುನಃ ಹೇಳತೊಡಗಿದಳು—"ನಿಜವನ್ನು ಹೇಳ ಬೇಕೆಂದರೆ ಕೇಳಿ. ಇದುವರೆಗೆ ನಮ್ಮ ತಂದೆಯನ್ನು ಅದಾವನೂ ಅಷ್ಟು ಬೈದಿಲ್ಲ. ಅವನು ಅತಿಪಶ್ಚಾತ್ತಾಪವನ್ನು ಸೂಚಿಸುತ್ತ, 'ತುಳಿದೆಯಾ? ಸಸಿಯನ್ನು ತುಳಿದು ಹಾಳುಮಾಡಿದೆಯಾ? ಅಯ್ಯೋ! ದೇವರೆ! ತುಳಿದು ಹಾಕಿಬಿಟ್ಟಿರುವನಂತೆ' ಎಂದು ಮರುಗುತ್ತಿದ್ದನು 'ಅವನ ಬಳಿ ಇದ್ದುದು ಅದೊಂದೇ ಸಸಿಯೆ? ಬೇರೆ ಸಸಿಗಳು ಅವನಲ್ಲಿ ಇರಬೇಕಲ್ಲವೆ' ಎಂದು ಕೇಳಿದನು.

ಕುಮುದನು ಅದನ್ನು ಕೇಳಿ ಚಿಂತೆಯಿಂದ, "ಅವನು ಹಾಗೆ ಕೇಳಿ ದನೆ?" ಎಂದನು.

ಪುಷ್ಪಲತೆಯು ಪುನಃ ಹೇಳತೊಡಗಿದಳು—"ಆ ಮಾತನ್ನು ಕೇಳಿ ನನ್ನ ತಂದೆಯು, 'ನಿರಂಜನ! ಅವನಲ್ಲಿ ಬೇರೆ ಸಸಿಗಳಿರುವುವೆಂದು ಭಾವಿಸುವೆಯಾ? ಹಾಗಾದರೆ ತಾಳು! ಅವನ್ನೂ ಹುಡುಕುತ್ತೇನೆ' ಎಂದನು. ನಿರಂಜನನು ನನ್ನ ತಂದೆಯ ಷರಟನ್ನು ಬಲವಾಗಿ ಹಿಡಿದು, 'ಏನು? ಬೇರೆ ಸಸಿಗಳನ್ನೂ ಹುಡುಕುವೆಯಾ?' ಎಂದು ಕೇಳಿದನು. ಆದರೆ ತಟ್ಟನೆ ಅವನ ಷರಟನ್ನು ಬಿಟ್ಟು ನನ್ನ ಕಡೆಗೆ ತಿರುಗಿ ಮೃದುಸ್ವರ ದಿಂದ, 'ಆ ಬಡಪ್ರಾಣಿಯು ಏನು ಹೇಳಿದನು ಪುಷ್ಪಾ?' ಎಂದು ಕೇಳಿದನು.

"ಏನು ಹೇಳಬೇಕೆಂಬುದು ನನಗೆ ತಿಳಿಯಲಿಲ್ಲ. ನಿಮಗೆ ಸಸಿ

ಗಳಲ್ಲಿ ಎಷ್ಟು ಪ್ರೇಮಾದರಗಳಿರುವುವೆಂಬುದನ್ನು ಯಾರಿಗೂ ತಿಳಿಸದೆ ರಹಸ್ಯವಾಗಿಟ್ಟಿರಬೇಕೆಂದು ನೀವು ಹೇಳಿದ್ದಿರಲ್ಲವೆ? ಅದೃಷ್ಟವಶಾತ್ ನಾನು ಉತ್ತರಕೊಡಬೇಕಾದ ಸಂದರ್ಭವೇ ಬರಲಿಲ್ಲ. ನನ್ನ ತಂದೆಯು, 'ಅವನು ಹೇಳುವುದು ಮತ್ತೇನಿದೆ? ಅವನು ಕೂಗಿ ಹಾರಾಡಲಿಲ್ಲವೆ' ಎಂದನು.

"ನಾನು ಅವನ ಮಾತನ್ನು ತಡೆದು, 'ಅವರು ಕೂಗಿ ಹಾರಾಡಿ ಕೋಪಗೊಂಡುದರಲ್ಲಿ ಆಶ್ಚರ್ಯವೇನಪ್ಪಾ! ನೀನು ಅನ್ಯಾಯವಾಗಿ ಪಶುವಂತೆ ವರ್ತಿಸಲಿಲ್ಲವೆ?' ಎಂದೆನು.

"ನನ್ನ ತಂದೆಯು, 'ಇದೇನು? ನಿಮಗೆಲ್ಲಾ ಹುಚ್ಚು ಹಿಡಿದಿದೆಯೆ! ಒಂದು ಟ್ಯೂಲಿಪ್‌ಸಸಿಯನ್ನು ತುಳಿದುಹಾಕಿಬಿಟ್ಟರೆ ಮುಳುಗಿಹೋದುದೇನು? ಮಾರ್ಕೆಟ್ಟಿನಲ್ಲಿ ನೂರಾರು ಅಂತಹ ಸಸಿಗಳನ್ನು ಕೊಂಡುಕೊಳ್ಳಬಹುದು' ಎಂದನು.

"ನಾನು ಅಜ್ಞಾನಬಲದಿಂದ, 'ಆ ಸಸಿಯು ಆತನಿಗೆ ಅತ್ಯಮೂಲ್ಯವಾದುದಾಗಿದ್ದಿತೋ ಏನೋ!' ಎಂದುಬಿಟ್ಟೆನು"

ಕುಮುದಚಂದ್ರ—ಅದಕ್ಕೆ ನಿರಂಜನನು ಏನು ಹೇಳಿದನು?

ಪುಷ್ಪಲತೆಯು ಹೇಳತೊಡಗಿದಳು—"ಆ ಮಾತನ್ನು ಕೇಳುತ್ತಲೇ ನಿರಂಜನನ ಕಣ್ಣುಗಳು ಮಿಂಚಿನಂತೆ ಹೊಳೆಯತೊಡಗಿದುವು. ಅವನು ಮೃದುಮಧುರವಾಣಿಯಿಂದ, 'ಪುಷ್ಪಾ! ಹಾಗಾದರೆ ಆ ಸಸಿಯು ಅತ್ಯಮೂಲ್ಯವಾದುದೆಂದು ನೀನು ಭಾವಿಸುವೆಯಾ?' ಎಂದನು.

"ನಾನು ದೊಡ್ಡ ತಪ್ಪುಮಾಡಿದಂತಾಯಿತೆಂದು ಅರಿತುಕೊಂಡೆನು. ಯಾವುದನ್ನೂ ತಿಳಿಯಪಡಿಸಬಾರದೆಂದು ಹೇಳತೊಡಗಿದೆನು—'ನಾನೇನು ಬಲ್ಲೆ? ನನಗೆ ಟ್ಯೂಲಿಪ್‌ಪುಷ್ಪಗಳ ವಿಷಯವೇನು ತಿಳಿದಿದೆ? ನಾವು ಈ ಬಡಪಾಯಿಗಳೊಡನೆ ಇರುವೆವಾದುದರಿಂದ ಈ ಬಂದಿಗಳಿಗೆ ಯಾವುದರೊಡನೆಯಾದರೂ ಆಟವಾಡೋಣವೆನಿಸುವುದೆಂದು ಬಲ್ಲೆವು. ಈ ಬಡಪಾಯಿ ಕುಮುದಚಂದ್ರಬಾಬುವು ಈ ಸಸಿಯೊಡನೆ ಆಟವಾಡುತ್ತಿದ್ದನು. ಅದನ್ನು ತೆಗೆದುಕೊಂಡುದು ಬಹಳ ಕ್ರೂರತನವೆಂದು ಮಾತ್ರ ಹೇಳಬಲ್ಲೆನು'.

" ನನ್ನ ತಂದೆಯು ಮಧ್ಯೆ ಮಾತನಾಡುತ್ತೆ, 'ಅವನ ಬಳಿಗೆ ಆ ಸಸಿಯು ಬಂದುದು ಹೇಗೆ? ಅದನ್ನು ಮೊದಲು ಕಂಡುಹಿಡಿಯಬೇಕು' ಎಂದನು.

" ನಾನು ನಮ್ಮ ತಂದೆಯ ಕಡೆಯೇ ನೋಡಬಾರದೆಂದು ಕಣ್ಣುಗಳನ್ನು ಬೇರೆ ಕಡೆಗೆ ತಿರುಗಿಸಿಕೊಂಡೆನು. ಆದರೆ ನಿರಂಜನನ ಕಣ್ಣುಗಳನ್ನು ಭೇಟಿಮಾಡಬೇಕಾಯಿತು ಅವನು ನನ್ನ ಹೃದಯಾಂತರ್ಗತವಾದ ಯೋಚನೆಗಳೆಲ್ಲವನ್ನೂ ತಿಳಿಯಲೆತ್ನಿಸುವಂತೆ ನೋಡುತ್ತಿದ್ದನು ಅಂತಹ ಸಮಯಗಳಲ್ಲಿ ಸ್ವಲ್ಪ ಕೋಪಪ್ರಕಾಶಮಾಡಿದರೆ ಸರಿಹೋಗುವುದು. ನಾನು ಕೋಪಗೊಂಡವಳಂತೆ ಅವರಿಬ್ಬರನ್ನೂ ನೋಡದೆ ಅವರನ್ನು ಲಕ್ಷಿಸದೆ ಬಾಗಿಲಕಡೆಗೆ ಹೊರಟೆನು ಆದರೆ ಅವರ ಸಂಭಾಷಣೆಯೊಂದು ಕೇಳಿಬಂದುದರಿಂದ ನಾನಲ್ಲಿಯೇ ನಿಲ್ಲಬೇಕಾಯಿತು. ಅವರು ಮೆಲ್ಲನೆ ಮಾತನಾಡಿಕೊಳ್ಳುತ್ತಿದ್ದರೂ ಅವರ ಸಂಭಾಷಣೆಯು ನನಗೆ ಕೇಳಿಬಂದಿತು.

" ನಿರಂಜನ—ಅದನ್ನು ಕಂಡುಹಿಡಿಯುವುದು ಕಷ್ಟವಾಗದು

" ನನ್ನ ತಂದೆ—ಅದು ಹೇಗೆ?

" ನಿರಂಜನ—ನೀನು ಅವನ ದೇಹವಾದ್ಯಂತವನ್ನೂ ಪರೀಕ್ಷಿಸು. ಅವನ ಬಳಿ ಇತರ ಸಸಿಗಳಿದ್ದರೆ ಕಂಡುಹಿಡಿಯಬಹುದು ಸಾಮಾನ್ಯವಾಗಿ ಮೂರು ಸಸಿಗಳು ಇರುವುವು".

ಕುಮುದಚಂದ್ರನು ಗಾಬರಿಗೊಂಡು, " ಏನು? ಮೂರು ಸಸಿಗಳು ನನ್ನಲ್ಲಿರುವುವೆಂದವನು ಹೇಳಿದನೆ?" ಎಂದನು.

ಪುಷ್ಪಲತೆಯು ಹೇಳತೊಡಗಿದಳು–" ಆ ಮಾತು ನನಗೂ ಆಶ್ಚರ್ಯವನ್ನುಂಟುಮಾಡಿದುದು.. ನಾನು ಹಿಂತಿರುಗಿ ನೋಡಿದೆನು ಅವರಿಬ್ಬರೂ ತಮ್ಮ ಸಂಭಾಷಣೆಯಲ್ಲಿ ಹೆಚ್ಚು ನಿರತರಾಗಿದ್ದರಾಗಿದ್ದುದರಿಂದ ನನ್ನ ಕಡೆಗೆ ನೋಡಲಿಲ್ಲ.

" ನನ್ನ ತಂದೆಯು, 'ಆದರೆ ಅವನ ಬಳಿ ಸಸಿಗಳಿರುವುವೋ ಇಲ್ಲವೋ? ಹೇಗೆ ತಿಳಿಯುವುದು?' ಎಂದನು.

" ನಿರಂಜನನು, 'ಅವನನ್ನು ಕಾರಣಾಂತರದಿಂದ ಕೆಳಕ್ಕೆ ಕರೆದು

ಕೊಂಡು ಹೋಗು. ನಾನಷ್ಟರಲ್ಲಿ ಅವನ ಕಾರಾಗೃಹವನ್ನು ಶೋಧಿಸುವೆನು' ಎಂದನು".

ಅದನ್ನು ಕೇಳಿ ಕುಮುದಚಂದ್ರನು, "ಓಹೋ! ನಿನ್ನ ನಿರಂಜನನು ಕಳ್ಳಕೊರಮನಂತೆ ಕಾಣುತ್ತಾನೆ" ಎಂದನು

ಪುಷ್ಪಲತೆ—ಹಾಗೆಯೇ ನನಗೂ ಕಾಣುತ್ತಾನೆ

ಕುಮುದಚಂದ್ರನು ಬಹಳವಾಗಿ ಯೋಚಿಸಿ, "ಪುಷ್ಪಲತಾ!" ಎಂದನು

"ಏನು?"

"ಒಂದು ದಿನ ನೀನು ಸಸ್ಯಭೂಮಿಯನ್ನು ತಯಾರಿಸುತ್ತಿದ್ದಾಗ ಈ ನಿರಂಜನನು ಹಿಂಬಾಲಿಸಿ ಬಂದನೆಂದು ಹೇಳಿದೆಯಲ್ಲವೆ?"

"ನಿಜ. ಅವನು ಬಂದಿದ್ದನು".

"ಅವನು ಛಾಯೆಯಂತೆ ವೃಕ್ಷಗಳ ಹಿಂದೆ ಸರಿದುಹೋದನೆಂದು ಹೇಳಿದೆಯಲ್ಲವೆ?"

"ನಿಜ".

"ನೀನು ಮಾಡುತ್ತಿದ್ದ ಕಾರ್ಯಗಳೆಲ್ಲವನ್ನೂ ನೋಡಿದನಲ್ಲವೆ?"

"ಅದೂ ನಿಜವೇ"

ಕುಮುದಚಂದ್ರನು ವಿವರ್ಣವದನನಾಗಿ, "ಪುಷ್ಪಾ!" ಎಂದನು.

"ಏನು?"

"ಅವನು ನಿನಗಾಗಿ ಬರಲಿಲ್ಲ".

"ಮತ್ತಾರಿಗಾಗಿ?"

"ಅವನು ನಿನ್ನನ್ನು ಪ್ರೀತಿಸುತ್ತಿಲ್ಲ".

"ಮತ್ತಾರನ್ನು ಪ್ರೀತಿಸುತ್ತಾನೆ?"

"ಅವನು ನನ್ನ ಸಸಿಗಾಗಿ ಬಂದಿದ್ದನು -ಅವನು ನನ್ನ ಪುಷ್ಪವನ್ನು ಪ್ರೀತಿಸುತ್ತಾನೆ".

"ನಿಜವೇ!—ನೀವು ಹೇಳುವುದೂ ಸಾಧ್ಯವೆಂದು ತೋರುವುದು".

"ನೀನು ಇದನ್ನು ಸರಿಯಾಗಿ ಪರೀಕ್ಷಿಸಿ ತಿಳಿದುಕೊಳ್ಳಬೇಕು".

"ಅದು ಹೇಗೆ?"

"ಓಹೋ! ಅದು ಬಹಳ ಸುಲಭಕಾರ್ಯ!"

"ಹೇಗೆ ಹೇಳಿರಿ"

"ನಾಳೆಯದಿನ ಉದ್ಯಾನಕ್ಕೆ ಹೋಗು. ನೀನು ಅಲ್ಲಿಗೆ ಹೋಗುವುದು ನಿರಂಜನನಿಗೆ ತಿಳಿಯುವಂತೆ ನೀನು ಏರ್ಪಡಿಸಿರಬೇಕು ಆಗವನು ನಿನ್ನನ್ನು ಹಿಂಬಾಲಿಸುವನು ಭೂಮಿಯಲ್ಲಿ ಸಸಿಯನ್ನು ನೆಡುವಂತೆ ನಟಿಸು. ಬಳಿಕ ಉದ್ಯಾನವನ್ನು ಬಿಟ್ಟು ಹೊರಟುಹೋಗು ಆದರೆ ಬಾಗಿಲಿನ ಕಂಡಿಯಿಂದ ಎಲ್ಲವನ್ನೂ ನೋಡುತ್ತಿರು".

"ಸರಿ. ಬಳಿಕ ಮಾಡುವುದೇನು?"

"ಬಳಿಕಲೆ? ನಾನು ಹೇಳಿದಂತೆ ಮಾಡು. ಮುಂದೆ ಯೋಚಿಸೋಣ"

ಪುಷ್ಪಲತೆಯು ನಿಟ್ಟುಸಿರಿಟ್ಟು, "ಓಹೋ! ನೀವು ನಮ್ಮ ಸಸಿಗಳ ಮೇಲೆ ಬಹಳ ಪ್ರೇಮವನ್ನಿಟ್ಟಿರುವಿರಿ" ಎಂದಳು

ಕುಮುದಚಂದ್ರನು ಹಾಗೆಯೇ ನಿಟ್ಟುಸಿರಿಟ್ಟು, "ನಿಜವನ್ನು ಹೇಳುತ್ತೇನೆ ಕೇಳು ಪುಷ್ಪಾ! ನಿನ್ನ ತಂದೆಯು ಆ ಬಡಸಸಿಯನ್ನು ತುಳಿದು ಕೊಂದುಹಾಕಿದ ಮೊದಲ್ಗೊಂಡು ನನ್ನ ಅರ್ಧಶರೀರವೇ ನಾಶವಾದಂತಾಗಿದೆ".

"ಈಗ ನನ್ನ ಮಾತನ್ನು ಕೇಳಿರೋಣಾಗಲಿ ಬೇರೆ ಉಪಾಯವೊಂದನ್ನು ಮಾಡುವಿರಾ?"

"ಅದೇನು?"

"ನನ್ನ ತಂದೆಯು ಹೇಳಿದುದನ್ನು ಒಪ್ಪುವಿರಾ?"

"ಅವನು ಹೇಳಿದುದೇನು?"

"ನೂರಾರು ಟ್ಯೂಲಿಪ್ ಪುಷ್ಪಗಳನ್ನು ಕೊಂಡುಕೊಳ್ಳಬಹುದೆಂದು ಅವನು ಅಪ್ಪಣೆಕೊಡಲಿಲ್ಲವೆ?"

"ನಿಜ ಕೊಟ್ಟಿದ್ದಾನೆ".

"ಎರಡು ಮೂರು ಸಸಿಗಳನ್ನು ತೆಗೆದುಕೊಳ್ಳಿ. ಅವುಗಳೊಡನೆ ನಿಮ್ಮ ಮೂರನೆ ಸಸಿಯನ್ನೂ ನೆಟ್ಟು ಬೆಳೆಸಿರಿ".

ಕುಮುದಚಂದ್ರನು ಹುಬ್ಬುಗಂಟಿಕ್ಕಿ ಸ್ವಲ್ಪ ಯೋಚಿಸಿ, "ನಿಜ. ಆದೇನೋ ಸರಿಯಾದ ಯೋಚನೆ. ಆದರೆ ನಿನ್ನ ತಂದೆಯೊಬ್ಬನೇ

ಇದ್ದಿದ್ದರೆ ಹಾಗೆ ಮಾಡಬಹುದಾಗಿತ್ತು. ಈಗ ಈ ನಿರಂಜನನೊಬ್ಬನಿರುವ ನಲ್ಲವೆ? ಅವನು ನಮ್ಮ ಚಲನವಲನಗಳನ್ನು ಬಹು ಜಾಗರೂಕತೆಯಿಂದ ಕಾಯುತ್ತಿರುತ್ತಾನೆ'' ಎಂದನು

ಪುಷ್ಪಲತೆಯು ಉತ್ತರಕೊಡುತ್ತ, ಕಿರುನಗೆಯಿಂದ, ''ನಿಜ, ನಿಜ. ಆದರೆ ಯೋಚಿಸಿನೋಡಿ ನಿಮಗೆ ಅತುಳ ಸಂತುಷ್ಟಿಯನ್ನೀಯುವ ಕಾರ್ಯವನ್ನು ಬಿಟ್ಟುಬಿಡಬೇಕಾಗುವುದಲ್ಲಾ!'' ಎಂದಳು.

ಅವಳ ಮಾತು ಅರ್ಥಗರ್ಭಿತವಾಗಿತ್ತು ಸ್ವಲ್ಪ ಕುಹಕದಿಂದ ಹೇಳಿದಂತಿತ್ತು ಅವನು ಸ್ವಲ್ಪ ಯೋಚಿಸುತ್ತಿದ್ದನು ಯಾವುದೋ ನಿರ್ಧಾರಕ್ಕೆ ಬರಲು ಬಹಳವಾಗಿ ಚಿಂತಿಸುತ್ತಿದ್ದನು. ಕಡೆಗೆ ಹೇಳ ತೊಡಗಿದನು—''ಬೇಡ, ಬೇಡ ನನಗಿರುವುದು ಈಗ ಅದೊಂದೇ ಸಸಿ. ಅದನ್ನು ಅನ್ಯಾಯವಾಗಿ ಕೋಪಾಸೂಯೆಗಳಿಗೆ ಬಲಿಕೊಟ್ಟರೆ ದೊಡ್ಡ ತಪ್ಪುಮಾಡಿದಂತಾಗುವುದು ಆಗ ನನ್ನನ್ನಾರೂ ಕ್ಷಮಿಸರು. ಬೇಡ ಪುಷ್ಪಾ! ಬೇಡ. ಹಾಗೆ ಮಾಡುವುದು ಬೇಡ ನಾಳೆಯದಿನ ನಿನ್ನ ಸಸಿಯನ್ನು ನೆಡುವ ಸ್ಥಳವಾವುದೆಂಬುದನ್ನು ಕಂಡುಹಿಡಿಯೋಣ ನೀನು ನನ್ನ ಹೇಳಿಕೆಯಂತೆ ಅದನ್ನು ನೆಡಬೇಕು ಮೂರನೆಯ ಸಸಿಯನ್ನು ಮಾತ್ರ ಬಹಳ ಜಾಗರೂಕತೆಯಿಂದ ಕಾಪಾಡು ಕೃಪಣನು ತನ್ನ ಧನ ವನ್ನು ಕಾಪಾಡುವಂತೆ—ತಾಯಿಯು ಮಗುವನ್ನು ಪಾಲಿಸುವಂತೆ—ಗಾಯಗೊಂಡವನು ರಕ್ತವನ್ನು ರಕ್ಷಿಸುವಂತೆ—ಆ ಸಸಿಯನ್ನು ರಕ್ಷಿಸು ಪುಷ್ಪಾ!—ನನ್ನ ಹೃದಯಾಂತರಾಳದಲ್ಲಿ ಆವುದೋ ಪ್ರಾಣಿಯು ಹೇಳು ತ್ತಿದೆ—ಆ ಸಸಿಯೇ ನಮ್ಮನ್ನುಳಿಸುವುದೆಂದು ತಿಳಿಯಿತೆ ಪುಷ್ಪಾ?''

ಪುಷ್ಪಲತೆಯು ಸ್ವಲ್ಪ ವ್ಯಾಕುಲಚಿತ್ತಳಾಗಿದ್ದರೂ ಗಂಭೀರಭಾವದಿಂದ, ''ಯೋಚಿಸಬೇಡಿ ಬಾಬುಗಳೆ! ಯೋಚಿಸಬೇಡಿ ನಿಮ್ಮ ಅಭಿಪ್ರಾಯ ಗಳನ್ನು ಆಜ್ಞೆಗಳಂತೆ ಪಾಲಿಸುತ್ತೇನೆ'' ಎಂದಳು.

ಕುಮುದಚಂದ್ರನು ಮುಂದರಿದು ಹೇಳಲಾರಂಬಿಸಿದನು—''ನಿನ್ನ ಚಲನವಲನಗಳನ್ನಾರಾದರೂ ಪರೀಕ್ಷಿಸುತ್ತಿರುವರೆಂದು ತಿಳಿದುಬಂದರೆ—ನಿನ್ನ ಭಾಷಣದಿಂದ ನಿನ್ನ ತಂದೆಗಾಗಲಿ ಆ ನಿರಂಜನನಿಗಾಗಲಿ ಸಂಶಯ ಉಂಟಾಗಿದ್ದರೆ—ಒಂದು ನಿಮಿಷವೂ ಯೋಚಿಸದೆ ನನ್ನನ್ನು ದೂರಮಾಡಿ

ಬಿಡು. ನಾನು ನಿನ್ನಿಂದಲೇ ಬದುಕಿರುವೆನು—ನನಗೆ ಪ್ರಪಂಚದಲ್ಲಿ ನಿನ್ನನ್ನುಳಿದು ಮತ್ತಾರೂ ಹಿತವರಿಲ್ಲ-ಆದರೂ ನನ್ನನ್ನು ದೂರಮಾಡು-ನನ್ನನ್ನು ನೋಡಲು ಬರಬೇಡ".

ಪುಷ್ಪಲತೆಗೆ ಹೃದಯವಿದ್ರಾವಕವಾದಂತಾಯಿತು. ಅವಳ ಕಣ್ಣುಗಳಲ್ಲಿ ಅಶ್ರುಬಿಂದುಗಳು ತುಂಬಿದುವು. ಅವಳು ಅಶ್ರುಪೂರಿತನಯನಗಳಿಂದಲೇ "ಅಯ್ಯೋ!" ಎಂದು ಅತ್ತಳು.

"ಅದೇನು ಪುಷ್ಪಾ?"

"ಒಂದು ವಿಷಯವು ವಿಶದವಾಯಿತು".

"ಅದಾವವಿಷಯ?"

ಪುಷ್ಪಲತೆಯು ಅಳುತಳುತ, "ವಿಷಯವೆ? ನೀವು ನಿಮ್ಮ ಪುಷ್ಪಗಳನ್ನು ಅಪರಿಮಿತವಾಗಿ ಪ್ರೀತಿಸುವಿರೆಂಬ ವಿಷಯವು ವಿಶದವಾಯಿತು ಬೇರೆ ಯಾವವಿಧವಾದ ಪ್ರೀತಿಗೂ ನಿಮ್ಮ ಹೃದಯದಲ್ಲಿ ಅವಕಾಶವಿಲ್ಲ" ಎಂದಳು

ಅಷ್ಟು ಹೇಳಿದೊಡನೆಯೇ ಅವಳು ಅಲ್ಲಿಂದ ಓಡಿದಳು.

ಆದಿನ ರಾತ್ರಿಯನ್ನು ಕಳೆಯುವುದು ಕುಮುದಚಂದ್ರನಿಗೆ ಅತಿ ಪ್ರಯಾಸಕರವಾಗಿತ್ತು. ಪುಷ್ಪಲತೆಗೆ ಚಿಂತೆಯೂ ಬೇಸರವೂ ಆಗಿದ್ದುವೆಂದವನಿಗೆ ತಿಳಿಯಿತು ಹಾಗಾಗಲು ಕಾರಣಗಳೂ ಹೇರಳವಾಗಿದ್ದುವೆಂದು ಅವನರಿತುಕೊಂಡನು ಅವಳು ಬಂದಿಯನ್ನು ನೋಡಲು ಪುನಃ ಬರುವಂತಿಲ್ಲ! ಪುಷ್ಪಲತೆಯ ವಿಷಯವಾಗಲಿ ತನ್ನ ಪುಷ್ಪಗಳ ವಿಷಯವಾಗಲಿ ತಿಳಿಯುವಂತಿಲ್ಲ!!

ಸಸ್ಯವರ್ಗದವರಿಗೂ ನಮ್ಮ ಕಥಾನಾಯಕನಿಗೂ ಅವಮಾನಕರವಾಗುವಂತೆ ಅವನು ಪುಷ್ಪಗಳ ವಿಷಯಕ್ಕಿಂತಲೂ ಪುಷ್ಪಲತೆಯ ವಿಷಯಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಡತೊಡಗಿದನೆಂದು ಹೇಳಲೇಬೇಕು. ಅವನು ರಾತ್ರಿ ಸುಮಾರು ಮೂರು ಗಂಟೆಯ ಸಮಯದಲ್ಲಿ ಆಯಾಸದಿಂದಲೂ ಪಶ್ಚಾತ್ತಾಪದಿಂದಲೂ ನೊಂದು ನಿದ್ರಿಸತೊಡಗಿದಾಗ ಅವನ ಕನಸಿನಲ್ಲಿ ಫುಲ್ಲನಯನವುಳ್ಳ ಪುಷ್ಪಲತೆಯೇ ಪ್ರಾಧಾನ್ಯವನ್ನು ಹೊಂದಿ ನೃತ್ಯಮಾಡುತ್ತಿದ್ದಳು.

# ಏಕೋನವಿಂಶತಿ ಪರಿಚ್ಛೇದ

## ಪುಷ್ಪವೂ ಪುಷ್ಪಲತೆಯೂ

ಪುಷ್ಪಲತೆಯು ತನ್ನ ಏಕಾಂತಗೃಹದಲ್ಲಿದ್ದಳಾಗಿ ಅವಳಿಗೆ ಕುಮುದ ಚಂದ್ರನ ಕನಸಿನ ವಿಚಾರವು ಸ್ವಲ್ಪವೂ ತಿಳಿದುಬರಲಿಲ್ಲ. ಅವನು ಹೇಳಿದ್ದ ಮಾತಿನಿಂದ ಅವನ ಕನಸಿನಲ್ಲಿ ಪುಷ್ಪವೇ ಬಂದಿರಬೇಕೆಂದು ಅವಳು ಭಾವಿಸಿದ್ದಳು ಆದರೂ ಅವಳು ತಪ್ಪುಭಾವನೆಯುಳ್ಳವಳಾಗಿದ್ದುದು ನಿಜ, ಈ ವಿಷಯವನ್ನಾರೂ ಅವಳಿಗೆ ತಿಳಿಸುವವರಿರಲಿಲ್ಲ. ಆದುದರಿಂದ ಅವಳು ನಿದ್ರಿಸಿ ಕನಸುಕಾಣುವಂತಿರಲಿಲ್ಲ. ಅವಳು ಅಳುತ್ತಿದ್ದಳು.

ಆ ಬಡಹುಡುಗಿಯು ರಾತ್ರಿಯಲ್ಲಿ ರೆಪ್ಪೆಮುಚ್ಚದೆ ಕುಳಿತು ರೋದನ ಮಾಡುತ್ತಿದ್ದಳು. ಪ್ರಾತಃಕಾಲವಾಗುವವೇಳೆಗೆ ಇನ್ನೆಂದಿಗೂ ಕುಮುದನ ಕೊಟಡಿಯ ಬಳಿಗೆ ಹೋಗುವುದಿಲ್ಲವೆಂದು ನಿರ್ಧರಿಸಿಬಿಟ್ಟಳು. ಆದರೆ ಅವನಿಗೆ ಪುಷ್ಪಗಳಮೇಲೆ ಎಷ್ಟು ಪ್ರೇಮವಿದ್ದಿತೆಂಬುದನ್ನು ಅವಳು ಬಲ್ಲವ ಳಾಗಿದ್ದಳಾಗಿ ಅವುಗಳ ವಿಷಯವನ್ನು ಬರೆದು ತಿಳಿಸಲು ಅನುಕೂಲವಾಗ ಲೆಂದು ತನ್ನ ಓದುಬರಹಗಳನ್ನು ಮುಂದುವರಿಸಿದಳು. ಈಗಾಗಲೇ ಅವಳಿಗೆ ಸ್ವಲ್ಪಮಟ್ಟಿಗೆ ಓದುಬರಹಗಳು ಬರುತ್ತಿದ್ದುದರಿಂದ ಗುರುವಿನ ಸಹಾಯವಿಲ್ಲದೆಯೇ ವಿದ್ಯೆಯನ್ನು ಅವಳು ವೃದ್ಧಿಪಡಿಸಿಕೊಳ್ಳುವ ಸ್ಥಿತಿ ಯಲ್ಲಿದ್ದಳು. ಕುಮುದನನ್ನು ನೋಡಿ ಅವಳು ಮೊದಲು ಮೊದಲು ಪಶ್ಚಾತ್ತಾಪವನ್ನು ಮಾತ್ರ ಪಡುತ್ತಿದ್ದಳು. ಈಗ ಪಶ್ಚಾತ್ತಾಪವು ಪೂರ್ತಿ ಯಾಗಿ ಮಾರ್ಪಟ್ಟು ಅವನಲ್ಲಿ ಪ್ರೇಮವು ಅಂಕುರಿಸಿದ್ದಿತು. ಅಂತಹ ಪ್ರೇಮಪಾತ್ರನು ಗುರುವಾಗಿ ನಿಂತು ತನಗೆ ಓದುಬರಹಗಳನ್ನು ಹೇಳಿ ಕೊಡುವುದು ಅಸಾಧ್ಯವಾಗುವ ಸಂದರ್ಭವೊದಗುತ್ತಲೇ ಅವಳು ಬೇರೆ ಗುರುವಿನ ಸಹಾಯವನ್ನಪೇಕ್ಷಿಸದೆ ತಾನೇ ಗುರುವಿನ ಸ್ಥಾನವನ್ನಲಂಕರಿ ಸಿದಳು.

ಹೀಗಾಗಿ ಪುಷ್ಪಲತೆಯು ರಮಾನಾಥಬಾಬುವಿನ ಗೀತಾಪುಸ್ತಕವನ್ನು ಪರಿಸತೊಡಗಿದಳು. ಅದರ ಕಡೆಯ ಪುಟದಮೇಲೆ ಕುಮುದಚಂದ್ರನ ಉಯಿಲು ಬರೆಯಲ್ಪಟ್ಟಿತ್ತು. ಅದನ್ನವಳು ಓದಿದಾಗಲೆಲ್ಲಾ ಕಂಬನಿ

ಕರೆಯುತ್ತೆ, "ಅಯ್ಯೋ! ಆ ಸಮಯದಲ್ಲಿ ಅವರು ನನ್ನನ್ನು ಪ್ರೀತಿಸುತ್ತಿದ್ದರೆಂದು ಭಾವಿಸಿಕೊಂಡಿದ್ದೆನು" ಎಂದುಕೊಳ್ಳುತ್ತಿದ್ದಳು.

ಪಾಪ! ಪುಷ್ಪಲತೆಯು ಮೋಸಹೋಗಿದ್ದಳು. ಯಾವ ಸಮಯದಲ್ಲಿ ಅವಳು ಈ ರೀತಿಯಾಗಿ ನೊಂದುಕೊಂಡು ದುಃಖಿಸುತ್ತಿದ್ದಳೋ ಆ ಸಮಯದಲ್ಲಿಯೇ ಕುಮುದಚಂದ್ರನ ಪ್ರೀತಿಯು ಅವಳಮೇಲೆ ಅತ್ಯಧಿಕವಾಗಿದ್ದಿತು. ಅವಳು ಮಾತ್ರ ಅದನ್ನು ಅರಿತಿರಲಿಲ್ಲ. ಪುಷ್ಪದ ಮೇಲಿನ ಪ್ರೀತಿಗಿಂತಲೂ ಅವನಿಗೆ ಪುಷ್ಪಲತೆಯ ಮೇಲಿನ ಪ್ರೇಮವು ಅಧಿಕವಾಗಿದ್ದಿತೆಂದು ಅವಳರಿತಿರಲಿಲ್ಲ

ಓದುವುದರ ಜತೆಗೆ ಅವಳು ಬರೆಯುವುದನ್ನೂ ಅಭ್ಯಾಸಮಾಡುತ್ತಿದ್ದಳು ಕುಮುದಚಂದ್ರನು ಯಾವದಿನ ವಿವೇಕಹೀನನಾಗಿ ತನ್ನ ಮನಸ್ಸನ್ನು ಬಿಚ್ಚಿಹೇಳಲು ಹೋಗಿ ಅವಳು ನೊಂದುಕೊಳ್ಳುವಂತೆ ಮಾಡಿದನೋ ಆ ದಿನದ ವೇಳೆಗೆ ಅವಳಿಗೆ ಬರೆಯಲು ಸ್ವಲ್ಪಮಟ್ಟಿಗೆ ಬರುತ್ತಿದ್ದಿತು. ಅವಳು ಬೇಗಬೇಗನೆ ಬರೆಯುವುದನ್ನು ಕಲಿತು ಎಂಟು ದಿನಗಳಮೇಲೆ ಟ್ಯೂಲಿಪದ ವಿಷಯವಾಗಿ ಕುಮುದಚಂದ್ರನಿಗೆ ಬರೆಯಬೇಕೆಂದಿದ್ದಳು ಪುಷ್ಪವನ್ನು ಬೆಳೆಸುವ ವಿಧಾನವನ್ನವನು ಅವಳಿಗೆ ಹೇಳುತ್ತಿದ್ದಾಗ ಅವಳು ಎಲ್ಲವನ್ನೂ ಸರಿಯಾಗಿ ಕೇಳಿ ಮನನಮಾಡಿಕೊಂಡಿದ್ದಳು

ಕುಮುದಚಂದ್ರನಾದರೋ ಎಂದಿಗಿಂತಲೂ ಹೆಚ್ಚಾಗಿ ಪ್ರೇಮಪೀಡಿತನಾಗಿದ್ದನು ಟ್ಯೂಲಿಪ್ ಪುಷ್ಪವು ಅವನ ಮನಸ್ಸಿನಲ್ಲಿದ್ದಿತಾದರೂ ಅದಕ್ಕಾಗಿ ಎಲ್ಲವನ್ನೂ—ಕಡೆಗೆ ಪುಷ್ಪಲತೆಯನ್ನೂ—ಕಳೆದುಕೊಳ್ಳಲು ಅವನು ಸಿದ್ಧನಾಗಿರಲಿಲ್ಲ. ಪ್ರಕೃತಿಸೌಂದರ್ಯವನ್ನು ಸೂಚಿಸುತ್ತಿದ್ದು, ಕಲಾವಿಶೇಷಗಳಲ್ಲೊಂದೆನಿಸಿದ್ದ ಟ್ಯೂಲಿಪ್ ಕುಸುಮವನ್ನು ತನ್ನ ಪ್ರಿಯತಮೆಯ ವಕ್ಷಸ್ಥಳದಲ್ಲಿಡಲು ಅವನು ಅತೀವ ಕಾತರನಾಗಿದ್ದನು

ಪುಷ್ಪಲತೆಯು ಕೋಪಗೊಂಡು ಹೊರಟುಹೋದ ದಿನ ಕುಮುದಚಂದ್ರನು ಬಹಳ ವ್ಯಥೆಪಡುತ್ತಿದ್ದನು. ಎಂದಿನಂತೆ ಅವಳು ರಾತ್ರಿಯಲ್ಲಿ ಬರುವಳೋ ಇಲ್ಲವೋ ಎಂಬ ಸಂಶಯವು ಅವನನ್ನು ಬಾಧಿಸುತ್ತಿದ್ದಿತು.

ಸಾಯಂಕಾಲವಾಗುವ ವೇಳೆಗೆ ಅವನಿಗೆ ಬೇರೆ ಯೋಚನೆಯೇ ಇಲ್ಲ ದಂತಾಯಿತು.

ಕತ್ತಲಾಗುತ್ತಲೇ ಕುಮುದನ ಹೃದಯವು ಡವಡವನೆ ಬಡಿದುಕೊಳ್ಳ ತೊಡಗಿದುದು ಅವನು ಹಿಂದಿನ ದಿನ ರಾತ್ರಿ ಪುಷ್ಪಲತೆಗೆ ಹೇಳಿದ್ದ ಮಾತುಗಳು ಅವನ ಸ್ಮೃತಿಗೆ ಬಂದುವು. ತನ್ನನ್ನು ಸಮಾಧಾನಗೊಳಿಸು ತ್ತಿದ್ದಾ ಬಾಲೆಯನ್ನು ಬರಬೇಡವೆನ್ನಲು ಹುಚ್ಚು ಹಿಡಿದಿದ್ದಿತೇನೆಂದು ಅವನು ಆತ್ಮನಿಂದೆಮಾಡಿಕೊಳ್ಳತೊಡಗಿದನು. ಅವಳ ಮುಖವನ್ನು ನೋಡಿಯೇ ಜೀವಿಸಿರಬೇಕು—ಇಲ್ಲವಾದರೆ ಮಡಿಯಬೇಕು—ಎನ್ನುವ ಪರಿಸ್ಥಿತಿಯಲ್ಲಿ ತಾನಿದ್ದರೂ ಅವಳಿಗೆ ಅಂತಹ ಕಠೋರವಚನಗಳನ್ನು ಹೇಳಲು ತನಗೆ ಮನಸ್ಸು ಬಂದುದು ಹೇಗೆ?—ಇವೇ ಮುಂತಾದ ಯೋಚನೆಗಳಲ್ಲಿ ಬಂದಿಯು ಕಾಲಕಳೆಯುತ್ತಿದ್ದನು.

ಗಡಿಯಾರವು ಗಂಟೆಹೊಡೆಯುವುದನ್ನು ಕುಮುದನ ಕಾರಾಗೃಹದಲ್ಲಿ ಚೆನ್ನಾಗಿ ಕೇಳಬಹುದಾಗಿದ್ದಿತು. ಗಡಿಯಾರವು ಏಳುಗಂಟೆಗಳನ್ನು ಹೊಡೆಯಿತು—ಎಂಟುಗಂಟೆಗಳನ್ನೂ—ಕಡೆಗೆ ಒಂಭತ್ತುಗಂಟೆಗಳನ್ನೂ ಹೊಡೆಯಿತು. ಒಂಭತ್ತುಗಂಟೆಗಳಾಗುತ್ತಲೇ ಕುಮುದನ ಹೃದಯವು ಹಾರಿಹೋಗುವಂತೆ ಶಬ್ದಮಾಡುತ್ತ ಬಡಿಯಲಾರಂಭಿಸಿದುದು.

ಆದರೆ ಅವನಿಗೆ ಮತ್ತಾವ ಶಬ್ದವೂ ಕೇಳಿಬರಲಿಲ್ಲ. ಕುಮುದ ಚಂದ್ರನು ಎದೆಯಮೇಲೆ ಕೈಯಿಟ್ಟುಕೊಂಡು ಹೃದಯದ ಹುಚ್ಚುವೇಗ ವನ್ನೂ ಶಬ್ದವನ್ನೂ ಅಡಗಿಸಲೆತ್ನಿಸಿದನು. ಬಳಿಕ ಕಿವಿಗೊಟ್ಟು ಕೇಳ ತೊಡಗಿದನು. ಪುಷ್ಪಲತೆಯ ಹೆಜ್ಜೆಯ ಶಬ್ದವೂ, ಅವಳ ಉಡುಪಿನ ನಿನಾದವೂ ಅವನ ಕಿವಿಗೆ ಚೆನ್ನಾಗಿ ತಿಳಿದಿದ್ದುವು. ಅವುಗಳನ್ನು ಕೇಳಿ ದೊಡನೆಯೇ ಅವನು, "ಪುಷ್ಪಲತೆಯು ಬರುತ್ತಿದ್ದಾಳೆ" ಎಂದು ತಿಳಿದು ಕೊಳ್ಳುತ್ತಿದ್ದನು. ಆದರೆ ಈ ದಿನ ಕಾರಾಗಾರದ ನಿಶ್ಶಬ್ದತೆಯನ್ನು ಯಾವ ಶಬ್ದವೂ ಭೇದಿಸಲಿಲ್ಲ. ಗಡಿಯಾರವು ಒಂಭತ್ತೂವರೆಗಂಟೆಯನ್ನೂ ಕ್ರಮವಾಗಿ ಹತ್ತುಗಂಟೆಗಳನ್ನೂ ಸೂಚಿಸಿದುದು. ಕಾರಾಗೃಹಕ್ಕೆ ಸಂಬಂಧಿ ಸಿದವರಿಗೆಲ್ಲರಿಗೂ ಈ ವಿಷಯವು ತಿಳಿಯುವಂತೆ ಗಡಿಯಾರವು ಗಟ್ಟಿಯಾಗಿ ಕೂಗಿ ಹೇಳಿದುದು.

ಪುಷ್ಪಲತೆಯು ಪ್ರತಿದಿನವೂ ಬಂದು ಈ ವೇಳೆಗೆ ಹೊರಟುಹೋಗು ತ್ತಿದ್ದಳು. ಆದರೆ ಈ ದಿನ ಬರಲೇ ಇಲ್ಲ. ಹಾಗಾದರೆ ತಾನು ಭಯ ಪಡುತ್ತಿದ್ದಂತೆಯೇ ಆಯಿತೇನೆಂದು ಕುಮುದನು ಯೋಚಿಸತೊಡಗಿದನು. ಪುಷ್ಪಲತೆಯು ಕೋಪಗೊಂಡು ತನ್ನ ಕಿರುಮನೆಯಲ್ಲಿಯೇ ನಿಂತು ಬಂದಿ ಯನ್ನು ಮರೆತುಬಿಟ್ಟದ್ದಳೆ? ಅವನು ಯೋಚಿಸತೊಡಗಿದನು—"ನನ್ನ ತಪ್ಪಿಗೆ ಸರಿಯಾದ ಶಿಕ್ಷೆಯಾಗಿದೆ ಅವಳು ಮಾಡಿದುದು ಸರಿಯೇ. ನಾನು ಅವಳ ಸ್ಥಿತಿಯಲ್ಲಿದ್ದಿದ್ದರೆ ಹೀಗೆಯೇ ಮಾಡುತ್ತಿದ್ದೆನು".

ಹೀಗೆ ಯೋಚಿಸುತ್ತಿದ್ದರೂ ಕುಮುದನು ಆಗಾಗ ಕಿವಿಗೊಟ್ಟು ಕೇಳುತ್ತಿ ಕಾದು ನೋಡುತ್ತಿ ಆಶಾಪರವಶನಾಗಿ ಮಧ್ಯರಾತ್ರಿಯವರೆಗೂ ಕಾಲಕಳೆದನು ಬಳಿಕ ಹಾಸಿಗೆಯಮೇಲೆ ಬಿದ್ದನು. ಆ ದುಃಖಕರವಾದ ರಾತ್ರಿಯು ಮುಗಿಯುವಂತೆಯೇ ಅವನಿಗೆ ಕಾಣಿಸಲಿಲ್ಲ. ಪ್ರಾತಃಕಾಲ ದಲ್ಲಿ ಕೂಡ ಅವನಿಗೆ ಆಶೆಯನ್ನುಂಟುಮಾಡುವ ವಿಷಯವಾವುದೂ ಸಂಭವಿಸಲಿಲ್ಲ.

ಪ್ರಾತಃಕಾಲದಲ್ಲಿ ಸುಮಾರು ಎಂಟುಗಂಟೆಯ ವೇಳೆಗೆ ಕುಮುದನ ಕಾರಾಗೃಹದ ಬಾಗಿಲು ತೆರೆಯಲ್ಪಟ್ಟಿತು. ಅವನು ತಿರುಗಿ ಕೂಡ ನೋಡ ಲಿಲ್ಲ. ಅವನಿಗೆ ಕಾಳೀಚರಣನ ಹೆಜ್ಜೆಯ ಶಬ್ದವು ಕೇಳಿಸಿದುದು. ಆದರೆ ಅವನೊಡನೆ ಮತ್ತಾರೂ ಇರಲಿಲ್ಲವೆಂದು ಹೆಜ್ಜೆಯ ನಿನಾದದಿಂದಲೇ ಕುಮುದನು ಕಂಡುಹಿಡಿದಿದ್ದನು. ಹೀಗಾಗಿ ಅವನು ಕಾಳೀಚರಣನ ಕಡೆಗೆ ತಿರುಗಿ ಕೂಡ ನೋಡಲಿಲ್ಲ. ಆದರೂ ಅವನೊಡನೆ ಮಾತನಾಡಿ ಪುಷ್ಪಲತೆಯ ವಿಷಯವನ್ನರಿಯಬೇಕೆಂದು ಅವನಿಗೆ ಆಶೆಯಾಗಿದ್ದಿತು. ಅವಳೇನಾದರೂ ಕಾಹಿಲೆಯಿಂದ ಪೀಡಿತಳಾಗಿದ್ದು ಆದರಿಂದ ಬರಲಿಲ್ಲ ವೆಂದು ತಿಳಿದುಬಂದಿದ್ದರೆ ಅವನಿಗೆ ಸಮಾಧಾನವಾಗುತ್ತಿದ್ದಿತು. ಅವನು ಕೇಳುವಷ್ಟರಲ್ಲಿ ಕಾಳೀಚರಣನು ಹೊರಟುಹೋದನು.

ಕಾಳೀಚರಣನೊಡನೆ ಪ್ರಾತಃಕಾಲದಲ್ಲಿ ಪುಷ್ಪಲತೆಯು ಬರುವುದು ಅಪೂರ್ವವಾಗಿದ್ದಿತು. ಆದುದರಿಂದ ರಾತ್ರಿಯಾಗುವಷ್ಟರಲ್ಲಿ ಅವಳು ಅಲ್ಲಿಗೆ ಬರುವುದು ಅಸಂಭವವೆಂದು ಅವನಿಗೆ ತಿಳಿದಿತ್ತು. ಆದರೂ ಅವಳು ತನ್ನ ನಿಯಮಗಳನ್ನುಲ್ಲಂಘಿಸಿ ಬಂದುಬಿಡಬಹುದೆಂದು ಅವನು ಆಗಾಗ

ಬಾಗಿಲ ಬಳಿ ಕಿವಿಗೊಟ್ಟು ಕೇಳುತ್ತಲೂ, ತಟ್ಟನೆ ಬಾಗಿಲ ಬಳಿಯಿದ್ದ ಕಿಟಕಿಯ ಬಳಿ ನೋಡುತ್ತಲೂ ಸಮಯ ವ್ಯಯಮಾಡಿದನು.

ಕಾಳೀಚರಣನು ಎರಡನೆಯ ಬಾರಿ ಬಂದಾಗ ಕುಮುದನು ಎಂದಿನಂತಿರದೆ ಮೃದುಮಧುರವಾಣಿಯಿಂದ ಪುಷ್ಪಲತೆಯ ಆರೋಗ್ಯದ ವಿಚಾರವಾಗಿ ಪ್ರಶ್ನೆಮಾಡಿದನು ಜೈಲರನು ಸಂಗ್ರಹವಾದ ಉತ್ತರವನ್ನೀಯುತ್ತ, "ಎಲ್ಲವೂ ಸರಿಯಾಗಿದೆ" ಎಂದನು

ಕಾಳೀಚರಣನು ಮೂರನೆಯ ಬಾರಿ ಬಂದಾಗ ಕುಮುದನು ಬೇರೆ ವಿಧವಾಗಿ ಪ್ರಶ್ನಿಸುತ್ತ, "ಕಾರಾಗೃಹದಲ್ಲೆಲ್ಲಿಯೋ ಆಗಲಿ ಯಾರೂ ಕಾಹಿಲೆಯಿಂದಿಲ್ಲವಷ್ಟೆ?" ಎಂದನು

ಜೈಲರನು ಮತ್ತೆ ಸಂಗ್ರಹವಾದ ರೀತಿಯಲ್ಲಿ "ಇಲ್ಲ" ಎಂದು ಹೇಳಿ ಬಂದಿಯ ಮುಖಕ್ಕೆ ತಗಲುವಂತೆ ಬಾಗಿಲನ್ನು ಮುಚ್ಚಿಕೊಂಡು ಹೋದನು ಇಂತಹ ವಿನಯೋಕ್ತಿಗಳನ್ನು ಕಾಳೀಚರಣನು ಎಂದೂ ಬಂದಿಯಿಂದ ಕೇಳಿರಲಿಲ್ಲವಾಗಿ ಅವನು ಯೋಚಿಸತೊಡಗಿ, ತನಗೆ ಬಂದಿಯು ಮೋಸಮಾಡುವ ಉದ್ದೇಶದಿಂದಿದ್ದಾನೆಂದು ಭಾವಿಸಿಕೊಂಡನು.

ಬಂದಿಯು ಪುನಃ ಒಬ್ಬನೇ ಕಾರಾಗಾರದಲ್ಲುಳಿದನು. ಸಾಯಂಕಾಲ ಏಳುಗಂಟೆಯವೇಳೆಗೆ ಹಿಂದಿನ ದಿನದಂತೆಯೇ ಕುಮುದನಿಗೆ ಆಶೆಯೂ ಯೋಚನೆಯೂ ಉಂಟಾದುವು

ನಿಮಿಷಗಳೂ—ಹಾಗೆಯೇ ಗಂಟೆಗಳೂ ಕಳೆದುಹೋದುವು. ಬಡ ಕುಮುದನ ಕಾರಾಗಾರವನ್ನು ಬೆಳಗುತ್ತಿದ್ದ ಜ್ಯೋತಿಯು ಮಾತ್ರ ಕಂಡುಬರಲಿಲ್ಲ ಆ ಅಪೂರ್ವ ಜ್ಯೋತಿಯು ತಾನಿರುವವರೆಗೆ ಕಾರಾಗೃಹವನ್ನು ಬೆಳಗುತ್ತಿದ್ದುದಲ್ಲದೆ ತಾನು ಪುನಃ ಬರುವವರೆಗೆ ಬೇಕಾಗುವಷ್ಟು ಬೆಳಕನ್ನು ಬಿಟ್ಟುಹೋಗುತ್ತಿದ್ದಿತು ಆ ರಾತ್ರಿಯನ್ನು ಕುಮುದನು ಅತಿದುಃಖದಿಂದ ಕಳೆದನು

ಮರುದಿನ ಬೆಳಗ್ಗೆ ಕಾಳೀಚರಣನು ಬಂದನು. ಅವನು ಎಂದಿಗಿಂತಲೂ ಭೀಕರನಾಗಿಯೂ ಕ್ರೂರಿಯಾಗಿಯೂ ಇದ್ದಂತೆ ಕುಮುದನಿಗೆ ಕಂಡುಬಂದನು ಪುಷ್ಪಲತೆಯು ಬಾರದಿರುವುದಕ್ಕೆ ಈ ಭೀಕರಕಾಳೀಚರಣನೇ ಕಾರಣನೆಂದು ಬಂದಿಯು ಯೋಚಿಸತೊಡಗಿದನು. ಅಂತಹ

ಯೋಚನೆಯ ಮಧ್ಯೆ ಈ ಕ್ರೂರಜಂತುವನ್ನು ಕೊಂದುಬಿಡಬಾರದೇಕೆಂದು ಅವನು ಚಿಂತಿಸುತ್ತಿದ್ದನು. ಆದರೆ ಹಾಗೆ ಮಾಡುವುದರಿಂದ ಪುಷ್ಪಲತೆಯು ಸರ್ವಕಾಲಕ್ಕೂ ದೂರವಾಗಿಬಿಡುವಳೆಂದು ಅವನು ಆ ಯೋಚನೆಯನ್ನು ತ್ಯಜಿಸಿದನು

ರಾತ್ರಿಯವೇಳೆಗೆ ಬಂದಿಯ ನಿರಾಶಾಭಾವನೆಯು ಹೋಗಿ ಶೋಕವು ಬಹಳವಾಗಿ ಅವನನ್ನು ಪೀಡಿಸತೊಡಗಿದ್ದಿತು ಅವನ ಪುಷ್ಪದ ವಿಷಯವೂ ಅವನಿಗೆ ನೆನಪಿಗೆ ಬಂದು ಅವನ ದುಃಖವು ಇಮ್ಮಡಿಯಾಗಲು ಕಾರಣ ವುಂಟಾಯಿತು ಆಗ ಏಪ್ರಿಲ್ ತಿಂಗಳು ನಡೆಯುತ್ತಿತ್ತು ಆ ತಿಂಗಳಲ್ಲಿ ಟ್ಯೂಲಿಪ್ ಸಸಿಗಳನ್ನು ನೆಡುವುದು ಒಳ್ಳೆಯದಾಗಿತ್ತು ಸಸಿಯನ್ನಾವಾಗ ನೆಡುವುದೆಂದು ಅವನು ಪುಷ್ಪಲತೆಗೆ ತಿಳಿಸುವುದಾಗಿ ಹೇಳಿದ್ದನು ಅವಳು ಕೋಪಗೊಂಡು ಹೋದ ದಿನ ಅವಳು ರಾತ್ರಿಯಲ್ಲಿ ಬಂದಿದ್ದರೆ ಮರುದಿನ ಸಸಿಯನ್ನು ನೆಡಬೇಕೆಂದು ಅವನು ಹೇಳಿಬಿಡುತ್ತಿದ್ದನು ಗಾಳಿಯೂ, ಬಿಸಿಲೂ ಎಲ್ಲವೂ ಪುಷ್ಪಗಳ ಬೆಳವಣಿಗೆಗೆ ಅನುಕೂಲವಾಗಿದ್ದುವು. ಈಗ ಹೇಳುವುದಾರಿಗೆ? ಸರಿಯಾದ ಸಮಯದಲ್ಲಿ ಸಸಿಯನ್ನು ನೆಡದೆ ಪುಷ್ಪ ಲತೆಯು ಕಾಲಕಳೆದರೇನುಮಾಡುವುದು? ಪುಷ್ಪಲತೆಯನ್ನು ಕಳೆದು ಕೊಳ್ಳುವುದರ ಜತೆಗೆ ಪುಷ್ಪವನ್ನೂ ಕಳೆದುಕೊಳ್ಳಬೇಕೆ? ಬಹಳ ನಿಧಾನ ವಾಗಿ ನೆಟ್ಟರೇನುಗತಿ? ನೆಡದೇ ಇದ್ದುಬಿಟ್ಟರೇನುಗತಿ? ಇವೇ ಮುಂತಾದ ಚಿಂತೆಗಳಿಂದ ಕುಮುದನಿಗೆ ಆಹಾರವೂ ಪಾನೀಯವೂ ಬೇಡವಾದುವು

ನಾಲ್ಕನೆಯ ದಿನದ ವೇಳೆಗೆ ಕುಮುದನು ಆಹಾರಾದಿಗಳಿಲ್ಲದೆ, ದುಃಖ ದಿಂದ ಮೂಕನಾಗಿ, ಶುಷ್ಕವದನವುಳ್ಳವನಾಗಿ ಕಾರಾಗೃಹದ ಕಿಟಕಿಯಲ್ಲಿ ತಲೆಯನ್ನಿಟ್ಟುಕೊಂಡು ಹೊರಗಡೆ ಇದ್ದ ಉದ್ಯಾನವನ್ನು ನೋಡತೊಡಗಿ ದನು ಅಲ್ಲಿ ಪುಷ್ಪಲತೆಯಾಗಲಿ ತನ್ನ ಟ್ಯೂಲಿಪ್ ಪುಷ್ಪವಾಗಲಿ ಕಾಣ ಬರಬಹುದೆಂದು ಅವನು ಆಶಿಸುತ್ತಿದ್ದನು.

ರಾತ್ರಿಯಲ್ಲಿ ಕಾಳೀಚರಣನು ಬಂದಿಯ ಆಹಾರವನ್ನು ಹಿಂದಕ್ಕೆ ತೆಗೆದುಕೊಂಡು ಹೋದನು ಬಂದಿಯು ಅದನ್ನು ಮುಟ್ಟಿ ಇರಲಿಲ್ಲ. ಮರುದಿನವೂ ಹಾಗೆಯೇ ಆಯಿತು ಕುಮುದನು ಸರ್ವದಾ ಮಲಗಿರ ತೊಡಗಿದನು

ಕಾಳೀಚರಣನು ಕಡೆಯ ಬಾರಿ ಕಾರಾಗೃಹ ಪರೀಕ್ಷೆ ಮಾಡಿಕೊಂಡು ಬಂದು, "ನಿರಂಜನ! ನಮ್ಮ ವಿದ್ಯಾವಂತನು ಬೇಗನೆ ಹೊರಟು ಹೋಗುತ್ತಾನೆ" ಎಂದನು ಪುಷ್ಪಲತೆಯು ಚಕಿತಳಾದಳು

ನಿರಂಜನನು, "ಹಾಗಂಪರೇನು? ಬುದ್ಧಿಯಿಲ್ಲದೆ ಏನನ್ನೋ ಹೇಳುತ್ತಿರುವೆ" ಎಂದನು

ಕಾಳೀಚರಣ—ಅವನು ಏನನ್ನೂ ತಿನ್ನುವುದಿಲ್ಲ—ಏನನ್ನೂ ಕುಡಿಯುವುದಿಲ್ಲ—ಯಾವಾಗಲೂ ಹಾಸಿಗೆಯ ಮೇಲೆಯೇ ಬಿದ್ದಿರುತ್ತಾನೆ. ಅವನು ಮೊದಲಿನ ಬಂದಿಯಂತೆಯೇ ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗುತ್ತಾನೆ ಆದರೆ ಇವನು ಹೊರಟುಹೋಗುವಾಗ ಪ್ರಾಣರಹಿತನಾಗಿ ಪಯಮಾಡಿಸುತ್ತಾನೆ

ಪುಷ್ಪಲತೆಯು ಗಾಬರಿಯಿಂದ ವಿವರ್ಣವದನಳಾಗಿ, "ಆಹಾ! ಆತನು ತನ್ನ ಪುಷ್ಪದ ವಿಷಯವಾಗಿ ನೊಂದುಕೊಂಡಿರಬೇಕು" ಎಂದುಕೊಂಡಳು ಒಡನೆಯೇ ತನ್ನ ಕೊಟಡಿಗೆ ಹೋಗಿ ರಾತ್ರಿಯೆಲ್ಲಾ ಕುಳಿತು ಕೆಲವು ಅಕ್ಷರಗಳನ್ನು ಬರೆದಳು ಮರುದಿನ ಕುಮುದಚಂದ್ರನು ಕಿಟಕಿಯ ಬಳಿಗೆ ಹೋಗಲೆತ್ನಿಸಿದಾಗ ಬಾಗಿಲಬಳಿ ಕಾಗದವೊಂದಿದ್ದುದನ್ನು ಕಂಡನು

ಒಡನೆಯೇ ಅವನು ಅದರಮೇಲೆ ಹಾರಿಬಿದ್ದು ಅದನ್ನು ಬಿಚ್ಚಿ ಓದತೊಡಗಿದನು — "ಯೋಚಿಸಬೇಡಿ. ನಿಮ್ಮ ಪುಷ್ಪವು ಚೆನ್ನಾಗಿ ಬೆಳೆಯುತ್ತಿದೆ"

ಈ ಮಾತುಗಳು ಅವನಿಗೆ ಸ್ವಲ್ಪ ಆಪ್ಯಾಯಮಾನವಾಗಿದ್ದುವಾದರೂ ಅವುಗಳಲ್ಲಿದ್ದ ವ್ಯಂಗ್ಯಭಾವದಿಂದವನು ಬಹಳ ದುಃಖಿತನಾದನು. ಹಾಗಾದರೆ ಪುಷ್ಪಲತೆಯು ಕಾಹಿಲೆಯಿಂದ ಪೀಡಿತಳಾಗಿರಲಿಲ್ಲ! ಅವಳಿಗೆ ಕೋಪ ಉಂಟಾಗಿದ್ದಿತು! ಅವಳು ಹೋಗಕೂಡದೆಂದಾದರೂ ಅಡಚಣೆ ಮಾಡಿರಲಿಲ್ಲ ತಾನಾಗಿಯೇ ಸ್ವಂತ ಇಚ್ಛೆಯಿಂದ ಬರಲಿಲ್ಲ! ಅವಳಿಗಾಗಿ ಸಾಯುತ್ತಿರುವವನ ಮೇಲೆ ಹೀಗೆ ನಿರ್ದಯೆಯಿಂದಿರಬಹುದೆ!

ಕುಮುದಚಂದ್ರನ ಬಳಿ ಕಾಗದವೊಂದೂ ಸೀಸದಕಡ್ಡಿಯೊಂದೂ ಇದ್ದುವು. ಅವನ್ನು ಪುಷ್ಪಲತೆಯೇ ತಂದುಕೊಟ್ಟಿದ್ದಳು ಅವಳು ಉತ್ತರವನ್ನೆದುರುನೋಡುತ್ತಿರಬಹುದೆಂದು ಅವನು ಯೋಚಿಸಿ ಕಾಗದವೊಂದರ

ಮೇಲೆ ಈ ರೀತಿಯಾಗಿ ಬರೆದನು—“ಪುಷ್ಪವನ್ನು ನೋಡದೆ ಇದ್ದುದರಿಂದ ನನಗೆ ಕಾಹಿಲೆಯಾಗಿಲ್ಲ. ನಿನ್ನನ್ನು ನೋಡದೆ ರೋಗಪೀಡಿತನಾಗಿದ್ದೇನೆ”.

ಕಾಳೀಚರಣನು ಕಡೆಯ ಬಾರಿ ಬಂದು ಪರೀಕ್ಷೆ ಮಾಡಿಕೊಂಡು ಕಾರಾಗಾರದಿಂದ ಹೊರಟುಹೋಗುತ್ತಲೇ ಕುಮುದನು ಮೆಲ್ಲನೆ ಬಾಗಿಲ ಬಳಿ ಹೊರಟನು ಕತ್ತಲಲ್ಲಿಯೇ ಬಾಗಿಲ ಕೆಳಗೆ ತನ್ನ ಪತ್ರವನ್ನಿಟ್ಟು ಅದನ್ನು ಹೊರಕ್ಕೆ ತಳ್ಳಿದನು ಅದನ್ನು ತೆಗೆದುಕೊಳ್ಳಲು ಪುಷ್ಪಲತೆಯು ಬರುವಳೆಂದು ಅವಳ ಹೆಜ್ಜೆಯ ಶಬ್ದವನ್ನೇ ಎದುರುನೋಡುತ್ತಿದ್ದನು ಆದರೆ ಅವಳ ಸುಳಿವೇ ಅವನಿಗೆ ಕೇಳಿಬರಲಿಲ್ಲ ಬಹಳ ಹೊತ್ತಾದಮೇಲೆ ಬಹಳ ಸಣ್ಣದನಿಯಲ್ಲಿ, “ನಾಳೆ” ಎಂದು ಮಾತ್ರ ಬಾಗಿಲಿನ ಕಿಟಕಿಯಲ್ಲಿ ಹೇಳಿದಂತಾಯಿತು!

“ನಾಳೆ”ಯ ವೇಳೆಗೆ ಪರಸ್ಪರಾವಲೋಕನವಿಲ್ಲದೆ ಅವರಿಬ್ಬರೂ ಎಂಟು ದಿನಗಳ ಪರ್ಯಂತರ ಒಬ್ಬರನ್ನೊಬ್ಬರು ಅಗಲಿದ್ದಂತಾಗಿದ್ದಿತು.

# ವಿಂಶತಿ ಪರಿಚ್ಛೇದ

## ಎಂಟುದಿನಗಳಲ್ಲಿ ನಡೆದ ಘಟನೆಗಳು

ಮರುದಿನ ರಾತ್ರಿ ಪುಷ್ಪಲತೆಯು ಬಾಗಿಲ ಬಳಿ ಇದ್ದ ಸಣ್ಣ ಕಿಟಕಿಯ ಬಳಿ ಬಂದು ನಿಂತಳು. ಅವಳ ಕೈಯಲ್ಲಿ ದೀಪವಿದ್ದಿತು. ಕುಮುದಚಂದ್ರನು ಶೋಕಪೂರಿತನಾಗಿಯೂ ಶುಷ್ಕವದನನಾಗಿಯೂ ಇದ್ದುದನ್ನು ಕಂಡು ಅವಳಿಗೆ ಗಾಬರಿಯಾಗಿ, “ಇದೇನು? ನಿಮಗೆ ಮೈಯಲ್ಲಿ ಸ್ವಸ್ಥವಿಲ್ಲವೆ?” ಎಂದಳು

ಅವನು ನಿಜವಾಗಿ ಮನಸ್ಸಿನಲ್ಲಿಯೂ ದೇಹದಲ್ಲಿಯೂ ಕಷ್ಟಾನುಭವ ಮಾಡುತ್ತಿದ್ದನಾಗಿ, “ನಿಜ ಮೈಯಲ್ಲಿ ಚೆನ್ನಾಗಿಲ್ಲ” ಎಂದನು.

ಪುಷ್ಪಲತೆ—ನೀವು ಊಟಮಾಡಲಿಲ್ಲವೆಂದು ತಿಳಿಯಿತು. ನೀವು ಯಾವಾಗಲೂ ಮಲಗಿರುತ್ತಿದ್ದಿರೆಂದೂ ತಿಳಿಯಿತು. ನಿಮ್ಮ ಶೋಕವನ್ನರಿತು ನಿಮಗೆ ಅತಿ ಪ್ರೀತಿಪಾತ್ರವಾದ ವಸ್ತುವಿನ ವಿಷಯವಾಗಿ ಬರೆದೆನು.

ಕುಮುದಚಂದ್ರ—ನಾನದಕ್ಕೆ ಉತ್ತರವನ್ನು ಬರೆದೆನು. ನೀನು ಬಂದುದನ್ನು ಕಂಡು ನನ್ನ ಪತ್ರವು ನಿನಗೆ ತಲಪಿತೆಂದು ಭಾವಿಸಿದ್ದೆನು.

"ನಿಜ. ಅದು ತಲಪಿತು".

"ಈ ಬಾರಿ ಓದಲು ಬರುವುದಿಲ್ಲವೆಂದು ನೀನು ಹೇಳುವಂತಿಲ್ಲ. ನಿನಗೆ ಚೆನ್ನಾಗಿ ಓದಲು ಬರುವುದಲ್ಲದೆ ಬರೆಯುವುದಕ್ಕೂ ಚೆನ್ನಾಗಿ ಬರುವುದು"

"ನಿಜ. ನಿಮ್ಮ ಪತ್ರವು ನನಗೆ ತಲಪಿತು. ಅದನ್ನು ಓದಿಯೂ ಆಯಿತು. ಆದುದರಿಂದಲೇ ನೀವು ಆರೋಗ್ಯವನ್ನು ಹೊಂದುವ ಉಪಾಯವನ್ನು ಹೂಡಲು ಬಂದೆನು".

"ನನ್ನ ಆರೋಗ್ಯವೆ? ಹಾಗಾದರೆ ನನಗೆ ಒಳ್ಳೆಯ ಸಮಾಚಾರವನ್ನೇನಾದರೂ ಹೇಳಲು ಬಂದಿರುವೆಯಾ?"

"ನಾನು ನಿಮ್ಮ ಟ್ಯೂಲಿಪದ ವಿಷಯವಾಗಿ ಮಾತ್ರ ಮಾತನಾಡಬಲ್ಲೆ. ಅದರ ವಿಷಯವೇ ನಿಮ್ಮ ಮನಸ್ಸಿನಲ್ಲಿ ತುಂಬಿದೆಯೆಂದೂ ಬಲ್ಲೆ".

ಈ ಮಾತುಗಳನ್ನು ಪುಷ್ಪಲತೆಯು ಅನಾಸಕ್ತಿಯಿಂದ ಹೇಳಿದಳು. ಅದನ್ನು ಕೇಳಿ ಕುಮುದನ ಹೃದಯವು ಒಡೆದಂತಾಯಿತು ಆ ಅನಾಸಕ್ತಿಯ ಅಂತರಾಳದಲ್ಲಿ ಅಡಗಿದ್ದ ಅಸೂಯೆಯು ಅವನಿಗೆ ಅವ್ಯಕ್ತವಾಗಿರಲಿಲ್ಲ. ಅವನು ದುಃಖಿತನಾಗಿ ಹೇಳತೊಡಗಿದನು—"ಪುಷ್ಪಾ! ಪುನಃ ಪುನಃ ಅದೇ ವಿಷಯವನ್ನೇ ಹೇಳುವೆಯಲ್ಲಾ! ನಿನ್ನ ವಿಷಯವಾಗಿಯೇ ಯಾವಾಗಲೂ ಯೋಚಿಸುತ್ತಿದ್ದೆನೆಂದು ಆಗಲೇ ಹೇಳಿದೆನಲ್ಲವೆ? ನೀನು ಬರಲಿಲ್ಲವೆಂದು ವ್ಯಥೆಪಟ್ಟೆನು. ನೀನು ಕಾಣಲಿಲ್ಲವೆಂದು ಶೋಕಿಸಿದೆನು. ನೀನು ಅನಾದರಮಾಡುತ್ತಿರುವೆಯೆಂದು ದುಃಖಿಸಿದೆನು. ನನ್ನ ಸ್ವಾತಂತ್ರ್ಯಕ್ಕಿಂತಲೂ-ಕಡೆಗೆ ನನ್ನ ಪ್ರಾಣಕ್ಕಿಂತಲೂ-ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತಿದ್ದೇನೆ".

ಪುಷ್ಪಲತೆಯು ನಗುತ್ತ, "ಆಹಾ! ನಿಮ್ಮ ಪುಷ್ಪಕ್ಕೆ ಎಂತಹ ಅಪಾಯ ಒದಗಿರುವುದೆಂದು ಬಲ್ಲಿರಾ?" ಎಂದಳು

ಕುಮುದನು ನಡುಗಿಹೋದನು ಪುಷ್ಪಲತೆಯು ಅದಾವ ಅಭಿಪ್ರಾಯದಿಂದ ಹಾಗೆ ಹೇಳಿದಳೋ ತಿಳಿಯದು. ಅಂತೂ ಕುಮುದನು

ಅವಳು ಬೀಸಿದ ಬಲೆಗೆ ಬಿದ್ದವನಂತೆ ಗಾಬರಿಯಿಂದ, "ಅಪಾಯವೆ? ಎಂತಹ ಅಪಾಯ!" ಎಂದು ಕೇಳಿದನು.

ಪುಷ್ಪಲತೆಯು ದಯೆಯಿಂದ ಅವನ ಕಡೆಗೆ ನೋಡಿ ನಕ್ಕಳು ಅವನು ಹೇಗಿರಬೇಕೆಂದು ಅವಳು ಇಚ್ಛಿಸಿದ್ದಳೋ ಹಾಗವನು ಇರುವುದು ತೀರ ಅಸಂಭವವೆಂದರಿತಳು. ಅವನ ಸಣ್ಣಪುಟ್ಟ ತಪ್ಪುಗಳನ್ನು ದೂರ ಮಾಡಿ ಲಕ್ಷಿಸದಿರಬೇಕೆಂದವಳು ನಿಶ್ಚಯಿಸಿ, "ನೀವು ಊಹಿಸಿದ್ದುದು ನಿಜ, ಆ ನಿರಂಜನನು ನನ್ನನ್ನು ಪ್ರೀತಿಸಿ ಬರಲಿಲ್ಲ" ಎಂದಳು.

ಕುಮುದಘು ಕಾತರನಾಗಿ, "ಅವನು ಬಂದುದಾರಿಗೋಸ್ಕರ?" ಎಂದನು.

"ಅವನು ಟ್ಯೂಲಿಪ್‌ಪುಷ್ಪಕ್ಕಾಗಿ ಬಂದನು".

ಕುಮುದನು ಅದನ್ನು ಕೇಳಿ "ಅಯ್ಯೋ!" ಎಂದು ಮರುಗಿದನು. ಅವನ ಮುಖವು ವಿವರ್ಣವಾಯಿತು. ಹದಿನೈದುದಿನಗಳ ಹಿಂದೆ ಪುಷ್ಪಲತೆಗಾಗಿ ನಿರಂಜನನು ಬಂದಿದ್ದನೆಂದು ತಿಳಿದಾಗ ಅವನು ಎಷ್ಟು ಗಾಬರಿಪಟ್ಟನೋ ಈಗ ಅದಕ್ಕಿಂತಲೂ ಹೆಚ್ಚಾಗಿ ಗಾಬರಿಗೊಂಡನು ಪುಷ್ಪಲತೆಯು ಈ ಗಾಬರಿಯನ್ನು ಕಂಡಳು. ಅವಳ ಮುಖವನ್ನು ನೋಡಿ ಅವಳ ಮನಸ್ಸಿನಲ್ಲಿದ್ದುದನ್ನು ಕುಮುದನು ತಿಳಿದುಕೊಂಡನು. ಒಡನೆಯೇ, "ಪುಷ್ಪಾ! ನನ್ನನ್ನು ಕ್ಷಮಿಸು ನಿನ್ನನ್ನು ಬಲ್ಲೆ. ನಿನ್ನ ಹೃದಯವು ನಿಷ್ಕಲ್ಮಷವಾದುದೆಂದೂ ನೀನು ದಯಾಪರಳೆಂದೂ ಬಲ್ಲೆ. ನಿನಗೆ ಯಾರಾದರೂ ಅನ್ಯಾಯಮಾಡಿದರೆ ನೀನು ಪ್ರತಿಭಟಿಸಬಲ್ಲೆ. ಆದರೆ ನನ್ನ ಬಡಪುಷ್ಪಕ್ಕೆ ಅನ್ಯಾಯವಾದರೆ—ಅದಕ್ಕೆ ಅಪಾಯವುಂಟಾದರೆ—ಅದೇನು ಮಾಡಬಲ್ಲದು? ದೇವರು ಅದಕ್ಕಾವ ಸಾಧನವನ್ನೂ ಕೊಟ್ಟಿಲ್ಲ" ಎಂದನು.

ಪುಷ್ಪಲತೆಯು ಕುಮುದನು ಹೇಳಿದ ಮಾತುಗಳಿಗೆ ಉತ್ತರಕೊಡದೆ ಮುಂದರಿಸಿ ಹೇಳತೊಡಗಿದಳು—"ನನ್ನನ್ನು ಹಿಂಬಾಲಿಸುತ್ತಿದ್ದವನ ವಿಷಯವಾಗಿ ನೀವು ಯೋಚಿಸುತ್ತಿದ್ದುದು ಸರಿಯಷ್ಟೆ. ಹಾಗೆ ಮಾಡುತ್ತಿದ್ದವನು ನಿರಂಜನನೆಂದು ತಿಳಿದುಬಂದಿತು ಆಗ ನಾನು ನಿಮಗಿಂತಲೂ ಹೆಚ್ಚಾಗಿ ಯೋಚನೆಮಾಡತೊಡಗಿದೆನು. ನಿಮ್ಮನ್ನು ನೋಡಿ ಹೊರಟು ಹೋದ ದಿನ—ನೀವು ಹೇಳಿದುದನ್ನು ಕೇಳಿ.. "

ಕುಮುದನು ಅರ್ಧೋಕ್ತಿಯಲ್ಲಿ ಅವಳನ್ನು ತಡೆದು, "ಮತ್ತೆ ಕೇಳಿಕೊಳ್ಳುತ್ತೇನೆ ಪುಷ್ಪಾ! ಕ್ಷಮಿಸು. ನಾನು ಹೇಳಿದುದು ಶುದ್ಧ ತಪ್ಪು. ಮೊದಲೊಂದುಬಾರಿ ಕ್ಷಮಿಸೆಂದು ಕೇಳಿದ್ದೇನೆ. ಪುನಃ ಕೇಳಿಕೊಳ್ಳುತ್ತೇನೆ. ಎಷ್ಟು ಕೇಳಿದರೂ ಫಲವಿಲ್ಲವೆ?" ಎಂದನು.

ಪುಷ್ಪಲತೆಯು ಪುನಃ ಹೇಳತೊಡಗಿದಳು—"ಮರುದಿನ—ನೀವು ಹೇಳಿದ್ದ ಉಪಾಯವನ್ನು ಜ್ಞಾಪಕದಲ್ಲಿಟ್ಟುಕೊಂಡು—ಆ ಭೀಕರಮನುಷ್ಯನು ನನಗಾಗಿ ಬರುತ್ತಿದ್ದನೋ, ಹೂವಿಗಾಗಿ ಬರುತ್ತಿದ್ದನೋ—ತಿಳಿಯಬೇಕೆಂದು ."

ಕುಮುದನು ಪುನಃ ಅರ್ಧೋಕ್ತಿಯಲ್ಲಿಯೇ, "ನಿಜ, ನಿಜ ಅವನು ಭೀಕರಮನುಷ್ಯ—ಅವನನ್ನು ದ್ವೇಷಿಸುವೆಯಾ?" ಎಂದನು

ಪುಷ್ಪಲತೆ—ಅವನನ್ನು ಪೂರ್ಣವಾಗಿ ದ್ವೇಷಿಸುತ್ತೇನೆ. ಈ ಎಂಟು ದಿನಗಳು ನಾನನುಭವಿಸಿದ ದುಃಖವೆಲ್ಲಕ್ಕೂ ಅವನೇ ಕಾರಣಭೂತನು.

"ನೀನು ದುಃಖಿತಳಾಗಿದ್ದೆಯಾ ಪುಷ್ಪಾ? ಓಹೋ! ನೀನೇ ಹೇಳಿದುದರಿಂದ ಬಹಳ ಸಂತೋಷಪಡುತ್ತಿದ್ದೇನೆ!"

"ಸರಿ-ಆ ದುರದೃಷ್ಟದ ದಿನ—ನಾನು ಉದ್ಯಾನವನಕ್ಕೆ ಹೋದೆನು. ನಿಮ್ಮ ಸಸಿಯನ್ನು ನೆಡುವ ಸಸ್ಯಭೂಮಿಯ ಕಡೆಗೆ ಹೊರಟೆನು. ಮೊದಲಿನಂತೆಯೇ ಯಾರಾದರೂ ಹಿಂಬಾಲಿಸುತ್ತಿರುವರೋ ಏನೋ ಎಂದು ನಾಲ್ಕು ಕಡೆಯೂ ನೋಡುತ್ತ ಹೋದೆನು"

"ಬಳಿಕೇನಾಯಿತು?"

"ಬಳಿಕ-ಅದೇ ಛಾಯೆಯು ವೃಕ್ಷಗಳ ಬಳಿಗೆ ಸರಿದು ಅಲ್ಲಿ ಅದೃಶ್ಯವಾದುದನ್ನು ಕಂಡೆನು".

"ಅವನನ್ನು ನೀನು ನೋಡದೆ ಇದ್ದಂತೆ ನಟಿಸಿದೆಯಷ್ಟೆ?"

"ನಿಜ. ಹಾಗೆಯೇ ನಟಿಸಿದೆನು ಸಸ್ಯಭೂಮಿಯಬಳಿ ಬಗ್ಗಿನಿಂತು ಸನಿಕೆಯಿಂದ ಅಗಿಯತೊಡಗಿದೆನು. ಸಸಿಯನ್ನು ಅಲ್ಲಿ ನೆಡುವಂತೆ ನಟಿಸಿದೆನು".

"ಆ ಸಮಯದಲ್ಲಿ ಅವನೇನು ಮಾಡುತ್ತಿದ್ದನು?"

"ಅವನ ಕಣ್ಣುಗಳು ವೃಕ್ಷಗಳ ಬಳಿ ಪಳಪಳನೆ ಹೊಳೆಯುತ್ತಿದ್ದುದನ್ನು ಕಂಡೆನು".

"ನೋಡಿದೆಯಾ ಪುಷ್ಪಾ! ನಾನು ಯೋಚಿಸುದುದೇ ನಿಜವಾಯಿತು!"

"ಬಳಿಕ ನನ್ನ ಕಾರ್ಯವನ್ನು ಮುಗಿಸಿ ಹೊರಟುಹೋದೆನು"

"ಆದರೆ ಉದ್ಯಾನದ ಕಡೆಗಿರುವ ಬಾಗಿಲಹಿಂದೆ ನಿಂತಿದ್ದೆಯಲ್ಲವೆ? ಅವನೇನು ಮಾಡುವನೆಂದು ಬಾಗಿಲಕಂಡಿಯಿಂದ ನೋಡುತ್ತಿದ್ದೆಯಲ್ಲವೆ?"

"ನಿಜ. ಹಾಗೆಯೇ ಮಾಡಿದೆನು—ಅವನು ಸ್ವಲ್ಪಹೊತ್ತು ಕಾದು ನೋಡಿದನು — ನಾನು ಹಿಂತಿರುಗಬಹುದೆಂದವನಿಗೆ ಸಂದೇಹವುಂಟಾಗಿದ್ದಿತು—ಬಳಿಕ ಅವನು ತನ್ನ ಗುಪ್ತಸ್ಥಾನದಿಂದ ಮೆಲ್ಲನೆ ಹೊರಟನು. ಸಸ್ಯಭೂಮಿಯದ್ದ ಬಳಿಗೆ ಬಳಸಿಕೊಂಡು ಬಂದನು ಕಡೆಗೆ ಅಲ್ಲಿಗೆ ಬಂದು ನಾನು ಅಗೆದಿದ್ದ ಸ್ಥಳವನ್ನು ನೋಡಿದನು ಏನನ್ನೂ ಅರಿಯದವನಂತೆ ನಾಲ್ಕುಕಡೆಯೂ ನೋಡಿದನು ಉದ್ಯಾನದ ಪ್ರತಿಯೊಂದು ಮೂಲೆಯನ್ನೂ ಅಕ್ಕಪಕ್ಕದ ಮನೆಗಳ ಕಿಟಕಿಗಳನ್ನೂ ಕಡೆಗೆ ಆಕಾಶವನ್ನೂ ಪರೀಕ್ಷಿಸಿ ನೋಡಿ ತಾನೊಬ್ಬನೇ ಅಲ್ಲಿರುವುದು ನಿರ್ಧರವಾಗುತ್ತಲೇ ಆ ಸಸ್ಯಭೂಮಿಯ ಮೇಲೆ ಹಾರಿಬಿದ್ದು ಕೈಗಳಿಂದ ಬಗೆಯತೊಡಗಿದನು ಆ ಭೂಮಿಯಿಂದ ಸ್ವಲ್ಪ ಮಣ್ಣನ್ನು ತೆಗೆದು ಅದರಲ್ಲಿ ಸಸಿಯಿರುವುದೇನೆಂದು ಪರೀಕ್ಷಿಸಿದನು. ಹಾಗೆಯೇ ಎರಡು ಮೂರು ಬಾರಿ ಮಣ್ಣನ್ನು ತೆಗೆದು ನೋಡಿದನು ಕಡೆಗೆ ತಾನು ಮೋಸಹೋದುದು ಅವನಿಗೆ ತಿಳಿದುಹೋಯಿತು ಬಳಿಕ ತನ್ನ ಹೃದಯದಿಂದ ಉಕ್ಕಿಬರುತ್ತಿದ್ದ ಕ್ರೋಧಾನಲವನ್ನು ಅಡಗಿಸಿಕೊಳ್ಳುತ್ತ ಅವನು ಸಸ್ಯಭೂಮಿಯನ್ನು ಸರಿಪಡಿಸಿ ಮೊದಲಿದ್ದಂತೆಯೇ ಮಾಡಿದನು ಬಳಿಕ ಲಜ್ಜೆಯಿಂದಲೂ ಶೋಕದಿಂದಲೂ ಅವನು ಉದ್ಯಾನದ ಬಾಗಿಲ ಕಡೆಗೆ ಹೊರಟುಹೋದನು"

ಕುಮುದಚಂದ್ರನು ಇದೆಲ್ಲವನ್ನೂ ಕೇಳಿ ತನ್ನ ಶರೀರದಿಂದ ಹರಿಯುತ್ತಿದ್ದ ಸ್ವೇದಕಣಗಳನ್ನು ಒರೆಸಿಕೊಳ್ಳುತ್ತ, "ಅಯ್ಯೋ! ಎಂತಹ ಪಾಪಿ! ಎಂತಹ ಸರ್ವನಾಶಕ! ಅವನ ಮನಸ್ಸಿನಲ್ಲಿದ್ದುದನ್ನು ಮೊದಲೇ ತಿಳಿದಿದ್ದೆನು. ಅದಿರಲಿ. ಪುಷ್ಪಾ! ಆ ಸಸಿಯನ್ನೇನುಮಾಡಿದೆ?" ಎಂದನು.

ಪುಷ್ಪಲತಾ-ಸಸಿಯನ್ನೇ?-ಅದು ಭೂಮಿಯಲ್ಲಿ ಆರುದಿನಗಳಿಂದಿದೆ.

ಕುಮುದ—ಎಲ್ಲಿ? ಹೇಗೆ?—ಅಯ್ಯೋ! ದೇವರೆ! ಎಂತಹ ಬುದ್ಧಿಶೂನ್ಯತೆ! ಅದೆಲ್ಲಿದೆ! ಯಾವ ಭೂಮಿಯಲ್ಲಿದೆ? ಯಾವ ವಾತಾವರಣ

ದಲ್ಲಿದೆ? ಒಳ್ಳೆಯದೆ? ಕೆಟ್ಟದೆ? ಆ ನರಾಧಮ—ಆ ನೀಚ ನಿರಂಜನನು ಅದನ್ನು ಅಪಹರಿಸುವಂತಿಲ್ಲವೆ?

"ಅದನ್ನಾರೂ ಅಪಹರಿಸುವಂತಿಲ್ಲ. ಹಾಗೆ ಮಾಡಬೇಕಾದರೆ ಅವರು ನನ್ನ ಕೊಟಡಿಯೊಳಕ್ಕೆ ನುಗ್ಗಬೇಕು"

"ಓಹೋ! ಹಾಗಾದರೆ ಅದು ನೀನು ಮಲಗುವ ಕೊಟಡಿಯಲ್ಲಿದೆಯೆ? ಸ್ವಲ್ಪ ಸಮಾಧಾನವಾದಂತಾಯಿತು. ಆದರೆ ಎಂತಹ ಮಣ್ಣಿನಲ್ಲಿದೆ? ಯಾವ ಪಾತ್ರದಲ್ಲಿದೆ? ಅದನ್ನು ನೀರಲ್ಲಿ ಬೆಳೆಯಲು ಬಿಟ್ಟಿಲ್ಲವಷ್ಟೆ?"

"ಅದರ ವಿಷಯವಾಗಿ ಯೋಚಿಸಬೇಡಿ. ಅದನ್ನು ನೀರಲ್ಲಿ ಬೆಳೆಯಲು ಬಿಟ್ಟಿಲ್ಲ".

"ಅಬ್ಬಾ! ಪುನಃ ಉಸಿರುಬಿಡುವಂತಾಯಿತು".

"ಅದು ಕಲ್ಲಿನ ಗಡಿಗೆಯೊಂದರಲ್ಲಿ ಬೆಳೆಯುತ್ತಿದೆ. ಗಡಿಗೆಯು ನಿಮ್ಮ ಹೂಜಿಯಿದ್ದಷ್ಟು ದೊಡ್ಡದಾಗಿದೆ ಉದ್ಯಾನವನದ ಮಣ್ಣಿನಿಂದ ಮೂರು ಭಾಗಗಳನ್ನೂ ಬೀದಿಯ ಮಣ್ಣಿನಿಂದ ಒಂದು ಭಾಗವನ್ನೂ ಸೇರಿಸಿ ಅದಕ್ಕೆ ಸಸ್ಯಭೂಮಿಯನ್ನು ತಯಾರಿಸಿದ್ದೇನೆ. ನೀವು ಹೇಳುತ್ತಿದ್ದುದನ್ನೂ ಅದಲ್ಲದೆ ಆ ಭೀಕರ ನಿರಂಜನನು ಹೇಳುತ್ತಿದ್ದುದನ್ನೂ ಕೇಳಿ ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವುದಕ್ಕೆ ಉತ್ತಮವಾದ ಮಣ್ಣಾವುದೆಂದು ತಿಳಿದುಕೊಂಡಿದ್ದೇನೆ"

"ಅದರ ವಾತಾವರಣವು ಹೇಗಿದೆ ಪುಷ್ಪಾ!"

"ಈಗ—ಬಿಸಿಲಿರುವವರೆಗೂ ಬಿಸಿಲಿನಲ್ಲಿರುತ್ತದೆ—ಆದರೆ ಮೊಳಕೆಯು ಹೊರಟು ಭೂಮಿಯಿಂದ ಮೇಲಕ್ಕೇಳತೊಡಗುತ್ತಲೇ ನೀವು ಇಲ್ಲಿ ನಿರ್ಮಿಸಿದ್ದಂತೆಯೇ ವಾತಾವರಣವನ್ನು ಕಲ್ಪಿಸುತ್ತೇನೆ. ಆಗ ಅದನ್ನು ಪೂರ್ವಕ್ಕಿರುವ ಕಿಟಕಿಯಲ್ಲಿ ಪ್ರಾತಃಕಾಲದಿಂದ ಹನ್ನೊಂದುಗಂಟೆಯವರೆಗೆ ಇಡುತ್ತೇನೆ ಪಶ್ಚಿಮಕ್ಕಿರುವ ಕಿಟಕಿಯಲ್ಲಿ ಮೂರುಗಂಟೆಯಿಂದ ಐದುಗಂಟೆಯವರೆಗೆ ಇಡುತ್ತೇನೆ".

"ಅದೇ ಸರಿ ಪುಷ್ಪಾ! ಅದೇ ಸರಿ. ನೀನು ಉತ್ತಮ ತೋಟಗಾರನಿಗೇನೂ ಕಡಮೆಯಿಲ್ಲ. ಆದರೆ—ನನ್ನ ಟ್ಯೂಲಿಪ್‌ಸಸಿಯನ್ನು ಬೆಳೆಯು

ವುದರಲ್ಲಿಯೇ ನಿನ್ನ ಕಾಲವೆಲ್ಲವೂ ಕಳೆದುಹೋಗುವುದು ಪುಷ್ಪಾ!"

"ನಿಜ. ಆದರೇನು? ನಿಮ್ಮ ಟ್ಯೂಲಿಪ್ ಸಸಿಯೇ ನನ್ನ ಮಗಳು. ನನಗೊಬ್ಬ ಮಗಳಿದ್ದಿದ್ದರೆ ಅವಳನ್ನು ಹೇಗೆ ಸಾಕುತ್ತಿದ್ದೆನೋ ಹಾಗೆಯೇ ಈ ಸಸಿಯನ್ನು ಸಾಕುತ್ತೇನೆ. ನನ್ನ ಕಾಲವೆಲ್ಲವನ್ನೂ ಅದಕ್ಕಾಗಿ ಕಳೆಯುತ್ತೇನೆ. ಹಾಗೆ ನಾನು ಅದರ ತಾಯಿ ಆಗುವುದರಿಂದ ಅದರ ಸವತಿಯಾಗುವ ಸಂಭವವುಂಟಾಗದು".

ಕುಮುದಚಂದ್ರನು ಆಹ್ಲಾದಿತನಾಗಿ, "ಪುಷ್ಪಾ! ಪುಷ್ಪಾ!" ಎಂದು ಕೂಗಿಕೊಂಡನು ಸ್ವಲ್ಪಹೊತ್ತು ಇಬ್ಬರೂ ಮೌನವಾಗಿದ್ದರು. ಬಳಿಕ ಕುಮುದನು, "ಹಾಗಾದರೆ ಸಸಿಯು ಈಗಾಗಲೇ ಆರುದಿನಗಳಿಂದ ಭೂಮಿಯಲ್ಲಿದೆಯೆ?" ಎಂದನು.

"ಅಹುದು. ಆರುದಿನಗಳಿಂದ ಇದೆ"

"ಆದರೂ ಎಲೆಯನ್ನಿನ್ನೂ ಬಿಟ್ಟಿಲ್ಲವೆ?"

"ಇಲ್ಲ. ನಾಳೆ ಬಿಡಬಹುದೆಂದು ತೋರುವುದು".

"ಹಾಗಾದರೆ—ಅದರ ಸಮಾಚಾರವನ್ನೂ—ಹಾಗೆಯೇ ನಿನ್ನ ವಿಷಯವನ್ನೂ—ಹೇಳುವೆಯಾ? ನಿನ್ನ ಮಗಳಮೇಲೆ ನನಗೆ ಪ್ರೀತಿಯಿರುವುದಾದರೂ ನಿನ್ನ ಮೇಲೆ ಮತ್ತೂ ಹೆಚ್ಚು ಪ್ರೀತಿಯಿದೆ".

ಪುಷ್ಪಲತೆಯು ಕುಮುದನನ್ನು ನೋಡುತ್ತೆ, "ನಾಳೆಯೆ? ನಾಳೆಯ ದಿನ ನಾನು ಬರುವುದಕ್ಕಾಗುವಂತಿಲ್ಲ" ಎಂದಳು.

"ಅಯ್ಯೋ! ಅದೇಕೆ ಬರುವುದಕ್ಕಾಗದು?"

"ಕುಮುದಚಂದ್ರಬಾಬುಗಳೆ! ನನಗೆ ಅನೇಕ ಕಾರ್ಯಗಳಿವೆ".

"ನನಗಿರುವುದೊಂದೇ ಕಾರ್ಯ".

"ಅಹುದು—ನಿಮ್ಮ ಪುಷ್ಪವನ್ನು ಪ್ರೀತಿಸುವುದು".

"ಅಲ್ಲ—ನಿನ್ನನ್ನು ಪ್ರೀತಿಸುವುದು".

ಪುಷ್ಪಲತೆಯು ನಂಬಲಾರದವಳಂತೆ ತಲೆಯನ್ನಲ್ಲಾಡಿಸಿದಳು. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಬಳಿಕ ಕುಮುದಚಂದ್ರನು ಹೇಳತೊಡಗಿದನು—"ಸರಿ, ಸರಿ. ಪ್ರಕೃತಿಯ ಮೇಲಿರುವ ಸರ್ವವಸ್ತುವೂ ಬದಲಾವಣೆ ಹೊಂದುವುದು ಸಹಜವೇ ಸರಿ. ವಸಂತಸಮಯದ

ಪುಷ್ಪಗಳ ಸ್ಥಾನವನ್ನು ಬೇರೆ ಕುಸುಮಗಳು ಆಕ್ರಮಿಸುವುವು. ಈ ದಿನ ಕೆಲವು ಕುಸುಮಗಳ ಮಧುವನ್ನು ಹೀರಿದ ದುಂಬಿಯು ನಾಳೆ ಬೇರೆ ಪುಷ್ಪಗಳ ಅನ್ವೇಷಣೆಯಲ್ಲಿ ನಿರತವಾಗುವುದು".

"ಈ ಮಾತುಗಳ ಅರ್ಥವೇನು?"

"ನೀನು ನನ್ನನ್ನು ತ್ಯಜಿಸಿರುವೆ ಪುಷ್ಪಲತಾ! ನಿನ್ನ ಆಮೋದ ಪ್ರಮೋದಗಳನ್ನು ಹೊಂದಲು ಬೇರೆ ಎಲ್ಲಿಯೋ ಹೊರಡುವೆ. ನೀನು ಮಾಡುತ್ತಿರುವುದು ಸರಿ. ನಿನ್ನನ್ನು ಆಕ್ಷೇಪಿಸುವಂತಿಲ್ಲ ನೀನು ನನ್ನಲ್ಲಿ ಅಚಲಭಕ್ತಿಯನ್ನೂ ಸ್ವಾಮಿನಿಷ್ಠೆಯನ್ನೂ ತೋರಬೇಕೆಂದು ನಾನು ಬಲವಂತಪಡಿಸುವುದು ಹೇಗೆ?"

ಪುಷ್ಪಲತೆಯು ಕಣ್ಣಲ್ಲಿ ನೀರು ತುಂಬಿದವಳಾಗಿ, "ನನ್ನ ಅಚಲ ಭಕ್ತಿಯೆ?–ನನ್ನ ಸ್ವಾಮಿನಿಷ್ಠೆಯೆ?–ಅದೇಕೆ? ನಾನು ನಿಮ್ಮಲ್ಲಿ ಅಚಲಭಕ್ತಿ ಯುಕ್ತಿಯುಳ್ಳವಳಾಗಿಲ್ಲವೆ?" ಎಂದಳು ಅವಳ ಕಣ್ಣುಗಳಿಂದ ಒಡನೆಯೇ ಧಾರಾಕಾರವಾಗಿ ನೀರು ಹರಿದು ಅವಳ ಕಪೋಲಗಳನ್ನು ತೋಯಿಸಿದುದು.

"ನನ್ನನ್ನು ಇಲ್ಲಿಯೇ ಸಾಯಲು ಬಿಟ್ಟುಹೋಗುವುದು ಭಕ್ತಿಯನ್ನು ಸೂಚಿಸುವುದೆ?"

"ನಿಮ್ಮ ಪುಷ್ಪವನ್ನು ಬಹಳ ಜಾಗರೂಕತೆಯಿಂದ ನಾನು ನೋಡಿಕೊಳ್ಳುತ್ತಿಲ್ಲವೆ? ಹಾಗೆ ಮಾಡಿ ನಿಮಗೆ ಸಂತೋಷವಾಗುವಂತೆ ಮಾಡುತ್ತಿಲ್ಲವೆ?"

"ಪುಷ್ಪಾ! ನೀನು ಬಹಳ ನಿಷ್ಠುರಳಂತೆ ಮಾತನಾಡುವೆ. ನನಗಿರುವ ಏಕಮಾತ್ರ ಆನಂದವನ್ನು ನೋಡಿ ದೂಷಿಸುತ್ತಿರುವೆಯಲ್ಲಾ!"

"ನಿಮ್ಮನ್ನು ದೂಷಿಸುವುದಿಲ್ಲ ಕುಮುದಚಂದ್ರಬಾಬುಗಳೆ! ನೀವು ಸುರನಗರಿಯ ಕಾರಾಗೃಹದಲ್ಲಿದ್ದಾಗ ನಿಮಗೆ ಮರಣವನ್ನುಂಟುಮಾಡುವರೆಂದು ತಿಳಿದು ಎಷ್ಟು ದುಃಖಿಸಿದೆನೆಂಬುದನ್ನು ಬಲ್ಲಿರಾ?

"ಪುಷ್ಪಾ! ನಾನು ಹೂವುಗಳನ್ನು ಪ್ರೀತಿಸುವುದನ್ನು ತಿಳಿದು ದುಃಖಿಸುತ್ತಿರುವೆ".

"ನೀವು ಹೂವುಗಳನ್ನು ಪ್ರೀತಿಸಿದರೆ ನನಗೆ ದುಃಖವುಂಟಾಗುವುದಿಲ್ಲ ಆದರೆ ನನ್ನನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ಅವುಗಳನ್ನು ಪ್ರೀತಿಸುವಿರಿ ಅದರಿಂದ ದುಃಖವಾಗುವುದು".

" ಪುಷ್ಪಾ! ಪುಷ್ಪಾ! ನೋಡು ನನ್ನ ಕೈಗಳು ಹೇಗೆ ನಡುಗುತ್ತಿವೆ. ನನ್ನ ಶುಷ್ಕವಾದ ಕಪೋಲವನ್ನು ನೋಡು. ನನ್ನ ಹೃದಯವು ಹೇಗೆ ಡವಡವನೆ ಬಡಿಯುತ್ತಿದೆ ನೋಡು. ಹೃದಯವು ನಿನಗಾಗಿ ಹೀಗೆ ಕಾತರ ಪಡುತ್ತಿದೆ ಪುಷ್ಪಾ! ಕೃಷ್ಣವರ್ಣದ ಹೂವಿಗಾಗಿ ಅಲ್ಲ. ಆ ಸಸಿಯನ್ನು ನಾಶಮಾಡಿಬಿಡು ಆ ಹೂವಿನ ಮೊಳಕೆಯನ್ನು ಹಾಳುಮಾಡು ನನ್ನ ಸ್ವಪ್ನದಲ್ಲಿ ಕಂಡುಬರುವ ಜ್ಯೋತಿಯನ್ನು ಆರಿಸಿಬಿಡು. ಆದರೆ ನನ್ನನ್ನು ಮಾತ್ರ ಪ್ರೀತಿಸು ಪುಷ್ಪಾ! ನನ್ನನ್ನು ಪ್ರೀತಿಸು ನನ್ನನ್ನು ಮಾತ್ರವೇ ನಾನು ಪ್ರೀತಿಸುತ್ತಿರುವುದು ಅನುಭವವಾಗುತ್ತಿದೆ"

" ನಿಜ ಹೂವನ್ನು ಬಿಟ್ಟರೆ ನನ್ನನ್ನೇ ಪ್ರೀತಿಸುವಿರಿ '

" ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ನಿನ್ನನ್ನೇ ಪ್ರೀತಿಸುತ್ತೇನೆ ಪುಷ್ಪಾ! "

" ಇದನ್ನು ನಂಬಲಿ? "

" ನೀನು ಇಲ್ಲಿ ಇಂತಿರುವುದು ಎಷ್ಟು ನಿಜವೋ ನಾನು ನಿನ್ನನ್ನು ಪ್ರೀತಿಸುವುದೂ ಅಷ್ಟೇ ನಿಜ".

" ಹಾಗಾದರೆ ಸರಿ, ಬಿಡಿ ಆದರೆ ನನ್ನನ್ನು ಪ್ರೀತಿಸುವೆನೆಂದು ಹೇಳುವುದರಿಂದ ನೀವು ಯಾವುದಕ್ಕೂ ಬದ್ಧರಾಗುವುದಿಲ್ಲ"

" ನಾನು ಬದ್ಧನಾಗಿದ್ದೇನೆ ಇದಕ್ಕಿಂತ ಹೆಚ್ಚು ಬಂಧನವನ್ನನುಭವಿಸಲಾರೆ. ಆದರ—ನೀನು ಒಂದು ನಿಯಮಕ್ಕೆ ಬದ್ಧಳಾಗಬೇಕು"

" ಯಾವ ನಿಯಮಕ್ಕೆ? "

" ಮೊದಲನೆಯ ನಿಯಮ-ನೀನು ಮದುವೆಮಾಡಿಕೊಳ್ಳಕೂಡದು "

ಪುಷ್ಪಲತೆಯು ಕಿರುನಗೆಯಿಂದ ಹೇಳತೊಡಗಿದಳು—" ನೀವು ಹೇಳುವುದೆಲ್ಲಾ ಹೀಗೆಯೇ ಪುರುಷರು–ನೀವೆಲ್ಲರೂ ನಿಷ್ಠುರ ಹೃದಯರು —-ಸುಂದರಿಯೊಬ್ಬಳನ್ನು ಪೂಜಿಸುವಿರಿ ಅವಳ ಯೋಚನೆಯೇ ಯಾವಾಗಲೂ ನಿಮ್ಮನ್ನು ಬಾಧಿಸುವುದು. ನಿಮಗೆ ಮರಣದಂಡನೆಯನ್ನು ವಿಧಿಸಿರುವಾಗಲೂ ನಿಮ್ಮ ಯೋಚನೆಗಳೆಲ್ಲವೂ ಆ ಸುಂದರಿಯ ಮೇಲೆಯೇ ಇರುವುವು ನನ್ನ ಆನಂದವನ್ನು ನನ್ನ ಸುಖಮಯಸ್ವಪ್ನಗಳನ್ನೂ ನಾನು ಮರೆತುಬಿಡಬೇಕೆಂದು ಮಾತ್ರ ಈಗ ಉಪದೇಶಮಾಡುವಿರಿ".

"ಯಾವ ಸುಂದರಿಯ ವಿಷಯವನ್ನು ಹೇಳುತ್ತಿರುವೆ, ಪುಷ್ಪಾ?"

"ಶ್ಯಾಮಲಾಂಗಿಯೊಬ್ಬಳಿಲ್ಲವೆ? ಅವಳ ನಡುವು ಸಣ್ಣಗಿರುವುದು—ಕಾಲುಗಳು ಚಿಕ್ಕವಾಗಿರುವುವು—ಗೌರವಸೂಚಕಶಿರಸ್ಸಿರುವುದು—ಒಂದೇ ಮಾತಿನಲ್ಲಿ ಹೇಳಬೇಕಾದರೆ—ನಿಮ್ಮ ಹೂವೆಂದು ಹೇಳಿಬಿಡಬೇಕು".

ಕುಮುದನು ಸ್ವಲ್ಪ ನಕ್ಕು ಹೇಳತೊಡಗಿದನು—"ಈ ಕಲ್ಪಿತ ಸುಂದರಿಯ ವಿಷಯವನ್ನು ಹೇಳುತ್ತಿರುವೆಯಾ?—ನಾನು ಪ್ರೀತಿಸುವುದು ಈ ಕೃತಕ ಸುಂದರಿಯನ್ನು. ನಿನ್ನ ವಿಷಯವನ್ನು ಯೋಚಿಸಿ ನೋಡು ನೀನೇ ಹೇಳಿದಂತೆ—ನಿರಂಜನನೊಬ್ಬನೇ ಅಲ್ಲದ ಇನ್ನೂ ಅನೇಕರು ನಿನ್ನನ್ನು ಪ್ರೀತಿಸುತ್ತಿರುವರು ಸುರನಗರಿಯಲ್ಲಿ ವಿದ್ಯಾರ್ಥಿಗಳು, ಸೈನಿಕರು, ಕಾರಕೂನರು ಎಲ್ಲರೂ ಇರುವರೆಂದು ನೀನೇ ಹೇಳುತ್ತಿದ್ದೆಯಲ್ಲವೆ? ಮಣಿಪುರದಲ್ಲಿ ಕಾರಕೂನರು, ಸೈನಿಕರು, ವಿದ್ಯಾರ್ಥಿಗಳು ಇವರಾರೂ ಇಲ್ಲವೆ?

"ಇಲ್ಲದೆ ಏನು? ಬೇಕಾದಷ್ಟುಮಂದಿ ಇದ್ದಾರೆ".

"ಅವರೆಲ್ಲರೂ ಪತ್ರಗಳನ್ನು ಬರೆಯುವರೆ?"

"ಬರೆಯುತ್ತಾರೆ"

"ಈಗ—ನಿನಗೆ ಓದಲು ಬರುವುದರಿಂದ .. "

ಕುಮುದನು ಮುಂದೆ ಹೇಳಲಾರದೆ ನಿಟ್ಟುಸಿರಿಟ್ಟನು ಪ್ರೇಮ ಪತ್ರಗಳನ್ನು ಪರಿಸುವ ಶಕ್ತಿಯನ್ನು ಪುಷ್ಪಲತೆಯು ಸಂಪಾದಿಸಿದುದು ತನ್ನಿಂದಲೇ ಎಂದವನು ಸ್ವಲ್ಪ ದುಃಖಿತನಾದನು.

ಪುಷ್ಪಲತೆಯು ಹೇಳತೊಡಗಿದಳು—"ಆ ಪತ್ರಗಳನ್ನು ನೋಡಿ ಓದಿಕೊಂಡು ಅವರೆಲ್ಲರನ್ನೂ ಪರೀಕ್ಷಿಸುತ್ತಿದ್ದೇನೆ. ಹಾಗೆ ಮಾಡುವುದರಲ್ಲಿ ನಿಮ್ಮ ಆಜ್ಞೆಯಂತೆಯೇ ನಡೆದುಕೊಳ್ಳಲು ಪ್ರಯತ್ನಪಟ್ಟಿದ್ದೇನೆ".

"ನನ್ನ ಆಜ್ಞೆಯೆ? ಅದು ಹೇಗೆ?"

ಪುಷ್ಪಲತೆಯು ನಿಟ್ಟುಸಿರಿಡುತ್ತ, ಹೇಳಲಾರಂಭಿಸಿದಳು—"ನಿಜ, ಸ್ವಾಮಿ! ನಿಮ್ಮ ಆಜ್ಞೆಯಂತೆಯೇ ನಡೆದುಕೊಳ್ಳುತ್ತಿದ್ದೇನೆ. ರಮಾನಾಥ ಬಾಬುಗಳ ಗೀತಾಪುಸ್ತಕದಲ್ಲಿ ತಾವು ಬರೆದಿಟ್ಟಿರುವ ಉಯಿಲನ್ನು ಮರೆತಿರಾ? ನಾನು ಮಾತ್ರ ಮರೆತಿಲ್ಲ. ಈಗ ನನಗೆ ಓದಲು ಬರುವುದ

ರಿಂದ ಅದನ್ನು ಪ್ರತಿನಿತ್ಯವೂ ಮೇಲೆ ಮೇಲೆ ಓದುತ್ತೇನೆ. ಇಪ್ಪತ್ತಾರು ಇಪ್ಪತ್ತೆಂಟು ವರ್ಷಗಳ ಯುವಕನೊಬ್ಬನನ್ನು ಮದುವೆಯಾಗಬೇಕೆಂದು ಅದರಲ್ಲಿ ತಾವು ಆಜ್ಞೆಮಾಡಿರುವಿರಿ. ಅಂತಹ ಯುವಕನ ಅನ್ವೇಷಣೆ ಯಲ್ಲಿದ್ದೇನೆ. ಪ್ರಾತಃಕಾಲದಲ್ಲಿಯೂ ಮಧ್ಯಾಹ್ನದಲ್ಲಿಯೂ ನಿಮ್ಮ ಪುಷ್ಪ ವನ್ನು ನೋಡಿಕೊಳ್ಳುವುದರಲ್ಲಿಯೇ ಕಾಲವು ಕಳೆದುಹೋಗುವುದು. ಸಾಯಂಕಾಲದ ಮೇಲೆ ಅವನ ಅನ್ವೇಷಣೆ ಮಾಡಬೇಕಾಗಿದೆ".

"ಪುಷ್ಪಾ! ನಾನು ಸಾಯುವೆನೆಂದು ತಿಳಿದು ಆ ಉಯಿಲನ್ನು ಬರೆದೆನು. ದೈವವಶಾತ್ ಬದುಕಿದ್ದೇನೆ".

"ಹಾಗಾದರೆ ಸುಂದರಯುವಕನ ಅನ್ವೇಷಣೆಯ ಯೋಚನೆಯನ್ನು ತ್ಯಜಿಸಿ ನಿಮ್ಮನ್ನು ನೋಡಲು ಬರುವೆನು".

"ಹಾಗೆ ಮಾಡು ಪುಷ್ಪಾ!"

"ಒಂದು ನಿಯಮವನ್ನು ಹಾಕುತ್ತೇನೆ".

"ನೀನು ಹೇಳುವುದಕ್ಕೆ ಮೊದಲೇ ನಿನ್ನ ನಿಯಮಕ್ಕೆ ಒಪ್ಪಿದ್ದೇನೆ".

"ಮೂರುದಿನಗಳವರೆಗೆ ಟ್ಯೂಲಿಪ್ ಪುಷ್ಪದ ಮಾತನ್ನೇ ಎತ್ತ ಕೂಡದು".

"ಪುಷ್ಪಾ! ನೀನು ಬೇಡವೆನ್ನುವುದಾದರೆ ಅದರ ವಿಷಯವನ್ನು ಎಂದೆಂದಿಗೂ ಹೇಳದಿರಬಲ್ಲೆನು".

ಹುಡುಗಿಯು ನಗುತ್ತ, "ಚಿಃ! ಚಿಃ! ಅಸಾಧ್ಯವಾದ ನಿಯಮ ಗಳನ್ನೆಂದಿಗೂ ಹಾಕಲಾರೆನು" ಎಂದಳು.

ಅವಳು ಹಾಗೆ ಹೇಳುತ್ತಿದ್ದಾಗ ಕುಮುದಚಂದ್ರನು ಬಾಗಿಲಿನ ಕಿಟಕಿಯ ಬಳಿ ಇದ್ದ ಕೈಯನ್ನು ಹಿಡಿದು ಚುಂಬಿಸಿದನು. ಪುಷ್ಪಲತೆಯು ಮೆಲ್ಲನೆ ಚೀರಿ ಓಡಿಹೋದಳು. ಆದರೆ ಆ ಚೀತ್ಕಾರದಲ್ಲಿ ಪ್ರೇಮವು ಪೂರ್ಣವಾಗಿ ಕಂಡುಬರುತ್ತಿತ್ತು

## ಏಕವಿಂಶತಿ ಪರಿಚ್ಛೇದ

### ಎರಡನೆಯ ಸಸಿ

ಆ ರಾತ್ರಿಯನ್ನು ಕುಮುದನು ನಿಶ್ಚಿಂತೆಯಿಂದ ಕಳೆದನು. ಮರುದಿನ ಬೆಳಿಗ್ಗೆ ಅವನು ಸುಖದಿಂದ ಕಾಲಕಳೆದನು. ಈಗ್ಗೆ ಕೆಲವು ದಿನಗಳಿಂದ

ಕಾರಾಗೃಹವು ಅತಿಭೀಕರವಾಗಿಯೂ ಬೇಸರಿಕೆಯನ್ನುಂಟುಮಾಡುವುದಾಗಿಯೂ ಇದ್ದಿತು. ಅದು ತನ್ನ ಭಾರವನ್ನೆಲ್ಲಾ ಆ ಬಡ ಬಂದಿಯ ಮೇಲೆ ಬಿಟ್ಟಂತಿದ್ದಿತು ಅದರ ಗೋಡೆಗಳು ಕಪ್ಪಗೆ ಮಸೀಮಯವಾಗಿದ್ದುವು. ಅದರ ಕಬ್ಬಿಣದ ಸಲಾಕಿಗಳು ಬೆಳಕಿನ ಪ್ರತಿಯೊಂದು ರಶ್ಮಿಯನ್ನೂ ನುಂಗಿಹಾಕಿದಂತೆ ಕಾಣಬರುತ್ತಿದ್ದುವು.

ಆದರೆ ಮರುದಿನ ಬೆಳಿಗ್ಗೆ ಕುಮುದನು ಕಣ್ಣುಬಿಟ್ಟು ನೋಡಿದಾಗ ಪ್ರಾತಃಕಾಲದ ಸೂರ್ಯನ ಕಿರಣಗಳು ಕಬ್ಬಿಣದ ಕಂಬಿಗಳಮೇಲೆ ಕುಣಿದಾಡುತ್ತಿದ್ದುವು. ಪಾರಿವಾಳಗಳು ಕಾರಾಗಾರದ ಕಿಟಿಕಿಯ ಬಳಿಯಲ್ಲಿಯೂ ಕಾರಾಗೃಹದ ಚಾವಣಿಯ ಮೇಲೆಯೂ ಗುಡುಗುಡೆಂದು ಶಬ್ದಮಾಡುತ್ತೆ ನಲಿದಾಡುತ್ತಿದ್ದುವು. ಕುಮುದನು ಓಡಿಹೋಗಿ ಅರ್ಧ ಮಾತ್ರ ತೆರೆದಿದ್ದ ಕಾರಾಗಾರದ ಕಿಟಕಿಯ ಬಾಗಿಲನ್ನು ಪೂರ್ತಿಯಾಗಿ ತೆಗೆದನು. ನೂತನ ಜೀವನವೂ ನೂತನ ಸಂತೋಷವೂ ಕಿಟಕಿಯಿಂದ ಅವನ ಕಡೆಗೆ ಬರುವಂತೆ ತೋರುತ್ತಿದ್ದಿತು ಸ್ವಾತಂತ್ರ್ಯವೂ ಕೂಡ ಆ ಕಡೆಯಿಂದ ಬರುತ್ತಿದ್ದಂತೆ ಭಾಸವಾಗುತ್ತಿದ್ದಿತು

ಕಾಳೀಚರಣನು ಎಂದಿನಂತೆ ಪ್ರಾತಃಕಾಲದಲ್ಲಿ ಬಂದಿಯನ್ನು ನೋಡಲು ಬಂದನು. ಬಂದಿಯು ಎಂದಿನಂತೆ ವಿಷಣ್ಣವದನನಾಗಿ ಮೌನವಾಗಿರದೆ, ಕಿಟಕಿಯ ಬಳಿ ನಿಂತು, ಸಣ್ಣದನಿಯಲ್ಲಿ ಗಾನಮಾಡುತ್ತಿದ್ದನು. ಕಾಳೀಚರಣನು ಒಡನೆಯೇ, "ಓಹೋ!" ಎಂದನು

ಕುಮುದಚಂದ್ರನು ಸಂತೋಷವನ್ನು ಸೂಚಿಸುತ್ತೆ, "ಈ ದಿನ ತಾವು ಚೆನ್ನಾಗಿರೋಣಾಗಿದೆಯೇ?" ಎಂದು ಕೇಳಿದನು.

ಕಾಳೀಚರಣನು ಅವನ ಕಡೆಗೆ ನೋಡಿ ಗುರುಗುಟ್ಟಿದನು.

ಕುಮುದಚಂದ್ರ—ನಾಯಿಯು ಹೇಗಿದೆ? ನಿರಂಜನಬಾಬುಗಳು ಹೇಗಿದ್ದಾರೆ? ನಮ್ಮ ಪುಷ್ಪಲತಾಸುಂದರಿಯು ಹೇಗಿದ್ದಾಳೆ?

ಕಾಳೀಚರಣನು ಹಲ್ಲುಕಡಿಯುತ್ತೆ,"ನಿನ್ನ ಆಹಾರವಿಲ್ಲಿದೆ" ಎಂದನು.

ಕುಮುದಚಂದ್ರ—ತಮಗೆ ಅನೇಕ ವಂದನೆಗಳು ಸ್ವಾಮಿ! ತಾವು ಸರಿಯಾದ ಸಮಯಕ್ಕೆ ಬರೋಣಾಯಿತು—ನನಗೆ ಬಹಳ ಹಸಿವಾಗ ತೊಡಗಿದ.

ಕಾಳೀಚರಣ—ಓಹೋ! ಹಸಿವಾಗುತ್ತಿದೆಯೋ ನಿನಗೆ?

ಕುಮುದಚಂದ್ರ—ಆಗಬಾರದೇನು?

ಕಾಳೀಚರಣ — ಪಿತೂರಿಯು ಸರಿಯಾಗಿ ನಡೆಯುತ್ತಿದ್ದಂತೆ ಕಾಣುವುದು

"ಎಂತಹ ಪಿತೂರಿ?"

"ಇರಲಿರಲಿ. ನಾನು ತಿಳಿದಿರುವುದನ್ನು ಹೇಳಲಾರೆ. ವಿದ್ಯಾ ಸಂಪನ್ನ ಮಹಾಶಯ! ಸ್ವಲ್ಪ ಸುಮ್ಮನಿರು. ನಾವು ಬಹಳ ಹುಷಾರಾಗಿದ್ದೇವೆ".

"ಹುಷಾರಾಗಿರಿ, ಕಾಳೀಚರಣಬಾಬುಗಳೆ! ಹುಷಾರಾಗಿರಿ. ಎಷ್ಟು ದಿನಗಳು ಬೇಕಾದರೂ ಜಾಗರೂಕರಾಗಿರಿ. ನನ್ನ ಪಿತೂರಿಯೂ ನಾನೂ ತಮ್ಮ ಸೇವೆಗೆ ಸಿದ್ಧರಾಗಿದ್ದೇವೆ".

"ಈ ದಿನ ಮಧ್ಯಾಹ್ನ ಎಲ್ಲವೂ ತಿಳಿದುಹೋಗುವುದು"

ಹಾಗೆ ಹೇಳುತ್ತೆ ಕಾಳೀಚರಣನು ಹೊರಟುಹೋದನು. ಕುಮುದ ಚಂದ್ರನು ತನ್ನಲ್ಲಿಯೇ, "ಮಧ್ಯಾಹ್ನವೆ! ಹಾಗಂದರೇನು? ಇರಲಿ. ಹನ್ನೆರಡು ಹೊಡೆಯಲಿ. ನೋಡೋಣ" ಎಂದುಕೊಂಡನು.

ರಾತ್ರಿ ಒಂಬತ್ತುಗಂಟೆಯವರೆಗೂ ಕಾದಿರುವ ಅಭ್ಯಾಸವಿದ್ದ ಕುಮುದ ಚಂದ್ರನಿಗೆ ಮಧ್ಯಾಹ್ನ ಹನ್ನೆರಡುಗಂಟೆಯವರೆಗೆ ಕಾಯುವುದೇನೂ ಕಷ್ಟವಾಗಿರಲಿಲ್ಲ ಹನ್ನೆರಡು ಹೊಡೆಯುತ್ತಲೇ ಕಾರಾಗೃಹದ ಮೆಟ್ಟಲುಗಳ ಮೇಲೆ ಕಾಳೀಚರಣನ ಹೆಜ್ಜೆಯ ಶಬ್ದವಲ್ಲದೆ ಅವನೊಡನೆ ಬರುತ್ತಿದ್ದ ನಾಲ್ಕಾರು ಸೈನಿಕರ ಹೆಜ್ಜೆಗಳ ಶಬ್ದಗಳೂ ಕೇಳಿಬಂದುವು ಬಾಗಿಲನ್ನು ತೆರೆದುಕೊಂಡು ಕಾಳೀಚರಣನು ಒಳಗೆ ಬಂದನು. ಅವನು ತನ್ನ ಸೈನಿಕರನ್ನು ಒಳಕ್ಕೆ ಬರಮಾಡಿಕೊಂಡು ಬಾಗಿಲನ್ನು ಮುಚ್ಚಿ, "ಈಗ ಚೆನ್ನಾಗಿ ಹುಡುಕಿರಿ" ಎಂದು ಹೇಳಿದನು.

ಸೈನಿಕರು ಕುಮುದನ ಕಿಸೆಗಳನ್ನು ಪರೀಕ್ಷಿಸಿ ಅವನ ದೇಹವಾದ್ಯಂತವನ್ನೂ ಶೋಧಿಸಿದರು. ಆದರೂ ಅವರಿಗೇನೂ ಸಿಕ್ಕಲಿಲ್ಲ ಬಳಿಕ ಅವರು ಹರಕುಚಾಪೆಯನ್ನೂ ಹಾಸಿಗೆಯನ್ನೂ ಎಲ್ಲವನ್ನೂ ಪರೀಕ್ಷಿಸಿದರು. ಅವರಿಗೇನೂ ದೊರೆಯಲಿಲ್ಲ.

ಕುಮುದಚಂದ್ರನು ಮೂರನೆಯ ಸಸಿಯನ್ನು ತನ್ನ ಬಳಿ ಇಟ್ಟು ಕೊಳ್ಳದಿದ್ದುದಕ್ಕಾಗಿ ಸಂತೋಷಪಟ್ಟನು. ಅದವನಲ್ಲಿದ್ದಿದ್ದರೆ ಕಾಳೀ ಚರಣನು ಈ ಶೋಧನೆಯಲ್ಲಿ ಅದನ್ನು ಕಂಡುಹಿಡಿದುಬಿಡುತ್ತಿದ್ದನು.

ಕುಮುದನು ಈ ಸಂಶೋಧನೆಯಾಗುತ್ತಿದ್ದಾಗ ನಿರಾತಂಕವಾಗಿ ನಿಂತು ನೋಡುತ್ತಿದ್ದನು ಒಂದು ಸೀಸವಕಡ್ಡಿಯ ಚೂರನ್ನೂ, ಪುಷ್ಪ ಲತೆಯು ಕುಮುದನಿಗೆ ಕೊಟ್ಟಿದ್ದ ಎರಡು ಮೂರು ಬಿಳಿಯ ಕಾಗದ ಗಳನ್ನೂ ಕಾಳೀಚರಣನು ಬಹುಮಾನವಾಗಿ ಹೊಂದಿ ಹಿಂದಿರುಗಿದನು.

ಆರುಗಂಟೆಯವೇಳೆಗೆ ಕಾಳೀಚರಣನೊಬ್ಬನೇ ಬಂದನು. ಆಗ ಕುಮುದಚಂದ್ರನು ಅವನೊಡನೆ ಒಳ್ಳೆಯ ಮಾತುಗಳನ್ನಾಡಲೆತ್ನಿಸಿದನು. ಕಾಳೀಚರಣನು ಸಲಗದ ದಂತದಂತಿದ್ದ ಹಲ್ಲೊಂದನ್ನು ತೋರಿಸುತ್ತ ಒಂದಕ್ಕೆ ಹೊರಟುಹೋದನು ಕುಮುದಚಂದ್ರನು ಗಟ್ಟಿಯಾಗಿ ನಗ ತೊಡಗಿದನು ಕಾಳೀಚರಣನು ಬಾಗಿಲಲ್ಲಿದ್ದ ಕಿಟಕಿಯಲ್ಲಿ "ಗೆದ್ದವನು ನಗಲಿ" ಎಂದು ಹೇಳಿ ಹೊರಟುಹೋದನು

ಆ ದಿನ ಗೆದ್ದವನು ಕುಮುದಚಂದ್ರನಾಗಿದ್ದನು—ಪುಷ್ಪಲತೆಯು ಒಂಭತ್ತುಗಂಟೆಗೆ ಸರಿಯಾಗಿ ಬಂದಳು. ಅವಳ ಬಳಿ ಈ ದಿನ ದೀಪವಿರ ಲಿಲ್ಲ ಹಿಂದೆ ಹಿಂದೆಯೇ ಬರುವ ನಿರಂಜನನು ದೀಪವನ್ನು ನೋಡಿವರೆ ಕಷ್ಟವುಂಟಾಗಿಬಿಡುತ್ತಿದ್ದಿತು—ಅಲ್ಲದೆ ದೀಪವು ಅವಳ ಲಜ್ಜೆಯನ್ನು ತೋರಿಸಿಬಿಡುತ್ತಿದ್ದಿತು ಅದಕ್ಕಾಗಿ ಅವಳು ದೀಪರಹಿತಳಾಗಿ ಬಂದಳು.

ಆ ದಿನ ಆ ಪ್ರೇಮಿಕ ಪ್ರೇಮಿಕೆಯರು ಮಾತನಾಡಿದುದೇನು? ಅದೆಲ್ಲವನ್ನೂ ನಾವು ಹೇಳಲಾರೆವು. ಅಂತೂ ಅವರು ಮಾತನಾಡುತ್ತಿದ್ದಾಗ ಗಂಟೆಗಳು ರೆಕ್ಕೆಗಳನ್ನು ಕಟ್ಟಿಕೊಂಡಂತೆ ಹಾರಿಹೋದುವು ಟ್ಯೂಲಿಪದ ವಿಷಯವೊಂದನ್ನು ಬಿಟ್ಟು ಮಿಕ್ಕೆಲ್ಲವಿಷಯವನ್ನೂ ಅವರು ಮಾತನಾಡಿದ ರೆಂದು ಮಾತ್ರ ಹೇಳುವೆವು.

ಹತ್ತುಗಂಟೆಯಾಗುತ್ತಲೇ ಅವರು ಎಂದಿನಂತೆ ಅಗಲಿದರು ಕುಮುದನಿಗೆ ಸಂತೋಷವಾಗಿತ್ತು. ಪುಷ್ಪಗಳಲ್ಲಿ ಪ್ರಾಣವಿಟ್ಟಿರುವ ಪ್ರಾಣಿಗೆ ಅವುಗಳ ವಿಷಯವನ್ನೇ ಹೇಳದಿದ್ದರೆ ಎಷ್ಟು ಆನಂದವೋ ಅಷ್ಟುಮಟ್ಟಿಗೆ ಕುಮುದನಿಗೆ ಸಂತೋಷವಾಗಿತ್ತು. ಪುಷ್ಪಲತೆಯು ಬಹಳ ಸುಂದರಿ

ಯೇನೋ ಸರಿ—ಆದರೆ ಅವಳು ಟ್ಯೂಲಿಪದ ವಿಷಯವನ್ನು ಹೇಳಲೇ ಕೂಡದೆಂದು ನಿಯಮಮಾಡಿಕೊಂಡಳೇಕೆ? ಅವಳಲ್ಲಿ ಇದೊಂದು ಕಳಂಕವೇ ಸರಿ. ಇದೊಂದು ನ್ಯೂನತೆಯನ್ನು ಬಿಟ್ಟರೆ ಅವಳು ಅನುಪಮ ಸುಂದರಿಯೆನ್ನುವುದರಲ್ಲಿ ಸಂದೇಹವೇ ಇಲ್ಲ—ಹೀಗೆಯೇ ಕುಮುದನು ಯೋಚಿಸತೊಡಗಿದನು ನಿದ್ರೆ ಬರುವವರೆಗೂ ಅವನು ಪುಷ್ಪಲತೆಯ ಯೋಚನೆಯನ್ನು ಮಾಡಿದನು. ನಿದ್ರಿಸಿದ ಬಳಿಕ ಅವಳನ್ನು ಸ್ವಪ್ನದಲ್ಲಿ ಕಂಡನು. ಆದರೆ ಸ್ವಪ್ನದ ಪುಷ್ಪಲತೆಯು ನಿಜಪುಷ್ಪಲತೆಗಿಂತ ಹೆಚ್ಚು ಸುಂದರಿಯೂ ಕಳಂಕರಹಿತಳೂ ಆಗಿದ್ದಂತೆ ಅವನಿಗೆ ತೋರಿದುದು ಸ್ವಪ್ನಸುಂದರಿಯು ಅವನ ಟ್ಯೂಲಿಪದ ವಿಷಯವನ್ನು ಹೇಳಿದುದಲ್ಲದೆ ಒಂದು ಚೈನಾ ಬಟ್ಟಲಿನಲ್ಲಿ ಕರಿಯ ಟ್ಯೂಲಿಪನ್ನು ಅವನಿಗೆ ತಂದು ಕೊಟ್ಟಳು. ಸಂತೋಷದಿಂದ ನಡುಗುತ್ತ ಕುಮುದನು ಎದ್ದು, "ಪುಷ್ಪಾ! ಪುಷ್ಪಾ! ನಿನ್ನನ್ನು ಪ್ರೀತಿಸುತ್ತೇನೆ" ಎಂದನು.

ಆ ವೇಳೆಗೆ ಪ್ರಾತಃಕಾಲವಾಗಿದ್ದುದರಿಂದ ಕುಮುದನು ಎದ್ದು ಕುಳಿತು ತನ್ನ ಸ್ವಪ್ನದ ವಿಷಯವನ್ನೇ ಪುನಃ ಮನಸ್ಸಿನಲ್ಲಿಯೇ ಯೋಚಿಸತೊಡಗಿದನು

ಆಹಾ! ಪುಷ್ಪಲತೆಯು ಪುಷ್ಪದ ವಿಷಯವಾಗಿ ಮಾತನಾಡಿಬಿಟ್ಟರೆ ಎಂತಹ ಪರಮಸುಂದರಿಯಾಗಿಬಿಡುವಳು ಹೇಗಾದರೂ ಆಗಲಿ ಎಪ್ಪತ್ತೆರಡುಗಂಟೆಗಳಲ್ಲಿ ಆಗಲೇ ಮೂವತ್ತಾರುಗಂಟೆಗಳು ಕಳೆದುಹೋದುವು. ಉಳಿದವೂ ಮುಗಿದುಹೋಗುವುವು ಸಾಯಂಕಾಲ ಅವಳು ಬರುವುದನ್ನೇ ನಿರೀಕ್ಷಿಸುತ್ತ ಹದಿನೆಂಟುಗಂಟೆಗಳೂ ಆ ಭೇಟಿಯನ್ನು ಜ್ಞಾಪಕಕ್ಕೆ ತಂದುಕೊಳ್ಳುತ್ತ ಮತ್ತೆ ಹದಿನೆಂಟುಗಂಟೆಗಳೂ ಕಳೆದುಹೋಗುವುವು. ಬಳಿಕ ಅವಳೊಡನೆ ಟ್ಯೂಲಿಪದ ವಿಷಯವನ್ನು ಮಾತನಾಡಬಹುದು!

ಪುಷ್ಪಲತೆಯು ಎಂದಿನಂತೆ ಬಂದಳು. ಆದರೆ ಪುಷ್ಪದ ವಿಷಯವನ್ನು ಮಾತ್ರ ಮಾತನಾಡಲಿಲ್ಲ ಹೀಗೆ ಮಾಡುವುದರಿಂದ ಕುಮುದನಿಗೆ ಕಷ್ಟವೆಂದು ಅವಳೂ ಬಲ್ಲವಳಾಗಿದ್ದಳು. ಅವಳೂ ಮ್ಲಾನಮುಖದಿಂದ ಆ ದಿನ ಹಿಂದಿರುಗಿದಳು

ಮರುದಿನ ಅವಳು ಬರುತ್ತಲೇ "ಅವಳೆದ್ದು ನಿಂತಿದ್ದಾಳೆ" ಎಂದಳು.

ಅವಳು ಪುಷ್ಪದ ವಿಷಯವನ್ನು ಹೇಳುತ್ತಿರುವಳೆಂದು ಕುಮುದನು ನಂಬಲಾರದವನಾಗಿದ್ದುದರಿಂದ, "ಅವಳೆ? ಯಾರು? ಯಾರು ನಿಂತಿದ್ದಾರೆ?" ಎಂದನು.

ಪುಷ್ಪಲತೆ—ಅವಳೇ! ನನ್ನ ಮಗಳು—ನಿಮ್ಮ ಹೂವು!

ಕುಮುದ—ಏನು? ಹಾಗಾದರೆ ನನ್ನ ಹೂವಿನ ವಿಷಯವನ್ನು ಮಾತನಾಡಲು ಒಪ್ಪುವೆಯಾ?

"ಒಪ್ಪಿದ್ದೇನೆ"

"ಆಹಾ! ಪುಷ್ಪಾ!"

ಕುಮುದನು ಕುಣಿಯತೊಡಗಿದನು ಅವಳು ಅಪ್ಪಣೆಯಿತ್ತ ಸಮಯದಲ್ಲಿಯೇ ಪುಷ್ಪದ ವಿಚಾರವೆಲ್ಲವನ್ನೂ ಕೇಳಿ ಮುಗಿಸಿಬಿಡಬೇಕೆಂದು ಕುಮುದನು ಒಡನೆಯೇ, "ಸರಿಯಾಗಿ ನೆಟ್ಟಗೆ ಬೆಳೆದಿದೆಯೆ?" ಎಂದನು.

"ಬೆಳದಿದೆ"

"ಎಷ್ಟು ಎತ್ತರವಿದೆ?"

"ಎರಡಂಗುಲಗಳಷ್ಟು"

"ಪುಷ್ಪಾ! ಅದನ್ನು ಸರಿಯಾಗಿ ನೋಡಿಕೋ ಅದು ಚೆನ್ನಾಗಿ ಬೆಳೆಯಲಿ"

"ಅದನ್ನು ಮತ್ತೆಷ್ಟು ಚೆನ್ನಾಗಿ ನೋಡಿಕೊಳ್ಳಲಿ! ಅದರ ವಿಷಯವನ್ನಲ್ಲದೆ ಬೇರೆ ಯೋಚನಯನ್ನೇ ಮಾಡುತ್ತಿಲ್ಲ".

"ಬೇರೆ ಯೋಚನೆಯೇ ಇಲ್ಲವೆ? ನಾನು ಅಸೂಯೆಪಡಬೇಕಾಗುವುದು".

"ಪುಷ್ಪದ ವಿಚಾರವನ್ನು ಯೋಚಿಸುತ್ತಿದ್ದರೆ ನಿಮ್ಮ ವಿಷಯವನ್ನು ಯೋಚಿಸಿದಂತೆಯೇ. ಅದನ್ನಾವಾಗಲೂ ನೋಡುತ್ತಿರುತ್ತೇನೆ. ಏಳುತ್ತಲೇ ಮೊದಲು ಅದೇ ಕಾಣುವುದು ಮಲಗುವುದಕ್ಕೆ ಮೊದಲು ನನ್ನ ಕಣ್ಣುಗಳು ಅದನ್ನು ನೋಡುವುವು ದಿನವೆಲ್ಲಾ ಅದ ರಬಳಿ ಕುಳಿತು ಕೆಲಸಮಾಡುತ್ತೇನೆ. ನನ್ನ ಕೊಟಡಿಯಲ್ಲಿ ಅದನ್ನಿಟ್ಟಾಗಲಿಂದ ಅದನ್ನು ಬಿಟ್ಟೇ ಇಲ್ಲ".

"ನೀನು ಮಾಡಿದುದು ಸರಿ ಪುಷ್ಪಾ! ಅದು ನಿನ್ನ ಆಸ್ತಿಯಷ್ಟೆ".

“ನಿಜ. ಆದರಿಂದ ನಾನು ಇಪ್ಪತ್ತಾರು ಇಪ್ಪತ್ತೆಂಟು ವಯಸ್ಸಿನ ಯುವಕನೊಬ್ಬನನ್ನು ಮೋಹಿಸಿ ಮದುವೆಮಾಡಿಕೊಳ್ಳುವೆನು”.

“ಹಾಗೆ ಮಾತನಾಡಬೇಡ. ನೀನು ತುಂಟಹುಡುಗಿಯಾಗುತ್ತಿರುವೆ.”

ಆ ದಿನ ಕುಮುದನ ಸಂತೋಷಕ್ಕೆ ಪಾರವೇ ಇರಲಿಲ್ಲ. ಆ ದಿನ ದಿಂದ ಟ್ಯೂಲಿಪ್‌ಸಸಿಯು ಬೆಳೆದಂತೆಯೇ ಅವರ ಪ್ರೇಮವೂ ಬೆಳೆಯ ತೊಡಗಿದುದು

ಒಂದುದಿನ ಹೂವಿನ ಎಲೆಗಳು ಅಗಲವಾಗಿ ಬೆಳೆದಿವೆಯೆಂದು ಪುಷ್ಪ ಲತೆಯು ಹೇಳಿದಳು ಮರುದಿನ ಹೂವಿನ ಮೊಗ್ಗು ಕಂಡುಬರುತ್ತಿದೆ ಯೆಂದಳು ಆ ದಿನ ಕುಮುದನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನು ಮೇಲೆ ಮೇಲೆ ಪ್ರಶ್ನಾವಳಿಯನ್ನು ಸುರಿಯತೊಡಗಿದನು

“ಮೊಗ್ಗು ಕಾಣುವುದೆ? ನಿಜವಾಗಿ ಕಾಣುವುದೆ?”

“ಕಾಣುವುದು”

ಕುಮುದನು ಸಂತೋಷದಿಂದ ನಗುತ್ತ ನಿಂತನು ಅವನು ಬೀಳದಿರ ಲೋಸುಗ ಬಾಗಿಲಿನ ಕಿಟಕಿಯಲ್ಲಿದ್ದ ಸಲಾಕಿಯನ್ನು ಹಿಡಿದು ನಿಲ್ಲ ಬೇಕಾಯಿತು. ಒಡನೆಯೇ, “ದೇವರು ದೊಡ್ಡವನು!” ಎಂದನು. ಬಳಿಕ ಪುಷ್ಪಲತೆಯ ಕಡೆಗೆ ತಿರುಗಿ ಪ್ರಶ್ನಾವಳಿಯನ್ನು ಮುಂದುವರಿಸಿದನು

“ಮೊಗ್ಗು ಸರಿಯಾಗಿದೆಯೆ? ಅದು ಅಂಡಾಕಾರವಾಗಿದೆಯೆ? ಮೊಗ್ಗನ್ನುಳ್ಳ ಸಸಿಯ ಶಾಖೆಯು ಹೇಗಿದೆ? ಮೊಗ್ಗು ಅರಳುವುದ ರಲ್ಲಿದೆಯೆ?”

“ಮೊಗ್ಗು ಸರಿಯಾಗಿದೆ. ಒಂದು ಅಂಗುಲದಷ್ಟು ಉದ್ದವಾಗಿದೆ. ಸೂಜಿಯಂತೆ ಒಂದು ಕೊನೆಯಲ್ಲಿ ನಿಶಿತವಾಗಿದೆ. ಮೊಗ್ಗನ್ನುಳ್ಳ ಸಸಿಯ ಶಾಖೆಯು ಪಕ್ಕಗಳಲ್ಲಿ ದಪ್ಪನಾಗಿದೆ. ಮೊಗ್ಗು ಅರಳುವುದರಲ್ಲಿದೆ”.

ಎರಡುದಿನಗಳ ಮೇಲೆ ಪುಷ್ಪಲತೆಯು ಬಂದಾಗ, “ಮೊಗ್ಗು ಅರಳಿದೆ” ಎಂದಳು.

“ಅರಳಿದೆಯೆ ಪುಷ್ಪಾ! ಮೊಗ್ಗು ಅರಳಿದೆಯೆ?-ಹಾಗಾದರೆ ಹೂವಿನ ಬಣ್ಣವು .. ”

ಬಂದಿಯು ಮಾತನ್ನು ನಿಲ್ಲಿಸಿ ಆತಂಕದಿಂದ ಪುಷ್ಪಲತೆಯ

ಮುಖವನ್ನು ನೋಡಿದನು. ಅವಳು, "ಅಹುದು. ಮಿಕ್ಕ ಪುಷ್ಪಗಳಿಗಿಂತ ಬೇರೆಯಾದ ಬಣ್ಣದ ಛಾಯೆಯು ಆಗಲೇ ಕಾಣುತ್ತಿದೆ" ಎಂದಳು.

ಕುಮುದನು ನಡುಗುತ್ತ, "ಯಾವ ಬಣ್ಣದ ಛಾಯೆಯಿದೆ?" ಎಂದು ಕೇಳಿದನು.

"ಬಹಳ ಕಪ್ಪಗಿದೆ".

"ಬೂದಿಯ ಬಣ್ಣವೆ?"

"ಅದಕ್ಕಿಂತಲೂ ಕಪ್ಪಾಗಿದೆ"

"ಅದಕ್ಕಿಂತಲೂ ಕಪ್ಪಾಗಿದೆಯೆ ಪುಷ್ಪಾ! ನಿನ್ನನ್ನೆಷ್ಟು ಕೊಂಡಾಡಿದರೂ ಸಾಲದು ಕಪ್ಪಗೆಂದರೆ ಹೇಗೆ .."

"ನಿಮಗೆ ಕಾಗದವನ್ನು ಬರೆಯಲು ಉಪಯೋಗಿಸಿದ ಮಸಿಯಂತಿದೆ"

ಕುಮುದನು ಹುಚ್ಚನಂತೆ ಕೂಗಿದನು. ತಟ್ಟನೆ ಅವಳ ಕೈಬೆರಳುಗಳನ್ನು ಹಿಡಿದು, "ಓಹೋ! ನಿನ್ನನ್ನು ಹೋಲಿಸಲು ಯಾವ ದೇವತೆಯೂ ಸ್ವರ್ಗದಲ್ಲಿಲ್ಲ ಪುಷ್ಪಾ!" ಎಂದನು

ಅವಳು ಅವನ ಉತ್ಸಾಹವನ್ನು ನೋಡಿ ನಕ್ಕು, "ನಿಜವೆನ್ನಬೇಕು!" ಎಂದಳು.

"ಪುಷ್ಪಾ! ನೀನು ಇಷ್ಟು ಕಷ್ಟ ಪಟ್ಟಿರುವೆ. ನನಗೆಷ್ಟು ಉಪಕಾರ ಮಾಡಿರುವೆ ಪುಷ್ಪಾ! ನನ್ನ ಟ್ಯೂಲಿಪ್‌ಸಸಿಯು ಹೂಬಿಡುವುದರಲ್ಲಿರುವುದು. ಅದು ಕರಿಯ ಪುಷ್ಪವನ್ನು ಬಿಡುವುದು ಪುಷ್ಪಾ! ಪುಷ್ಪಾ! ನಿನ್ನ ಸಮಾನವಾಗಿ ಪ್ರಪಂಚದಲ್ಲಾವ ವಸ್ತುವೂ ಇಲ್ಲ".

"ನನಗಿಂತ ಉತ್ತಮವಸ್ತುವಾದ ಕರಿಯಪುಷ್ಪವಿದೆಯಷ್ಟೆ".

"ಆಹಾ! ಸುಮ್ಮನಿರು ತುಂಟಹುಡುಗಿ! ಸುಮ್ಮನಿರು. ನನ್ನ ಸಂತೋಷವನ್ನು ಹಾಳುಮಾಡಲು ನಾಚಿಕೆಯಾಗುವುದಿಲ್ಲವೆ? ಹೇಳು ಪುಷ್ಪಾ! ಇನ್ನೆರಡು ಮೂರುದಿನಗಳಲ್ಲಿ ಪುಷ್ಪವು ಚೆನ್ನಾಗಿ ಅರಳುವುದಲ್ಲವೆ?"

"ನಾಳೆ ಅಥವಾ ನಾಡಿದ್ದು ಅರಳುವುದು".

"ಅಯ್ಯೋ! ಅದನ್ನು ನಾನು ನೋಡಲಾಗುವುದಿಲ್ಲ. ದೇವರು ಸೃಷ್ಟಿಸಿದ ಉತ್ತಮವಸ್ತುವೆಂದು ನಿನ್ನ ಕೈಗಳನ್ನು ಚುಂಬಿಸುವಂತೆ ಅದನ್ನು ಚುಂಬಿಸಲಾಗದು".

"ಇರಲಿ ಬಿಡಿ. ಯೋಚಿಸಬೇಡಿ. ಬೇಕಾದರೆ ಅದನ್ನು ಕತ್ತರಿಸಿ ತಂದು ತೋರುತ್ತೇನೆ".

"ಬೇಡ ಪುಷ್ಪಾ! ಬೇಡ. ಅದು ಚೆನ್ನಾಗಿ ಅರಳುತ್ತಲೇ ಅದನ್ನು ಜಾಗರೂಕತೆಯಿಂಡ ನೋಡಿಕೊ. ಅದನ್ನು ನೆರಳಿನಲ್ಲಿಡು. ಒಡನೆಯೇ ಕಲ್ಯಾಣನಗರಿಗೆ ದೂತನೊಬ್ಬನೊಡನೆ ಹೇಳಿಕಳುಹಿಸು. ಟ್ಯೂಲಿಪ್ ಸಂಘದ ಅಧ್ಯಕ್ಷನಿಗೆ ಹೇಳಿಕಳುಹಿಸು. ಟ್ಯೂಲಿಪ್‌ಸಸಿಯೊಂದು ಕರಿಯ ಪುಷ್ಪವನ್ನು ಬಿಟ್ಟಿದೆಯೆಂದು ತಿಳುಹಿಸು. ಇಲ್ಲಿಂದ ಕಲ್ಯಾಣನಗರಿಗೆ ದೂರವೇ ಸರಿ. ಆದರೆ ಹಣವನ್ನು ಕೊಟ್ಟರೆ ದೂತನೊಬ್ಬನು ದೊರಕುವುದು ದುರ್ಲಭವಲ್ಲ. ಪುಷ್ಪಾ! ನಿನ್ನಲ್ಲಿ ಹಣವೇನಾದರೂ ಇದೆಯೆ?"

ಪುಷ್ಪಲತೆಯು ನಕ್ಕು ಇದೆಯೆಂದಳು.

"ಬೇಕಾದಷ್ಟು ಇದೆಯೆ?"

"ನನ್ನಲ್ಲಿ ಮುನ್ನೂರು ರೂಪಾಯಿಗಳಿವೆ".

"ಓಹೋ! ನಿನ್ನಲ್ಲಿ ಅಷ್ಟು ಹಣವಿರುವುದಾದರೆ ಕಲ್ಯಾಣನಗರಿಗೆ ನೀನೇ ಹೋಗಬೇಕು ಪುಷ್ಪಾ! ದೂತನನ್ನು ಕಳುಹಿಸಬೇಡ".

"ಆದರೆ ಪುಷ್ಪದ ಗತಿಯೇನಾಗಬೇಕು"

"ನಿಜ. ಪುಷ್ಪದ ಗತಿಯೇನು? ಅದನ್ನೂ ನೀನು ತೆಗೆದುಕೊಂಡು ಹೋಗಬೇಕು. ನೀನದನ್ನು ಬಿಟ್ಟು ಒಂದು ಕ್ಷಣಮಾತ್ರವೂ ಇರಬಾರದು ತಿಳಿಯಿತೆ?"

"ಅದನ್ನು ಬಿಟ್ಟಿರದಂತೆ ನನ್ನೊಡನೆಯೇ ತೆಗೆದುಕೊಂಡು ಹೋಗುವೆನು. ಆದರೆ ನಿಮ್ಮನ್ನು ಬಿಟ್ಟಿರಬೇಕಾಗುವುದಲ್ಲಾ!"

"ಆಹಾ! ನಿಜ! ಪುಷ್ಪಾ! ಅಯ್ಯೋ! ಜನಗಳು ಎಷ್ಟು ಕೆಟ್ಟವರು! ಅವರಿಗೆ ನಾನು ಮಾಡಿರುವ ಅಪರಾಧವೇನು? ನನ್ನ ಸ್ವಾತಂತ್ರ್ಯವನ್ನಪಹರಿಸಿರುವರಲ್ಲಾ. ನೀನು ಹೇಳಿದುದು ನಿಜ, ಪುಷ್ಪಾ! ನೀನಿಲ್ಲದಿದ್ದರೆ ಬದುಕಿರಲಾರೆನು. ಸರಿ ಯಾರನ್ನಾದರೂ ಕಲ್ಯಾಣನಗರಿಗೆ ಕಳುಹಿಸು. ಅದು ನಿರ್ಧರವಾದಂತೆಯೇ ಸರಿ. ಅಧ್ಯಕ್ಷನೇ ಸ್ವಲ್ಪ ತೊಂದರೆ ತೆಗೆದುಕೊಂಡು ಈ ಆಶ್ಚರ್ಯಕರವಾದ ವಸ್ತುವನ್ನು ನೋಡಲು ಬರಬೇಕು. ಅವನೇ ಹೂವನ್ನು ನೋಡಲು ಮಣಿಪುರಕ್ಕೆ ಬರುತ್ತಾನೆ"

ಅವನು ತಟ್ಟನೆ ತನ್ನ ಮಾತನ್ನು ನಿಲ್ಲಿಸಿ, ತೊದಲು ನುಡಿಯಲ್ಲಿ, "ಪುಷ್ಪಾ! ಪುಷ್ಪಾ! ಒಂದುವೇಳೆ ಸಸಿಯು ಕರಿಯಪುಷ್ಪವನ್ನು ಬಿಡದಿದ್ದ ರೇನುಮಾಡುವುದು?" ಎಂದನು.

"ನಾಳೆ ಅಥವಾ ನಾಡಿದ್ದು ತಿಳಿಯುವುದು"

"ಅದನ್ನು ತಿಳಿಯಲು ರಾತ್ರಿ ಒಂಭತ್ತುಗಂಟೆಯವರೆಗೆ ಕಾಯ ಬೇಕಲ್ಲಾ! ಸಮಾಧಾನವಿಲ್ಲದೆ ಸಾಯಬೇಕಾಗುವುದು ಯಾವುದಾದರೂ ಸಂಕೇತದಿಂದ ತಿಳಿಸಲಾರೆಯೊ?"

"ಒಂದುತ್ತಮಕಾರ್ಯವನ್ನು ಮಾಡುತ್ತೇನೆ".

"ಏನು ಮಾಡುವೆ?"

"ರಾತ್ರಿಯಲ್ಲಿ ಅದು ಹೂ ಬಿಟ್ಟರೆ ನಾನೇ ಬಂದು ಹೇಳುತ್ತೇನೆ. ಪ್ರಾತಃಕಾಲದಲ್ಲಿ ಹೂ ಬಿಟ್ಟರೆ ನಿಮ್ಮ ಬಾಗಿಲ ಮೂಲಕ ಒಂದು ಕಾಗದ ವನ್ನುತಳ್ಳಿಬಿಡುತ್ತೇನೆ ನನ್ನತಂದೆಯು ಮೊದಲನೆಯಬಾರಿ ಬಂದು ಹೋದ ಬಳಿಕ ಎರಡನೆಯಬಾರಿ ಬರುವಷ್ಟರಲ್ಲಿ ಕಾಗದವನ್ನು ಕೊಡುತ್ತೇನೆ"

"ಸರಿ ಪುಷ್ಪಾ! ಹಾಗೆಯೇ ಮಾಡು ನಿನ್ನಿಂದ ಒಂದು ಮಾತು ತಿಳಿವರೆ ಎರಡು ವಿಧಗಳಲ್ಲಿ ನನಗೆ ಆನಂದವಾಗುವುದು"

"ನೋಡಿ. ಹತ್ತುಗಂಟೆಗಳು ಹೊಡೆಯುತ್ತಿವೆ. ನಾನೀಗ ಹೊರಟು ಹೋಗಬೇಕು"

"ನಿಜ, ನಿಜ. ಹೋಗು, ಪುಷ್ಪಾ, ಹೋಗು".

ಪುಷ್ಪಲತೆಯು ದುಃಖಿತಳಾಗಿ ಹೊರಟುಹೋದಳು. ತನ್ನ ಪುಷ್ಪ ವನ್ನು ನೋಡಿಕೊಳ್ಳಲು ತನ್ನನ್ನು ಪ್ರಿಯತಮನು ಬಲವಂತವಾಗಿ ಕಳುಹಿಸಿಬಿಟ್ಟಂತೆ ಅವಳಿಗೆ ಭಾಸವಾಗಿದ್ದಿತು.

## ದ್ವಾವಿಂಶತಿ ಪರಿಚ್ಛೇದ

### ಆನಂದ

ಆ ರಾತ್ರಿಯೆಲ್ಲವನ್ನೂ ಕುಮುದಚಂದ್ರನು ಆನಂದದಿಂದ ಕಳೆದ ನಾದರೂ ಆಗಾಗ ಕುತೂಹಲಾವಿಷ್ಟನಾಗಿ ಬಾಗಿಲ ಕಡೆಗೆ ನೋಡುತ್ತಿದ್ದನು. ಪುಷ್ಪಲತೆಯ ಧ್ವನಿಯು ತನ್ನನ್ನು ಕರೆದಂತೆ ಕ್ಷಣಕ್ಷಣಕ್ಕೂ ಅವನಿಗೆ

ಭಾಸವಾಗುತ್ತಿದ್ದಿತು. ಹಾಗೆ ಕೇಳಿಬಂದಂತಾದಾಗಲೆಲ್ಲಾ ಅವನು ತಟ್ಟನೆದ್ದು ಬಾಗಿಲ ಬಳಿಗೆ ಹೋಗಿ ಸಣ್ಣಕಿಟಕಿಯಲ್ಲಿ ನೋಡುತ್ತಿದ್ದನು. ಆದರೆ ಅದರ ಹಿಂದಾರೂ ಇರುತ್ತಿರಲಿಲ್ಲ.

ಪುಷ್ಪಲತೆಯೂ ಕಾಯುತ್ತ ಕುಳಿತಿರಬಹುದೆಂದು ಅವನು ಯೋಚಿಸಿದನು ಆದರೆ ಅವಳೆಂತಹ ಭಾಗ್ಯಶಾಲಿ! ಅವಳು ಟ್ಯೂಲಿಪ್‌ಸಸಿಯನ್ನು ನೋಡುತ್ತ ಕುಳಿತುಕೊಳ್ಳುವಳು. ಅವಳ ಮುಂದೆ ಆ ಉತ್ತಮ ಪುಷ್ಪವಿರುವುದು! ಆಶ್ಚರ್ಯಗಳಲ್ಲಿ ಆಶ್ಚರ್ಯವನ್ನುಂಟುಮಾಡುವ ವಸ್ತುವಿರುವುದು! ಅದು ಇರುವುದೆಂದೇ ಯಾರಿಗೂ ತಿಳಿಯದು ಅಲ್ಲದೆ ಅದನ್ನು ಬೆಳೆಯುವುದೇ ಅಸಾಧ್ಯವೆಂದೂ ಅದುವರೆಗೆ ಎಲ್ಲರ ಅಭಿಪ್ರಾಯವಾಗಿತ್ತು.

ಕರಿಯಪುಷ್ಪವು ಕಂಡುಹಿಡಿಯಲ್ಪಟ್ಟಿರುವುದೆಂದು ತಿಳಿದೊಡನೆಯೇ ಪ್ರಪಂಚವು ಏನು ಹೇಳುವುದು? ಅದು ಪ್ರಪಂಚದಲ್ಲಿದೆಯೆಂದೂ ಅದನ್ನು ಕುಮುದಚಂದ್ರನು ಕಂಡುಹಿಡಿದನೆಂದೂ ತಿಳಿದರೆ ಜನರೇನು ಹೇಳುವರು?

ಆ ಸಮಯದಲ್ಲಿ ಹೂವನ್ನು ಕೊಟ್ಟರೆ ಸ್ವಾತಂತ್ರ್ಯವನ್ನು ಕೊಡುವೆನೆಂದಾರಾದರೂ ಕುಮುದನಿಗೆ ಹೇಳಿದ್ದರೆ ಅವನು ಆ ಮಾತನ್ನು ನಿರಾಕರಿಸಿಬಿಡುತ್ತಿದ್ದನು!

ಪ್ರಾತಃಕಾಲವಾಯಿತು. ಯಾವ ಸಮಾಚಾರವೂ ಇರಲಿಲ್ಲ

ಪುಷ್ಪವು ಇನ್ನೂ ಚೆನ್ನಾಗಿ ಅರಳಿರಲಿಲ್ಲ

ರಾತ್ರಿಯಂತೆಯೇ ಹಗಲೂ ಕಳೆಯಿತು. ರಾತ್ರಿಯಾಯಿತು. ಅದರೊಡನೆ ಹಕ್ಕಿಯಂತೆ ಹಾರುತ್ತ ಪುಷ್ಪಲತೆಯು ಬಂದಳು. ಕುಮುದನು ಆಸಕ್ತಿಯಿಂದ, ಸಮಾಚಾರವೇನು ಎಂದನು

"ಎಲ್ಲವೂ ಸರಿಯಾಗಿದೆ. ನಿಸ್ಸಂದೇಹವಾಗಿ ಈ ರಾತ್ರಿ ಪುಷ್ಪವು ಚೆನ್ನಾಗಿ ಅರಳುವುದು".

"ಪುಷ್ಪವು ಕಪ್ಪಾಗಿರುವುದೆ?"

"ಮಸಿಯಂತೆ ಕಪ್ಪಗಿರುವುದು"

"ಬೇರೆ ಬಣ್ಣದ ಸಂಪರ್ಕವೇ ಇಲ್ಲದಂತೆ ಇರುವುದೆ?"

"ಅಹುದು"

"ದೇವರು ಎಂತಹ ದಯಾಮಯನು ಪುಷ್ಪಾ! ರಾತ್ರಿಯಲ್ಲಿ ನನ್ನ ಸ್ವಪ್ನದಲ್ಲಿ—ಮೊದಲು ನೀನು ಕಂಡುಬಂದೆ—(ಪುಷ್ಪಲತೆಯು ಸಂದೇಹ ಸೂಚಕವಾಗಿ ತಲೆಯನ್ನಲ್ಲಾಡಿಸಿದಳು)—ಬಳಿಕ ನಾವೇನು ಮಾಡ ಬೇಕೆನ್ನುವುದನ್ನು ಯೋಚಿಸಿದಂತೆ ಕಂಡೆನು".

"ಸರಿ"

"ಸರಿಯಷ್ಟೆ ನಾನು ನಿರ್ಧರಿಸಿರುವುದನ್ನು ಹೇಳುತ್ತೇನೆ ಕೇಳು ಟ್ಯೂಲಿಪವು ಪುಷ್ಪವನ್ನು ಬಿಡುತ್ತಲೇ ಅದು ನಿಜವಾಗಿ ಮಸಿಯಂತೆ ಕಪ್ಪಾಗಿರುವುದೆಂದು ತಿಳಿದುಕೊಳ್ಳಬೇಕು ಬಳಿಕ ನೀನೊಬ್ಬ ದೂತನನ್ನು ಕಂಡುಹಿಡಿಯಬೇಕು"

"ಅಷ್ಟೇ ತಾನೆ. ದೂತನೊಬ್ಬನನ್ನಾಗಲೇ ಸಿದ್ಧವಾಗಿಟ್ಟುಕೊಂಡಿ ದ್ದೇನೆ"

"ಅವನನ್ನು ನಂಬಬಹುದೆ?"

"ನಂಬಬಹುದು ನನಗೆ ಧೈರ್ಯವಿದೆ ಅವನು ನನ್ನನ್ನು ಪ್ರೀತಿಸುವವರಲ್ಲೊಬ್ಬನು"

"ನಿರಂಜನನಲ್ಲವಷ್ಟೆ?"

"ಅಲ್ಲ, ಘುಮ್ಮ್ರನಿರಿ ಅವನು ಮಣಿಪುರದ ದೋಣಿಗಾರರಲ್ಲೊಬ್ಬನು. ಚಾಲೂಕಾದ ಯುವಕ—ಸುಮಾರು ಇಪ್ಪತ್ತೈದು ವರ್ಷಗಳವನು"

"ದೇವರೇ ಗತಿ!"

ಪುಷ್ಪಲತೆಯು ನಗುತ್ತೆ, "ಸುಮ್ಮನಿರಿ ಇವನಿಗೆ ಹೆಚ್ಚು ವಯ ಸ್ಸಾಗಿಲ್ಲ. ತಾವು ನಿಯಮಿಸಿರುವುದು ಇಪ್ಪತ್ತಾರು ಇಪ್ಪತ್ತೆಂಟು ವರ್ಷಗಳ ಯುವಕನನ್ನು ಹುಡುಕಬೇಕೆಂದು" ಎಂದಳು

"ಹಾಗಾದರೆ ಈ ಯುವಕನನ್ನು ನಂಬಬಹುದೆನ್ನುವೆಯಾ?"

"ನನ್ನನ್ನು ನಂಬಿದಂತೆಯೇ ಅವನನ್ನೂ ನಂಬಬಹುದು ನಾನು ಆಜ್ಞೆಮಾಡಿದರೆ ಸಾಗರಕ್ಕೆ ಬೇಕಾದರೂ ಹಾರಿಬಿಡುತ್ತಾನೆ"

"ಸರಿ, ಪುಷ್ಪಾ! ಹತ್ತುಗಂಟೆಗಳಲ್ಲಿ ಈ ಹುಡುಗನು ಕಲ್ಯಾಣನಗರಿ ಯನ್ನು ತಲಪುವನು ನನಗೆ ಕಾಗದವನ್ನೂ ಸೀಸದ ಕಡ್ಡಿಯನ್ನೂ ಕೊಡು—ಇಲ್ಲವಾದರೆ ಮಸಿಯನ್ನೂ ಕಾಗದವನ್ನೂ ಕೊಡು, ಅವುಗಳಲ್ಲಿ

ಬರೆಯುವುದೇ ಮೇಲು. ಇಲ್ಲವಾದರೆ ನೀನೇ ಬರೆ ಪುಷ್ಪಾ! ನಾನು ಬಡ ಬಂದಿಯಾಗಿದ್ದೇನೆ. ನಾನು ಬರೆದರೆ ಜನರು ಪಿತೂರಿಯೇನೋ ನಡೆಯುತ್ತಿದೆಯೆಂದು ಸಂದೇಹಪಡುವರು. ನಿನ್ನ ತಂದೆಯೂ ಹಾಗೆಯೇ ಸಂಶಯಪಡುವನು. ನೀನು ಟ್ಯೂಲಿಪ್‌ಸಂಘದ ಅಧ್ಯಕ್ಷನಿಗೆ ಬರೆ. ಅವನು ಬರುವನೆಂದು ನನಗೆ ಖಂಡಿತವಾಗಿ ಗೊತ್ತು."

"ಅವನು ನಿಧಾನಮಾಡಿದರೆ?"

"ಅವನು ನಿಧಾನಮಾಡುವನೆಂದೇ ಭಾವಿಸೋಣ. ಒಂದು ದಿನ–ಅಥವಾ ಎರಡು ದಿನಗಳವರೆಗೆ ಅವನು ತಡಮಾಡಿಬರಬಹುದು. ಆದರೆ ಅವನು ನಿಧಾನಿಸುವನೆನ್ನುವುದು ಶುದ್ಧ ಅಸಂಭವ ಪುಷ್ಪಾ! ಅವನಂತಹ ಟ್ಯೂಲಿಪ್‌ಭಕ್ತನು ಒಂದುಗಂಟೆಯಾಗಲಿ, ಒಂದುನಿಮಿಷವಾಗಲಿ, ಕಡೆಗೆ ಒಂದು ಕ್ಷಣವಾಗಲಿ ನಿಧಾನಿಸುವುದಿಲ್ಲ. ಪ್ರಪಂಚದ ಎಂಟನೆಯ ಆಶ್ಚರ್ಯ ವಸ್ತುವನ್ನು ನೋಡುವ ಸಲುವಾಗಿ ತತ್‌ಕ್ಷಣವೇ ಹೊರಟುಬಿಡುವನು. ಆತನು ಒಂದೆರಡು ದಿನಗಳು ನಿಧಾನಿಸಿದರೂ ಚಿಂತೆಯಿಲ್ಲ ಆ ವೇಳೆಗೆ ಪುಷ್ಪವು ಪೂರ್ಣವಾಗಿ ವಿಕಸಿತವಾಗುವುದು ಆತನು ಒಂದು ಬಾರಿ ಪುಷ್ಪವನ್ನು ನೋಡಿ, ಅದರ ವಿಚಾರವನ್ನು ಸ್ವಂತವಾಗಿ ಬರದುಕೊಂಡನೆಂದರೆ ಯೋಚಿಸಬೇಕಾದುದಿಲ್ಲ. ಆತನು ಬರೆದು ಸಹಿಮಾಡಿಕೊಟ್ಟ ಪತ್ರವನ್ನು ನೀನು ತೆಗೆದುಕೊಂಡು ಆತನಿಗೆ ಪುಷ್ಪವನ್ನು ಕೊಟ್ಟುಬಿಡಬಹುದು ಆಹಾ! ಅವನ್ನು ನಾವೇ ತೆಗೆದುಕೊಂಡು ಹೋಗುವಂತೆ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಅಂತಹ ಸುಯೋಗವಿದ್ದಿದ್ದರೆ ನಿನಗದನ್ನು ಕೊಡುವಾಗ ಮಾತ್ರ ಅದು ನನ್ನ ಕೈಬಿಟ್ಟಿರುತ್ತಿತ್ತು. ಪುಷ್ಪಾ! ಆ ವಿಚಾರವು ಸ್ವಪ್ನಮಯವಾದುದು. ಆ ವಿಷಯವನ್ನು ನಾವು ಯೋಚಿಸುವಂತಿಲ್ಲ. ಇರಲಿ-ಅಪರಿಚಿತರು ಅದು ಪೂರ್ತಿಯಾಗಿ ಬೆಳೆಯುವುದನ್ನು ನೋಡುವರು—ಅದಿರಲಿ ಪುಷ್ಪಾ! ಅಧ್ಯಕ್ಷನು ಅದನ್ನು ನೋಡುವುದಕ್ಕೆ ಮೊದಲು ಅದನ್ನಾರೂ ನೋಡದಂತೆ ಜಾಗರೂಕಳಾಗಿರು. ಕರಿಯಟ್ಯೂಲಿಪನ್ನಾರಾದರೂ ನೋಡಿಬಿಟ್ಟರೆ ಅವನ್ನು ಕಳವುಮಾಡುವರು."

"ಆಹಾ!"

"ಆ ನಿನ್ನ ನಿರಂಜನನಿಂದಲೇ ಅಪಾಯುವುಂಟೆಂದು ನೀನೇ ಹೇಳ ಲಿಲ್ಲವೆ?"

"ನಾನು ಜಾಗರೂಕಳಾಗಿರುತ್ತೇನೆ. ಯೋಚಿಸಬೇಡಿ"

"ನೀನು ಇಲ್ಲಿರುವಾಗ ಅದು ಅರಳಿದರೇನುಮಾಡುವೆ?"

"ಆ ಹುಚ್ಚುಪುಷ್ಪವು ಅಂತಹ ಕುತ್ಸಿತಕಾರ್ಯವನ್ನು ಮಾಡಿದರೂ ಮಾಡಬಹುದು"

"ನೀನು ತಿರುಗುವವೇಳೆಗೆ ಅದು ಅರಳಿದ್ದರೇನುಮಾಡುವೆ?"

"ಏನು ಮಾಡಲಿ ಹೇಳೋಣಾಗಲಿ"

"ಪುಷ್ಪಾ! ಅದಾವಾಗಲೇ ಅರಳಲಿ. ಒಂದು ಕ್ಷಣವೂ ನಿಧಾನಿಸದೆ ಅಧ್ಯಕ್ಷನಿಗೆ ತಿಳಿಸಿಬಿಡಬೇಕು"

"ಒಂದು ಕ್ಷಣವೂ ನಿಧಾನಿಸದೆ ನಿಮಗೂ ತಿಳಿಸಿಬಿಡಬೇಕು. ಅಲ್ಲವೇ? ಸರಿ, ಅರ್ಥವಾಯಿತು"

ಪುಷ್ಪಲತೆಯು ಹಾಗೆ ಹೇಳುತ್ತೆ ಒಂದು ಬಾರಿ ನಿಟ್ಟುಸಿರುಬಿಟ್ಟಳು. ಯಾವುದನ್ನು ಸರಿಪಡಿಸುವುದು ಅಸಾಧ್ಯವೋ ಅದನ್ನು ಅನುಸರಿಸುತ್ತೆ ಅನುಭವಿಸುವುದೇ ಮೇಲೆಂದು ಅವಳು ಅರ್ಥಮಾಡಿಕೊಳ್ಳತೊಡಗಿದಳು. ಅವಳು ಪುನಃ ಹೇಳತೊಡಗಿದಳು—"ಕುಮುದಚಂದ್ರಬಾಬುಗಳೆ! ನಿಮ್ಮ ಟ್ಯೂಲಿಪಿನ ಬಳಿಗೆ ಹೋಗುತ್ತೇನೆ ಅದರ ಪುಷ್ಪವು ಅರಳುತ್ತಲೇ ತಮಗೆ ತಿಳಿಸುತ್ತೇನೆ. ಬಳಿಕ ಮಾತನು ಹೊರಡುತ್ತಾನೆ."

"ಪುಷ್ಪಾ! ಪುಷ್ಪಾ! ನಿನ್ನನ್ನು ಹೋಲಿಸಲು ಪ್ರಪಂಚದಲ್ಲಾವ ವಸ್ತುವೂ ಇಲ್ಲವಲ್ಲಾ!"

"ನನ್ನನ್ನು ಕರಿಯಟ್ಯೂಲಿಪಕ್ಕೆ ಹೋಲಿಸಿಬಿಡಿ. ಆಗ ನನ್ನನ್ನು ಬಹಳ ಸಮಾಧಾನಪಡಿಸಿದಂತಾಗುವುದು. ಸರಿ, ಬರುತ್ತೇನೆ ಕುಮುದಚಂದ್ರ ಬಾಬುಗಳೆ!"

"ಬರುತ್ತೇನೆ, ಪರಮಮಿತ್ರರೆ—ಎಂದು ಹೇಳು"

ಪುಷ್ಪಲತೆಯು ಸ್ವಲ್ಪ ಸಮಾಧಾನಗೊಂಡು, "ಬರುತ್ತೇನೆ, ಪರಮ ಮಿತ್ರರೆ" ಎಂದಳು

"ಪ್ರಾಣಾಧಿಕರೆಂದು ಹೇಳು"

" ಪರಮಮಿತ್ರರೆಂದು ಹೇಳುತ್ತೇನೆ."

" ಪ್ರಾಣಾಧಿಕರೆಂದು ಹೇಳು ಪುಷ್ಪಾ! "

" ಸರಿ, ಪ್ರಾಣಾಧಿಕ "

ಪುಷ್ಪಲತೆಯು ಸಮಾಧಾನಚಿತ್ತಳಾಗಿ ಬಹಳ ಸಂತೋಷದಿಂದ ಹೊರಟುಹೋದಳು. ಅವಳ ಹೃದಯವು ಆನಂದಾತಿರೇಕದಿಂದ ಡವಡವನೆ ಬಡಿದುಕೊಳ್ಳುತ್ತಿದ್ದಿತು "

ಕುಮುದಚಂದ್ರನು ಆ ರಾತ್ರಿ ಕಿಟಕಿಯ ಬಳಿ ನಿಂತು ನಕ್ಷತ್ರಗಳ ಕಡೆಗೆ ನೋಡುತ್ತ ಪ್ರತಿಯೊಂದು ಶಬ್ದವನ್ನೂ ಕಿವಿಗೊಟ್ಟು ಕೇಳುತ್ತಿದ್ದನು ಅವನ ಹೃದಯವು ಆನಂದದಿಂದಲೂ ಸಂತೋಷದಿಂದಲೂ ತುಂಬಿದ್ದುದು. ಅವನು ಆಗಾಗ ಕಾರಾಗೃಹದ ಬಾಗಿಲ ಕಡೆಗೆ ನೋಡುತ್ತ ತನ್ನಲ್ಲಿಯೇ ಮಾತನಾಡಿಕೊಳ್ಳುತ್ತಿದ್ದನು—" ಪುಷ್ಪಲತೆಯು ತನ್ನ ಕೊಟಡಿಯಲ್ಲಿ ಕುಳಿತು ನನ್ನಂತೆಯೇ ಕಾಯುತ್ತಿರುವಳು ಅವಳ ಬಳಿಯೇ ಉತ್ತಮ ಪುಷ್ಪವಿರುವುದು ಅದು ಅರಳುತ್ತಿರುವುದು. ಬಹುಶಃ ಈಗ ಅವಳ ಕೈಗಳು ಹೂವನ್ನು ಮುಟ್ಟುತ್ತಿರುವುವು ಪುಷ್ಪಾ! ಅದನ್ನು ಮೆಲ್ಲನೆ ಮುಟ್ಟಬೇಕು ತಿಳಿಯಿತೆ? ಅದನ್ನು ಚುಂಬಿಸುತ್ತಿರುವೆಯಾ? ಹುಷಾರಾಗಿರು ಪುಷ್ಪಾ! ನಿನ್ನ ಅಧರಗಳು ಬೆಂಕಿಯಿಂದ ಉರಿಯುತ್ತಿರುವುವು ಪ್ರಪಂಚದಲ್ಲಿ ನನಗೆ ಪ್ರೀತಿಪಾತ್ರವಾಗಿರುವ ಎರಡು ವಸ್ತುಗಳೂ ಈ ಸಮಯದಲ್ಲಿ ಪರಸ್ಪರ ಚುಂಬನದಲ್ಲಿ ನಿರತವಾಗಿರುವುವು "

ಆ ಸಮಯದಲ್ಲಿ ಆಕಾಶದಿಂದ ನಕ್ಷತ್ರವೊಂದು ಕಳಚಿಬಿದ್ದಿತು. ಅದನ್ನು ನೋಡಿ ಕುಮುದನು ಚಕಿತನಾಗಿ, " ಆಹಾ! ಸ್ವರ್ಗದಿಂದ ಆತ್ಮವೊಂದು ನನ್ನ ಪುಷ್ಪದ ಕಡೆಗೆ ಬರುತ್ತಿದೆ" ಎಂದನು. ಆ ಸಮಯಕ್ಕೆ ಸರಿಯಾಗಿ ಕಾರಾಗೃಹದ ಬಾಗಿಲ ಬಳಿ, ಒಂದು ಚಿರಪರಿಚಿತವಾಣಿಯು ಹೇಳತೊಡಗಿದುದು-" ಕುಮುದಚಂದ್ರಬಾಬುಗಳೆ! ನನ್ನ ಮಿತ್ರರೆ! ನನ್ನ ಪರಮ ಮಿತ್ರರೆ!—ಪ್ರಾಣಾಧಿಕರೆ-ಬನ್ನಿ ಬನ್ನಿ ಬೇಗ ಬನ್ನಿ "

ಕುಮುದನು ಒಂದೇ ಬಾರಿಗೆ ಹಾರಿ ಬಾಗಿಲ ಬಳಿಗೆ ಬಂದನು. ಪುಷ್ಪಲತೆಯು ಅಲ್ಲಿ ನಿಂತಿದ್ದಳು. ಅವಳು ಕುಮುದನ ಕೈಯನ್ನು ಚುಂಬಿಸಿ, "ನೋಡಿ. ಹೂವು ಅರಳಿದೆ. ಕಪ್ಪಗಿದೆ. ಇಲ್ಲಿಯೇ ಇದೆ" ಎಂದಳು.

"ಇಲ್ಲಿಯೇ ಇದೆ ಎಂದರೇನು?"

"ನಿಜ, ನಿಜ. ಬಹಳ ಸಂತೋಷವನ್ನುಂಟುಮಾಡಲು ಸ್ವಲ್ಪ ತೊಂದರೆಯನ್ನು ತೆಗೆದುಕೊಳ್ಳಲೇ ಬೇಕು. ಇಲ್ಲಿಯೇ ಇದೆ ತೆಗೆದುಕೊಳ್ಳಿ."

ಹಾಗೆ ಹೇಳುತ್ತ ಅವಳು ಒಂದು ಕೈಯಲ್ಲಿ ದೀಪವೊಂದನ್ನು ಮೇಲಕ್ಕೆ ಹಿಡಿದು ಮತ್ತೊಂದರಲ್ಲಿ ಕರಿಯ ಟ್ಯೂಲಿಪ್ ಪುಷ್ಪವನ್ನು ಹಿಡಿದು ತೋರಿಸಿದಳು.

ಕುಮುದನು ಕೂಗಿಕೊಂಡು ಮೂರ್ಛಿತನಾಗುವುದರಲ್ಲಿದ್ದನು. ಅವನು ಸ್ವಲ್ಪ ಚೇತರಿಸಿಕೊಂಡು, "ಓಹೋ! ದೇವರು ಎಂತಹ ದಯಾಮಯನು! ನಾನು ನಿರಪರಾಧಿಯಾಗಿದ್ದರೂ ಬಂದಿಯಾಗಿರುವುದನ್ನು ತಿಳಿದು ಬಾಗಿಲ ಕಿಟಕಿಯ ಬಳಿಯೇ ಇಂತಹ ಉತ್ತಮ ಪುಷ್ಪಗಳೆರಡು ಬೆಳೆಯಲು ಅನುಮತಿಕೊಟ್ಟಿರುವನು!" ಎಂದನು. ಟ್ಯೂಲಿಪ್ ಪುಷ್ಪವು ಬಹಳ ಸುಂದರವಾಗಿಯೂ ಮನೋಹರವಾಗಿಯೂ ಇದ್ದಿತು. ಅದರ ವೃಂತವು ಹದಿನೆಂಟು ಅಂಗುಲಗಳಷ್ಟು ಎತ್ತರವಾಗಿದ್ದಿತು. ಅದು ನಾಲ್ಕು ಹಸುರೆಲೆಗಳ ಮಧ್ಯೆ ಬೆಳೆದಿದ್ದಿತು. ಪುಷ್ಪವು ಬಹಳ ಕಪ್ಪಾಗಿದ್ದು ಫಳಫಳನೆ ಹೊಳೆಯುತ್ತಿದ್ದಿತು.

ಕುಮುದನು ದೀರ್ಘವಾಗಿ ಉಸಿರೆಳೆದುಕೊಳ್ಳುತ್ತ, "ಪುಷ್ಪಾ ಪುಷ್ಪಾ! ಒಂದು ಕ್ಷಣವೂ ನಿಧಾನಮಾಡದೆ ಪತ್ರವನ್ನು ಬರೆಯಬೇಕು" ಎಂದನು.

"ಆಗಲೇ ಬರೆದಿದ್ದೇನೆ".

"ನಿಜವೇ?"

"ಪುಷ್ಪವು ಅರಳುತ್ತಿದ್ದಾಗ ಅದನ್ನು ನಾನೇ ಬರೆದೆನು. ಏಕೆಂದರೆ ಒಂದು ಕ್ಷಣಮಾತ್ರವೂ ನಿಧಾನಿಸುವುದು ನನಗಿಷ್ಟವಿರಲಿಲ್ಲ. ಪತ್ರವಿಲ್ಲಿಯೇ ಇದೆ. ಸರಿಯಾಗಿದೆಯೆ ಇಲ್ಲವೆ ಹೇಳಿ".

ಕುಮುದನು ಕಾಗದವನ್ನು ತೆಗೆದುಕೊಂಡು ಓದತೊಡಗಿದನು—

"ಅಧ್ಯಕ್ಷರವರೆ!

ಕರಿಯ ಟ್ಯೂಲಿಪ್ ಪುಷ್ಪವು ಅರಳುವುದರಲ್ಲಿದೆ ಸುಮಾರು ಹತ್ತು ನಿಮಿಷಗಳಲ್ಲಿ ಅದು ಅರಳಬಹುದು. ಅದು ಅರಳಿದೊಡನೆಯೇ ಒಬ್ಬ ದೂತನನ್ನು ನಿಮ್ಮಲ್ಲಿಗೆ ಕಳುಹುತ್ತೇನೆ. ತಾವು ಸ್ವಂತವಾಗಿ ಮಣಿಪುರದ

ಕಾರಾಗೃಹದ ಬಳಗೆ ಬಂದು ಅದನ್ನು ತೆಗೆದುಕೊಳ್ಳಬೇಕೆಂದು ಬೇಡಿಕೊಳ್ಳುತ್ತೇನೆ. ನಾನು ಜೈಲರನಾದ ಕಾಳೀಚರಣಬಾಬುವಿನ ಮಗಳು. ಇತರ ಬಂದಿಗಳಂತೆಯೇ ನಾನು ಸ್ವಾತಂತ್ರ್ಯಹೀನಳಾಗಿದ್ದೇನೆ. ಆದುದರಿಂದ ಈ ಅದ್ಭುತಪುಷ್ಪವನ್ನು ನಾನೇ ತರಲಾರದವಳಾಗಿದ್ದೇನೆ. ಈ ಕಾರಣದಿಂದ ತಾವೇ ಸ್ವತಂತ್ರವಾಗಿ ಬಂದು ಈ ಪುಷ್ಪವನ್ನು ತೆಗೆದುಕೊಂಡು ಹೋಗಬೇಕೆಂದು ಬೇಡಿಕೊಂಡಿದ್ದೇನೆ.

ಈ ಪುಷ್ಪವನ್ನು ಕುಮುದಪುಷ್ಪಲತೆಯರ ಹೂವೆಂದು ಕರೆಯಬೇಕೆಂದು ಕೋರುತ್ತೇನೆ.

ಹೂವು ಅರಳಿದೆ. ಅಚ್ಚ ಕಪ್ಪುಬಣ್ಣದಿಂದಿದೆ ಬನ್ನಿ ಅಧ್ಯಕ್ಷರೆ ಬನ್ನಿ.

ಇತಿ, ತಮ್ಮ ವಿಧೇಯಳು,

ಪುಷ್ಪಲತೆ"

ಕುಮುದಚಂದ್ರನು ಓದಿ ಸಂತೋಷದಿಂದ ಹೇಳತೊಡಗಿದನು—"ಸರಿ ಪುಷ್ಪಾ! ಬಹಳ ಚೆನ್ನಾಗಿ ಬರೆದಿರುವೆ. ಅಷ್ಟು ಚೆನ್ನಾಗಿ ಸರಳವಾಗಿ ನನಗೆ ಬರೆಯಲು ಬರುತ್ತಿರಲಿಲ್ಲ, ಟ್ಯೂಲಿಪ್ ಸಮಿತಿಯವರಿಗೆ ಬೇಕಾದ ಸಮಾಚಾರವೆಲ್ಲವನ್ನೂ ಹೇಳಿಕಳುಹಿಸು. ಆಗ ಅವರಿಗೆ ಎಲ್ಲವೂ ವಿಶದವಾಗುವುದು—ಎಂತಹ ಆಸಕ್ತಿಯಿಂದ ಜಾಗರೂಕತೆಯಿಂದ ಅದನ್ನು ಬೆಳೆಸಿರುವೆವೆಂಬುದೂ ಹೇಗೆ ನಿದ್ದೆಯಿಲ್ಲದೆ ಅಧಿಕವೆಚ್ಚದಿಂದ ಬೆಳೆಸಿರುವೆವೆಂಬುದೂ ತಿಳಿಯುವುದು. ಈಗ ಮಾತ್ರ ಒಂದು ನಿಮಿಷಮಾತ್ರವೂ ನಿಧಾನಿಸದೆ ಮೊದಲು ದೂತನನ್ನು ಕಳುಹಿಸು".

"ಅಧ್ಯಕ್ಷರ ಹೆಸರೇನು?"

"ಕಾಗದವನ್ನು ಕೊಡು, ವಿಳಾಸವನ್ನು ಬರೆದುಕೊಡುತ್ತೇನೆ. ಆತನು ಎಲ್ಲರಿಗೂ ತಿಳಿದವನು. ಆತನ ಹೆಸರು ರವಿವರ್ಮನೆಂದು. ಆತನು ಕಲ್ಯಾಣನಗರಿಯ ಪೌರಸಭಾಧ್ಯಕ್ಷನಾಗಿಯೂ ಇರುವನು. ಅದನ್ನಿಲ್ಲಿ ಕೊಡು ಪುಷ್ಪಾ! ಇಲ್ಲಿ ಕೊಡು"

ನಡುಗುವ ಕೈಗಳಿಂದ ಕುಮುದನು ವಿಳಾಸವನ್ನು ಬರೆದನು—"ಕಲ್ಯಾಣನಗರಿಯ ಪೌರಸಭಾಧ್ಯಕ್ಷರೂ, ಟ್ಯೂಲಿಪ್ ಸಂಘದ ಅಧ್ಯಕ್ಷರೂ ಆದ ರವಿವರ್ಮ ಮಹಾಶಯರಿಗೆ"

ಬಳಿಕ ಪುಷ್ಪಳನ್ನು ನೋಡಿ, "ಈಗ ಹೋಗು ಪುಷ್ಪಾ! ಹೋಗು. ಇದುವರೆಗೆ ಹೇಗೆ ದೇವಾಧಿದೇವನು ನಮ್ಮನ್ನು ಕಾಪಾಡಿಕೊಂಡು ಬಂದನೋ ಅದೇ ರೀತಿಯಲ್ಲಿ ಇನ್ನು ಮುಂದೆಯೂ ಕಾಪಾಡಿಕೊಂಡು ಬರುವಂತೆ ಪ್ರಾರ್ಥಿಸುತ್ತಿರೋಣ" ಎಂದನು.

## ತ್ರಯೋವಿಂಶತಿ ಪರಿಚ್ಛೇದ

### ಪ್ರತಿಸ್ಪರ್ಧಿ

ಆ ಸಮಯದಲ್ಲಿ ದೇವಾದಿವೇವನ ದಯೆಯು ಅವರಿಗೆ ಬಹಳವಾಗಿ ಬೇಕಾಗಿದ್ದಿತು. ಅವರಿಬ್ಬರೂ ತಮ್ಮ ಕಾರ್ಯವು ಸಫಲವಾಯಿತೆಂದು ಯಾವ ವೇಳೆಯಲ್ಲಿ ಯೋಚಿಸುತ್ತಿದ್ದರೋ ಅದೇ ವೇಳೆಯಲ್ಲಿಯೇ ಅವರಿಗೆ ಸರ್ವನಾಶವಾಗುವ ಪರಿಸ್ಥಿತಿಯೊದಗಿದ್ದಿತು.

ಈ ವೇಳೆಗೆ ನಿರಂಜನನೇ ನಮ್ಮ ಮಿತ್ರ-ಅಥವಾ ಶತ್ರು-ವಿಷಕಂಠ ನೆಂಬುದನ್ನು ನಮ್ಮ ವಾಚಕರು ಕಂಡುಹಿಡಿದಿರಬಹುದು. ಅವನು ಸುರನಗರಿಯ ಕಾರಾಗೃಹದಿಂದ ಮಣಿಪುರದ ಕಾರಾಗಾರದವರೆಗೂ ಕುಮುದನನ್ನು ಹಿಂಬಾಲಿಸಿದ್ದನು. ತನ್ನ ಪ್ರೀತಿಪಾತ್ರವಾದ ಕೃಷ್ಣಪುಷ್ಪ ವನ್ನೂ ತನ್ನ ದ್ವೇಷಪಾತ್ರನಾದ ಕುಮುದನನ್ನೂ ಬೆನ್ನಟ್ಟಿಬಂದಿದ್ದನು. ಟ್ಯೂಲಿಪ್‌ಸಸಿಗಳಿದ್ದುದನ್ನೂ ಬಂದಿಯು ಅದನ್ನು ಬೆಳೆಸಲು ಪಡುತ್ತಿದ್ದ ಪ್ರಯತ್ನಗಳನ್ನೂ ಅವನು ತನ್ನ ಅಸೂಯೆಯ ಪ್ರಭಾವದಿಂದ ಕಂಡುಹಿಡಿ ದಿದ್ದನು. ಕಾಳೀಚರಣನ ಬಳಿ ಅವನು ವಿಷಕಂಠನೆಂಬ ಹೆಸರಿನಿಂದ ಪ್ರಸಿದ್ಧ ನಾಗಿದ್ದಾಗ ಜಯ ಹೊಂದಿದುದಕ್ಕಿಂತ ನಿರಂಜನನೆಂಬ ನಾಮಧೇಯ ದಿಂದ ಇದ್ದಾಗ ಹೆಚ್ಚು ಜಯವನ್ನು ಹೊಂದಿದ್ದನು. ಅವನು ಜೈಲರನಿಗೆ ಆಶೆ ತೋರಿಸಲೋಸುಗ ತಾನೊಬ್ಬ ಧನಿಕನೆಂದೂ ಪುಷ್ಪಲತೆಯನ್ನು ವಿವಾಹವಾಗುವ ಅಭಿಪ್ರಾಯವುಳ್ಳವನೆಂದೂ ಹೇಳಿ ಕಾಳೀಚರಣನ ಸಂದೇಹಗಳೆಲ್ಲವನ್ನೂ ನಿವೃತ್ತಿಮಾಡಿದ್ದನು.

ತನ್ನ ಮಗಳು ಧನಿಕನೊಬ್ಬನನ್ನು ವಿವಾಹವಾಗುವಳೆಂದು ಕಾಳೀ ಚರಣನು ಹಿಗ್ಗುತ್ತಿದ್ದನು. ವಿಷಕಂಠನು ಅದೇ ಸಮಯದಲ್ಲಿ ಜೈಲರನ ಜವಾಬ್ದಾರಿಯನ್ನು ದ್ವಿಗುಣಮಾಡಿ ಹೇಳುತ್ತ್ತೆ, ಕುಮುದಚಂದ್ರನು ಮಹಾ ಭೀಕರನೆಂದೂ, ಅತಿವಿದ್ಯಾವಂತರೆಲ್ಲರೂ ಸೈತಾನನ ಅನುಯಾಯಿ

ಗಳೆಂದೂ, ಈ ಬಂದಿಯು ರಾಜಾವಿನಯಸಿಂಹನ ಪರಮಶತ್ರುವೆಂದೂ ಬೋಧಿಸಿದನು.

ಮೊದಲು ಮೊದಲು ಪುಷ್ಪಲತೆಯು ಸ್ವಲ್ಪ ಮೋಸಹೋದಳು. ಪ್ರೇಮದ ವಿಷಯವಾಗಿಯೂ ಮದುವೆಯ ವಿಷಯವಾಗಿಯೂ ಮಾತ ನಾಡುತ್ತ ತನ್ನ ಅಂತರ್ಯದಲ್ಲಿದ್ದ ಭಾವವನ್ನು ಪ್ರಕಟಿಸಬಾರದೆಂದು ವಿಷಕಂಠನು ಪ್ರಯತ್ನಪಡುತ್ತಿದ್ದನು. ಹೀಗಾಗಿ ಪುಷ್ಪಲತೆಯು ಮೊದಲು ಮೊದಲು ವಿಷಕಂಠನ ಅಂತರ್ಯವನ್ನು ಅರಿಯಲಾರದೆ ಹೋದಳು. ಆದರೆ ಅವನು ಉದ್ಯಾನವನಕ್ಕೆ ಯಾವಾಗ ಅವಳನ್ನು ಹಿಂಬಾಲಿಸಿದನೋ ಆಗವಳಿಗೆ ಎಲ್ಲವೂ ತಿಳಿದುಹೋಯಿತು. ಅಂದಿನಿಂದ ಕುಮುದನೂ ಪುಷ್ಪಲತೆಯೂ ಜಾಗರೂಕರಾಗಿರತೊಡಗಿದರು

ಸಸಿಯನ್ನು ಕಾಳೀಚರಣನು ತುಳಿದು ಹಾಳುಮಾಡಿದುದನ್ನು ಕೇಳುತ್ತಲೇ ನಿರಂಜನನು ಅತೀವಕೋಪದಿಂದ ಹ್ಹಾರಾಡಿದನಷ್ಟೆ. ಅದನ್ನು ತಿಳಿದೊಡನೆಯೇ ಕುಮುದನೂ ಪುಷ್ಪಲತೆಯೂ ಸಂಶಯಗ್ರಸ್ತರಾದರು. ಮತ್ತೊಂದು ಸಸಿಯು ಇರುವುದೆಂದು ಖಚಿತವಾಗಿ ನಿರಂಜನನಿಗೆ ತಿಳಿದಿರ ಲಿಲ್ಲವಾಗಿ ಅವನು ಮತ್ತಷ್ಟು ಕೋಪಪ್ರಕಟಣೆಮಾಡಿದನು ಅಂದಿನಿಂದ ಅವನು ಪುಷ್ಪಲತೆಯನ್ನು ಹಿಂಬಾಲಿಸತೊಡಗಿದನು. ಅವನು ರಾತ್ರಿಯಲ್ಲಿ ಮಾತ್ರ ಬರಿಯ ಕಾಲಿನಲ್ಲಿ ಹಿಂಬಾಲಿಸುತ್ತಿದ್ದನಾಗಿ ಪುಷ್ಪಲತೆಯು ಮೊದಲು ಮೊದಲು ಏನನ್ನೂ ಅರಿಯಲಾಗಲಿಲ್ಲ ಒಂದು ಬಾರಿ ಮಾತ್ರ ಮೆಟ್ಲುಗಳ ಮೇಲೆ ಅದಾವುದೋ ಛಾಯೆಯಿದ್ದುದನ್ನವಳು ಕಂಡು ಹಿಡಿದಳು. ಆದರೆ ಆ ವೇಳೆಗೆ ಎರಡನೆಯ ಸಸಿಯಿರುವುದೆಂದು ಕುಮುದನೇ ಹೇಳಿದ್ದುದನ್ನು ವಿಷಕಂಠನು ಕೇಳಿಬಿಟ್ಟಿದ್ದನು

ಪುಷ್ಪಲತೆಯು ಉಪಾಯವನ್ನು ಹೂಡಿ ತನ್ನ ಅಂತರ್ಯವನ್ನು ಅರಿತುಕೊಂಡಳೆಂದು ತಿಳಿಯುತ್ತಲೇ ನಿರಂಜನನು ಹೆಚ್ಚು ಜಾಗರೂಕ ನಾಗಿರತೊಡಗಿದನು. ಇತರರನ್ನು ಕಾಯುತ್ತ ತಾನಾರಿಗೂ ಕಂಡು ಬರದಂತೆ ಇರಲು ಅವನು ಪ್ರಯತ್ನಪಡತೊಡಗಿದನು.

ಅಂತಹ ಸಮಯದಲ್ಲಿ ಪುಷ್ಪಲತೆಯೊಂದು ದಿನ ತನ್ನ ತಂದೆಯ ಬಳಿಯಿದ್ದ ಬಿಳಿಯ ಪುಷ್ಪಕುಂಡವೊಂದನ್ನು ತನ್ನ ಕೊಟಡಿಗೆ ತೆಗೆದು

ಕೊಂಡು ಹೋದಳು. ಅಂದಿನಿಂದ ಅವಳು ಆಗಾಗ ತನ್ನ ಸುಂದರ ಹಸ್ತಗಳನ್ನು ಸೀರಿನಲ್ಲಿ ತೊಳೆಯುತ್ತಿದ್ದಳು ಅವಳ ಕೈಗಳು ಮಣ್ಣಿನಿಂದ ಕೊಳಕಾಗುತ್ತಿದ್ದುದರಿಂದ ಅವಳು ಹಾಗೆ ಮಾಡುತ್ತಿದ್ದಳು. ಇದೆಲ್ಲವನ್ನೂ ವಿಷಕಂಠನು ನೋಡಿದನು ಅವನಲ್ಲಿ ಅನೇಕ ಸಂದೇಹಗಳು ಉತ್ಪನ್ನವಾದುವು

ಕಡೆಗೆ ವಿಷಕಂಠನು ಪುಷ್ಪಲತೆಯ ಕೊಟಡಿಗೆದುರಾಗಿದ್ದ ಮನೆಯೊಂದರಲ್ಲಿ ಮಹಡಿಯನ್ನು ಬಾಡಿಗೆಗೆ ತೆಗೆದುಕೊಂಡನು. ಅಲ್ಲಿ ಅವನಿದ್ದರೆ ಬರಿಯ ಕಣ್ಣಿನ ಸಹಾಯದಿಂದ ಯಾರೂ ಅವನನ್ನು ಗುರುತಿಸುವಂತಿರಲಿಲ್ಲ ಆದರೆ ಅವನು ಮಾತ್ರ ತನ್ನ ದೂರದರ್ಶಕಯಂತ್ರದ ಸಹಾಯದಿಂದ ಪುಷ್ಪಲತೆಯ ಕೊಟಡಿಯಲ್ಲಿ ನಡೆಯುವುದೆಲ್ಲವನ್ನೂ ನೋಡಬಹುದಾಗಿದ್ದಿತು. ಹಾಗವನು ಮಹಡಿಯ ಮೇಲಿನಿಂದ ಮೂರು ದಿನಗಳು ನೋಡುತ್ತಿದ್ದನು ಅಷ್ಟರಲ್ಲಿ ಅವನ ಸಂದೇಹಗಳೆಲ್ಲವೂ ನಿವೃತ್ತಿಯಾದುವು ಪ್ರಾತಃಕಾಲದಿಂದ ಸಾಯಂಕಾಲದವರೆಗೂ ಪುಷ್ಪಕುಂಡವು ಕಿಟಕಿಯಲ್ಲಿರುತ್ತಿದ್ದಿತು. ಕಟ್ಟನಲ್ಲಿರುವ ಪ್ರತಿಮೆಯಂತೆ ಕಿಟಕಿಯಲ್ಲಿ ಪುಷ್ಪಲತೆಯು ಕಂಡುಬರುತ್ತಿದ್ದಳು ಅವಳು ಅತಿಜಾಗರೂಕತೆಯಿಂದ ಆ ಪುಷ್ಪಕುಂಡವನ್ನು ಕಾಯುತ್ತಿದ್ದುದರಿಂದ ಅದರಲ್ಲಿದ್ದ ಪದಾರ್ಥವು ಅತ್ಯಮೂಲ್ಯವಾದುದೆಂದು ಅವನಿಗೆ ಅರ್ಥವಾಗಿಹೋಯಿತು ಈ ಪದಾರ್ಥವೇ ಎರಡನೆಯ ಸಸಿಯಾಗಿರಬೇಕೆಂದು ವಿಷಕಂಠನು ಸುಲಭವಾಗಿ ಊಹಿಸಿದನು. ಅಂದರೆ ಬಂದಿಯ ಎಲ್ಲ ಆಶೆಗಳಿಗೂ ಆಧಾರಭೂತವಾದ ಪದಾರ್ಥವು ಆ ಪುಷ್ಪಕುಂಡದಲ್ಲಿದ್ದಂತಾಯಿತು!

ರಾತ್ರಿಯಲ್ಲಿ ಬಹಳ ಚಳಿಯುಂಟಾಗುತ್ತಿದ್ದ ಸಮಯದಲ್ಲಿ ಪುಷ್ಪಲತೆಯು ಪುಷ್ಪಕುಂಡವನ್ನು ಒಳಕ್ಕೆ ತೆಗೆದುಕೊಂಡು ಹೋಗುತ್ತಿದ್ದಳು. ಆದರಿಂದ ಅವಳು ಬಂದಿಯ ಆಜ್ಞೆಗಳನ್ನು ಎಷ್ಟು ಚೆನ್ನಾಗಿ ತಪ್ಪದೆ ಪಾಲಿಸುತ್ತಿದ್ದಳೆಂಬುದು ವಿಷಕಂಠನಿಗೆ ತಿಳಿಯಿತು. ಬಿಸಿಲು ಬಹಳ ಹೆಚ್ಚಾಗಿದ್ದಾಗ ಕೂಡ ಅಂದರೆ ಬೆಳಿಗ್ಗೆ ಹನ್ನೊಂದರಿಂದ ಮಧ್ಯಾಹ್ನ ಎರಡು ಗಂಟೆಗಳವರೆಗೆ—ಪುಷ್ಪಲತೆಯು ಪುಷ್ಪಕುಂಡವನ್ನು ಕಿಟಕಿಯಿಂದ ತೆಗೆದು ಒಳಕ್ಕೆ ತೆಗೆದುಕೊಂಡು ಹೋಗುತ್ತಿದ್ದಳು. ಸಸ್ಯಭೂಮಿಯು ಬಹಳವಾಗಿ

ಒಣಗಿಹೋಗಬಾರದೆಂದವಳು ಹಾಗೆ ಮಾಡುತ್ತಿದ್ದಳು. ಇದನ್ನೂ ವಿಷಕಂಠ ನರಿತುಕೊಂಡು ತನ್ನ ಸಂದೇಹಗಳು ನಿವೃತ್ತಿಯಾಗಲು ಮತ್ತೊಂದು ಕಾರಣವು ದೊರಕಿತೆಂದುಕೊಂಡನು ಪುಷ್ಪಕುಂಡದಿಂದ ಎಲೆಗಳು ಹೊರಡುತ್ತಲೇ ವಿಷಕಂಠನು ದುರ್ಬೀನಿನಿಂದ ಅವನ್ನು ನೋಡಿದನು. ಆಗವನ ಸಂದೇಹಗಳೆಲ್ಲವೂ ಪೂರ್ತಿಯಾಗಿ ಮಾಯವಾದುವು ಕುಮುದ ಚಂದ್ರನ ಬಳಿ ಎರಡು ಸಸಿಗಳಿದ್ದುವೆಂದೂ ಎರಡನೆಯದನ್ನು ಅವನು ಪುಷ್ಪಲತೆಯ ವಶಕ್ಕೆ ಕೊಟ್ಟಿದ್ದನೆಂದೂ, ಅವಳು ಅದನ್ನು ಪ್ರೀತಿ ಯಿಂದಲೂ ಜಾಗರೂಕತೆಯಿಂದಲೂ ಬೆಳೆಸುತ್ತಿದ್ದಳೆಂದೂ ವಿಷಕಂಠನಿಗೆ ವ್ಯಕ್ತವಾಯಿತು ಅವರಿಬ್ಬರೂ ಪರಸ್ಪರ ಪ್ರೀತಿಯುಳ್ಳವರಾಗಿದ್ದರೆಂಬುದೂ ಈ ವೇಳೆಗೆ ವಿಷಕಂಠನಿಗೆ ವೇದ್ಯವಾಗಿತ್ತು

ಈಗ ಉಳಿದುದು ಆ ಸಸಿಯನ್ನು ಪುಷ್ಪಲತೆಯಿಂದ ಕಸಿದುಕೊಳ್ಳುವ ಕಾರ್ಯವು ಮಾತ್ರ. ಇದೇನು ಸುಲಭಸಾಧ್ಯವೆ? ಪುಷ್ಪಲತೆಯು ಆ ಸಸಿಯನ್ನು—ತಾಯಿಯು ಮಗುವನ್ನು ನೋಡಿಕೊಳ್ಳುವಂತೆ—ಪಾರಿ ವಾಳವು ಮೊಟ್ಟೆಗಳನ್ನು ರಕ್ಷಿಸುವಂತೆ—ಸರ್ವದಾ ಕಾಪಾಡುತ್ತಿದ್ದಳು ಹಾಗಾದರೆ ಸಸಿಯನ್ನು ತೆಗೆದುಕೊಳ್ಳುವುದು ಹೇಗೆ? ಅವಳು ಪ್ರಾತಃ ಕಾಲದಲ್ಲಿ ಅದನ್ನು ಬಿಟ್ಟೆಲ್ಲಿಗೂ ಹೋಗುತ್ತಿರಲಿಲ್ಲ. ಅಷ್ಟೇ ಅಲ್ಲದೆ ರಾತ್ರಿ ಯಲ್ಲಿ ಕೂಡ ಅವಳು ಅದನ್ನು ಬಿಟ್ಟಿರುತ್ತಿರಲಿಲ್ಲ. ಏಳುದಿನಗಳವರೆಗೆ ವಿಷಕಂಠನು ಕಾದು ನೋಡಿದನು ಪುಷ್ಪಲತೆಯು ತನ್ನ ಸ್ಥಾನದಲ್ಲಿಯೇ ಸರ್ವದಾ ಇರುತ್ತಿದ್ದಳು. ಆ ಏಳುದಿನಗಳಲ್ಲಿಯೇ ಕುಮುದನು ಪುಷ್ಪಲತೆ ಯನ್ನು ಕಾಣದೆ ಕಾತರಪಡುತ್ತಿದ್ದುದು. ಅವರಿಬ್ಬರಲ್ಲಿಯೂ ಸ್ವಲ್ಪ ವಿಷಾದವುಂಟಾಗಿತ್ತಾಗಿ ಆ ಏಳುದಿನಗಳವರೆಗೆ ಅವಳು ತನ್ನ ಪ್ರಿಯನನ್ನು ಕಾಣಲು ಹೋಗಲಿಲ್ಲ ವಿಷಕಂಠನು ಯೋಚಿಸತೊಡಗಿದನು ಅವರಿಬ್ಬ ರಿಗೂ ಪುನಃ ಭೇಟಿಯು ಪ್ರಾರಂಭವಾಗದಿದ್ದರೆ ತಾನು ಸಸಿಯನ್ನು ಕದಿ ಯುವುದು ಹೇಗೆ?

ವಿಷಕಂಠನೇನೋ ಸಸಿಯನ್ನು ಕದಿಯಲು ನಿರ್ಧರಿಸಿಬಿಟ್ಟಿದ್ದನು. ಅದನ್ನು ರಹಸ್ಯದಲ್ಲಿ ಬೆಳೆಸಿದ್ದುದರಿಂದ ಟ್ಯೂಲಿಪ್ ಭಕ್ತನಾದ ತನ್ನ ಮಾತಿನ ಮುಂದೆ ಟ್ಯೂಲಿಪದ ವಿಷಯವನ್ನೇ ಅರಿಯದ ಅಪರಿಚಿತ ಹುಡುಗಿಯ

ಮಾತನ್ನು ನಂಬುವವರಾರೆಂದು ವಿಷಕಂಠನು ಧೈರ್ಯವಾಗಿದ್ದನು ಸಸಿಯನ್ನು ಕದ್ದುಬಿಟ್ಟರೆ ಬಹುಮಾನವು ಸಿಕ್ಕುವುದು ಖಂಡಿತವೆಂದು ಅವನು ನಂಬಿದ್ದನು. ಹುಡುಗಿಯ ಮಾತನ್ನಾಗಲಿ ಬಂದಿಯ ಪ್ರಲಾಪ ವನ್ನಾಗಲಿ ಯಾರೂ ಲಕ್ಷ್ಯಮಾಡುವುದಿಲ್ಲವೆಂದು ಆ ಕಳ್ಳನು ನಿಶ್ಚಯಿಸಿ ಬಿಟ್ಟಿದ್ದನು ಆ ಪುಷ್ಪವು ಕುಮುದಚಂದ್ರನ ಪುಷ್ಪವೆಂದು ಪ್ರಸಿದ್ಧಿ ಹೊಂದುವುದರ ಬದಲಾಗಿ ವಿಷಕಂಠನ ಪುಷ್ಪವೆಂದು ಪ್ರಪಂಚದಲ್ಲಿ ಪ್ರಸಿದ್ಧಿ ಹೊಂದುವುದೆಂದು ವಿಷಕಂಠನು ಹಿಗ್ಗತೊಡಗಿದನು

ಪುಷ್ಪಲತೆಯು ಕೊಟಡಿಯನ್ನು ಬಿಡುವುದನ್ನೇ ಅವನು ಕಾಯು ತ್ತಿದ್ದನು ಪ್ರೇಮಿಕಾಪ್ರೇಮಿಕಿಯರು ಪುನಃ ಭೇಟಿಮಾಡತೊಡಗುತ್ತಲೇ ವಿಷಕಂಠನ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಪ್ರೇಮಲತೆಯು ಹೊರಟುಹೋದ ಸಮಯದಲ್ಲಿ ವಿಷಕಂಠನು ಅವಳ ಕೊಟಡಿಯ ಬಳಿಗೆ ಹೋಗಿ ಅವಳ ಕೊಟಡಿಯ ಬಾಗಿಲನ್ನೂ ಅದರ ಬಿಯಗವನ್ನೂ ಪರೀಕ್ಷಿ ಸಲು ಮೊದಲುಮಾಡಿದನು ಬಿಯಗವು ಭದ್ರವಾಗಿದ್ದಿತು ಬಿಯಗದ ಕೈಯನ್ನು ಪುಷ್ಪಲತೆಯು ಯಾವಾಗಲೂ ತನ್ನೊಡನೆಯೇ ತೆಗೆದುಕೊಂಡು ಹೋಗುತ್ತಿದ್ದಳು ಮೊದಲು ಮೊದಲು ಅವನು ಬಿಯಗದ ಕೈಯನ್ನು ಕದ್ದುಬಿಡುವ ಯೋಚನೆಯನ್ನು ಮಾಡಿದನು. ಆದರೆ ಅದನ್ನು ಅವಳ ಕಿಸೆಯಿಂದ ತೆಗೆದುಕೊಳ್ಳುವುದು ಕಷ್ಟವಾಗಿತ್ತು. ಅಲ್ಲದೆ ಅದು ಕಳೆದು ಹೋದುದನ್ನರಿಯುತ್ತಲೇ ಬಿಯಗವನ್ನು ಬದಲಾಯಿಸಿಬಿಡುವವರೆಗೂ ಅವಳು ಕೊಟಡಿಯನ್ನು ತ್ಯಜಿಸುವ ಸಂಭವವಿರುತ್ತಿರಲಿಲ್ಲ. ಆಗ ಅವನ ಕಳ್ಳತನವು ವ್ಯರ್ಥವಾಗಿಬಿಡುತ್ತಿದ್ದಿತು. ಅದೆಲ್ಲವನ್ನೂ ಯೋಚಿಸಿ ವಿಷ ಕಂಠನು ಅನೇಕ ಬಿಯಗದ ಕೈಗಳನ್ನು ಶೇಖರಿಸಿ ಪುಷ್ಪಲತೆಯು ಕುಮುದ ಚಂದ್ರನೊಡನಿದ್ದ ಸಮಯದಲ್ಲಿ ಅವುಗಳಲ್ಲೊಂದೊಂದನ್ನೂ ಬಿಯಗಕ್ಕೆ ಹಾಕಿ ಸರಿಯಾಗಿರುವುದೇನೆಂದು ನೋಡಿದನು. ಅವುಗಳಲ್ಲಿ ಎರಡು ಬಿಯಗದ ಕೈಗಳು ಬಿಯಗಕ್ಕೆ ಹಿಡಿಯುತ್ತಿದ್ದುವು. ಒಂದು ಮಾತ್ರ ಒಂದು ಬಾರಿ ತಿರುಗುತ್ತಿದ್ದಿತು. ಮತ್ತೊಂದು ಬಾರಿ ತಿರುಗುತ್ತಿರಲಿಲ್ಲ. ಇದನ್ನು ಸ್ವಲ್ಪ ಸರಿಪಡಿಸಿದರೆ ಉಪಯೋಗಿಸಬಹುದೆಂದು ವಿಷಕಂಠನು ಅದಕ್ಕೆ ಮಯಿಣವನ್ನು ಸವರಿ ಬಿಯಗಕ್ಕೆ ಹಾಕಿ ತಿರುಗಿಸಿದನು. ಬಿಯಗದ

ಕೈಗೆ ತಡೆಯುತ್ತಿದ್ದುದೇನೆಂಬುದು ಮಯಿಣದ ಮೇಲೆ ಬಿದ್ದ ಗುರುತಿನಿಂದ ತಿಳಿದುಬಂದುದು. ಅವನು ಸಣ್ಣದೊಂದು ಅರದಿಂದ ಆ ಬಿಯಗದ ಕೈಯನ್ನು ಸರಿಪಡಿಸಿದನು. ಅಷ್ಟು ಮಾಡಲು ಅವನಿಗೆ ಎರಡು ದಿನಗಳು ಹಿಡಿದುವು. ಹೀಗಾಗಿ ವಿಷಕಂಠನು ಶಬ್ದವಿಲ್ಲದಂತೆ ಪುಷ್ಪಲತೆಯ ಕೊಟಡಿಯ ಬಾಗಿಲನ್ನು ತೆಗೆದನು. ಅವಳ ಕೊಟಡಿಯನ್ನು ತಾನೊಬ್ಬನೇ ಪ್ರವೇಶಿಸಿದನು.

ವಿಷಕಂಠನು ಮೊದಲು ಮಾಡಿದ ಕೆಟ್ಟಕೃತ್ಯವೆಂದರೆ ಗೋಡೆಯನ್ನು ಹತ್ತಿ ಟ್ಯೂಲಿಪ್‌ಸಸಿಗಳನ್ನು ಕುಮುದನ ಉದ್ಯಾನವನದಲ್ಲಿ ಅಗೆದು ಹಾಕಿದುದು. ಎರಡನೆಯದೆಂದರೆ—ಕಿಟಕಿಯ ಮೂಲಕ ಕುಮುದನ 'ಸಸಿಗಳ ಕೊಟಡಿ'ಗೆ ನುಗ್ಗಿದುದು. ಮೂರನೆಯದೆಂದರೆ--ಕಳ್ಳಬಿಯಗದ ಕೈಯಿಂದ ಪುಷ್ಪಲತೆಯ ಕೊಟಡಿಯನ್ನು ಪ್ರವೇಶಿಸಿದುದು. ಹೀಗೆ ಅಸೂಯೆಯು ವಿಷಕಂಠನನ್ನು ಕ್ರಮಕ್ರಮವಾಗಿ ಒಂದು ಕೆಟ್ಟಕೃತ್ಯದಿಂದ ಮತ್ತೊಂದಕ್ಕೆ ಎಳೆಯಿತು.

ನಾವು ಹಿಂದೆಯೇ ಹೇಳಿದಂದೆ ವಿಷಕಂಠನು ಪುಷ್ಪಲತೆಯ ಕೊಟಡಿಯನ್ನು ಒಬ್ಬನೇ ಪ್ರವೇಶಿಸಿದನು. ಸಾಮಾನ್ಯಕಳ್ಳನು ಪುಷ್ಪಕುಂಡವನ್ನು ಕಂಕುಳಲ್ಲಿಟ್ಟುಕೊಂಡು ಹೊರಟುಹೋಗುತ್ತಿದ್ದನು. ವಿಷಕಂಠನು ಸಾಮಾನ್ಯಕಳ್ಳನಾಗಿರಲಿಲ್ಲ. ಅವನು ಸ್ವಲ್ಪ ಯೋಚಿಸತೊಡಗಿದನು.

ಸಸಿಯು ಕರಿಯಪುಷ್ಪವನ್ನು ಬಿಡುವುದು ಸಂಭವವಾಗಿದ್ದರೂ ಖಂಡಿತವಾಗಿರಲಿಲ್ಲ. ಆದುದರಿಂದ ಈಗ ಅದನ್ನು ಕದ್ದುಬಿಟ್ಟರೆ ನಿಷ್ಪ್ರಯೋಜಕವಾದ ಕಳ್ಳತನವನ್ನು ಮಾಡಿದಂತಾದರೇನು ಮಾಡುವುದು? ಅಲ್ಲದೆ ಪುಷ್ಪವು ಅರಳುವಷ್ಟರಲ್ಲಿ ಕಳ್ಳತನವು ಕಂಡುಹಿಡಿಯಲ್ಪಟ್ಟರೇನು ಮಾಡುವುದು? ತನ್ನ ಬಳಿ ಬಿಯಗದ ಕೈಯಿದ್ದಿತಾಗಿ, ಪುಷ್ಪವು ಅರಳುವುದಕ್ಕೊಂದುಗಂಟೆಯ ಮೊದಲಾಗಲಿ, ಅರಳಿದ ಮೇಲೆ ಒಂದು ಗಂಟೆಯ ಮೇಲಾಗಲೀ ಅದನ್ನು ತೆಗೆದುಕೊಂಡರಾಯಿತು. ಆಗ ಕಲ್ಯಾಣನಗರಿಗೆ ತಟ್ಟನೆ ಹೊರಟುಬಿಡಬಹುದು. ಆಗ ಸಮಿತಿಯವರ ಮುಂದೆ ಅದನ್ನು ಇಟ್ಟು ಬೇರೊಬ್ಬರು ಅದನ್ನು ತಮ್ಮದೆನ್ನುವಷ್ಟರಲ್ಲಿ ಎಲ್ಲವನ್ನೂ ಇತ್ಯರ್ಥ ಪಡಿಸಬಹುದು. ಆಗ ಮತ್ತಾರಾದರೂ ಪುಷ್ಪವನ್ನು ನೋಡಿ ಅದನ್ನು

ತಮ್ಮದೆಂದರೆ ಅವರೇ ಕಳ್ಳರೆಂದು ಆಪಾದನೆ ಮಾಡಿಬಿಡಬಹುದು. ಇವೇ ಮುಂತಾದ ಯೋಚನೆಗಳನ್ನು ವಿಷಕಂಠನು ಮಾಡಿದನು. ಅವನ ಯೋಗ್ಯತೆಗೆ ತಕ್ಕಂತೆ ಅವನ ಯೋಚನೆಗಳೂ ಇದ್ದುವು.

ಹೀಗಾಗಿ ಕುಮುದನೂ ಪ್ರೇಮಲತೆಯೂ ಕಾರಾಗಾರದ ಬಾಗಿಲಿನ ಸಣ್ಣ ಕಿಟಕಿಯ ಬಳಿ ಮಾತನಾಡುತ್ತ ಕಾಲಕಳೆಯುತ್ತಿದ್ದಾಗ ವಿಷಕಂಠನು ಪುಷ್ಪಲತೆಯ ಕೊಟಡಿಯನ್ನು ಪ್ರವೇಶಿಸಿ ಕರಿಯಸಸಿಯು ಪುಷ್ಪವನ್ನು ಬಿಡುವ ಪ್ರಯತ್ನದಲ್ಲಿ ಮುಂದುವರಿಯುತ್ತಿದ್ದುದನ್ನು ನೋಡುತ್ತಿದ್ದನು. ಒಂದು ದಿನ ಅವನು ಎಂದಿನಂತೆ ಕೊಟಡಿಯೊಳಕ್ಕೆ ಹೋಗಲೆತ್ನಿಸುತ್ತಿದ್ದನು. ಆ ದಿನ ಪ್ರೇಮಿಕಾಪ್ರೇಮಿಕಿಯರು ಒಂದೆರಡು ಮಾತುಗಳನ್ನು ಮಾತ್ರ ಪರಸ್ಪರ ಹೇಳಿಕೊಂಡರು. ಒಡನೆಯೇ ಕುಮುದಚಂದ್ರನು ಪುಷ್ಪಲತೆಯನ್ನು ಟ್ಯೂಲಿಪ್‌ಸಸಿಯನ್ನು ನೋಡಿಕೊಳ್ಳಲು ಕಳುಹಿಸಿಬಿಟ್ಟನು. ಹೀಗೆ ಹತ್ತು ನಿಮಿಷಗಳಲ್ಲಿಯೇ ಪುಷ್ಪಲತೆಯು ಪುನಃ ತನ್ನ ಕೊಟಡಿಯನ್ನು ಪ್ರವೇಶಿಸಿದುದನ್ನು ಕಂಡು, ಪುಷ್ಪವು ಅರಳಿರಬೇಕೆಂದೂ ಅಥವಾ ಅರಳುತ್ತಿರಬೇಕೆಂದೂ ವಿಷಕಂಠನು ಊಹಿಸಿಕೊಂಡನು

ಆ ದಿನ ರಾತ್ರಿಯೇ ವಿಷಕಂಠನು ಪುಷ್ಪಾಪಹರಣ ಮಾಡಬೇಕಾಗಿದ್ದಿತು. ಆದುದರಿಂದವನು ತನ್ನ ಮದ್ಯಸಂಚಯವನ್ನು ದ್ವಿಗುಣಮಾಡಿಕೊಂಡು ಕಾಳೀಚರಣನ ಮುಂದೆ ನಿಂತನು. ಅಂದರೆ ಪ್ರತಿಯೊಂದು ಕಿಸೆಯಲ್ಲಿಯೂ ಒಂದು ಸೀಸೆಯನ್ನಿರಿಸಿಕೊಂಡು ನಿಂತನು.

ಸುಮಾರು ಹನ್ನೊಂದುಗಂಟೆಯ ವೇಳೆಗೆ ಕಾಳೀಚರಣನು ಕುಡಿದು ಮತ್ತನಾಗಿ ಮೃತನಾದವನಂತೆ ಮಲಗಿದನು. ಹೀಗೆ ಕಾಳೀಚರಣನು ತನ್ನ ಪಥದಿಂದ ದೂರನಾಗುತ್ತಲೇ ವಿಷಕಂಠನೇ ಮನೆಗೆ ಸರ್ವಾಧಿಕಾರಿಯಂತಾಗಿದ್ದನು.

ಸುಮಾರು ರಾತ್ರಿ ಎರಡುಗಂಟೆಯ ವೇಳೆಗೆ ಪುಷ್ಪಲತೆಯು ತನ್ನ ಕೊಟಡಿಯನ್ನು ಬಿಟ್ಟು ಹೊರಟುದನ್ನು ಅವನು ಕಂಡನು. ಆದರೆ ಅವಳ ಕೈಯಲ್ಲಿ ಅದೇನನ್ನೋ ಬಹಳ ಜಾಗರೂಕತೆಯಿಂದ ಅವಳು ಹಿಡಿದು ನಡೆದಿದ್ದಳು. ಅದೇ ಕರಿಯಸಸಿಯ ಕರಿಯಪುಷ್ಪವೆಂದು ವಿಷಕಂಠನಿಗೆ ನಿರ್ಧರವಾಯಿತು. ಆದರೆ ಅದನ್ನು ಹೀಗವಳು ಎಲ್ಲಿಗೆ ತೆಗೆದುಕೊಂಡು

ಹೋಗುವಳು? ಆ ಕ್ಷಣವೇ ಕಲ್ಯಾಣನಗರಿಗೆ ಹೊರಟುಬಿಡುವಳೆ? ಒಬ್ಬಂಟಿಗಳಾಗಿ ರಾತ್ರಿಯಲ್ಲಿ ಈ ಪುಟ್ಟಹುಡುಗಿಯು ಪ್ರಯಾಣ ಮಾಡುವಳೆ? ಅಥವಾ ಅದನ್ನು ಕುಮುದನಿಗೆ ತೋರಿಸಲು ತೆಗೆದುಕೊಂಡು ಹೋಗುವಳೋ?

ಅವನು ಮೆಲ್ಲನೆ ಪುಷ್ಪಲತೆಯನ್ನು ಹಿಂಬಾಲಿಸಿದನು ಅವಳು ಬಾಗಿಲಿನ ಸಣ್ಣ ಕಿಟಕಿಯ ಬಳಿ ಹೋದಳು. ಕುಮುದನನ್ನು ಕರೆದಳು ಅವಳಿಟ್ಟುಕೊಂಡಿದ್ದ ದೀಪದ ಬೆಳಕಿನಲ್ಲಿ ಕುಮುದನು ಕರಿಯಕುಸುಮ ವನ್ನು ಕಂಡಂತೆಯೇ ವಿಷಕಂಠನೂ ಕರಿಯಪುಷ್ಪವನ್ನು ಕಂಡನು ದೂತನನ್ನು ಕಲ್ಯಾಣನಗರಿಗೆ ಕಳುಹಿಸಲು ಅವರಿಬ್ಬರೂ ಮಾತನಾಡಿ ಕೊಂಡುದನ್ನು ವಿಷಕಂಠನು ಕೇಳಿದನು. ಕುಮುದನು ಪುಷ್ಪಲತೆಯನ್ನು ಕಳುಹುತ್ತಲೇ ಅವಳು ದೀಪವನ್ನಾರಿಸಿ ತನ್ನ ಕೊಟಡಿಗೆ ಬಂದಳು ಹತ್ತು ನಿಮಿಷಗಳಲ್ಲಿ ಅವಳು ಕೊಟಡಿಯನ್ನು ತ್ಯಜಿಸಿ ಎರಡುಬಾರಿ ಬಿಯಗವನ್ನು ಭದ್ರಪಡಿಸಿ ಹೊರಟುಹೋದುದು ವಿಷಕಂಠನಿಗೆ ಕಂಡು ಬಂದುದು ಆ ಸಮಯದಲ್ಲಿ ಅವನು ಪುಷ್ಪಲತೆಯ ಕೊಟಡಿಯ ಮೇಲ್ಭಾಗದಲ್ಲಿದ್ದ ಮೆಟ್ಲುಗಳ ಮೇಲೆ ನಿಂತಿದ್ದನು. ಪುಷ್ಪಲತೆಯು ತನ್ನ ಕೊಟಡಿಯಿಂದ ಮೆಟ್ಲುಗಳನ್ನು ಇಳಿದಂತೆಲ್ಲಾ ವಿಷಕಂಠನು ತಾನವಿತು ಕೊಂಡಿದ್ದ ಪ್ರದೇಶದಿಂದ ಮೆಟ್ಲುಗಳನ್ನಿಳಿಯತೊಡಗಿದನು ಹೀಗಾಗಿ ಪುಷ್ಪಲತೆಯು ಕಡೆಯ ಮೆಟ್ಲನ್ನು ತುಳಿಯುವವೇಳೆಗೆ ವಿಷಕಂಠನು ಅವಳ ಕೊಟಡಿಯ ಬಿಯಗದ ಮೇಲೆ ಕೈಯಿಟ್ಟಿದ್ದನು. ಆ ಕೈಯಲ್ಲಿ ಕಳ್ಳ ಬಿಯಗದಕೈಯಿತ್ತು. ಅದರಿಂದ ಕೊಟಡಿಯ ಬಾಗಿಲನ್ನು ಸುಲಭ ವಾಗಿ ತೆಗೆಯಬಹುದಾಗಿತ್ತು.

ಆದುದರಿಂದಲೇ ಈ ಪರಿಚ್ಛೇದದಾದಿಯಲ್ಲಿ ದೇವಾಧಿದೇವನ ದಯೆಯು ಪ್ರೇಮಿಕಾಪ್ರೇಮಿಕರಿಗೆ ಬಹಳವಾಗಿರಬೇಕಾಗಿದ್ದಿತೆಂದು ಹೇಳಿರುವೆವು

## ಚತುರ್ವಿಂಶತಿ ಪರಿಚ್ಛೇದ

### ಕರಿಯಪುಷ್ಪವು ನೂತನ ಯಜಮಾನನನ್ನು ಹೊಂದಿದುದು

ಪುಷ್ಪಲತೆಯು ಹೊರಟುಹೋಗುತ್ತಲೇ ಕುಮುದನು ಎರಡುವಿಧವಾದ ಸಂತೋಷವನ್ನು ಹೊಂದಿದವನಾಗಿ ನಿಂತಲ್ಲಿಯೇ ನಿಂತಿದ್ದನು. ಹಾಗೆಯೇ

ಸುಮಾರು ಅರ್ಧಗಂಟೆಯು ಕಳೆದುಹೋಯಿತು. ಆವೇಳೆಗಾಗಲೇ ಪ್ರಾತಃಕಾಲದ ಸೂರ್ಯನ ರಶ್ಮಿಗಳು ಕಿಟಕಿಯ ಮೂಲಕ ಪ್ರವೇಶಿಸ ತೊಡಗಿದ್ದುವು. ಆ ಸಮಯದಲ್ಲಿ ಕಾರಾಗಾರದ ಮೆಟ್ಟಿಲುಗಳ ಮೇಲೆ ಯಾರೋ ಬರುತ್ತಿದ್ದಂತೆ ಶಬ್ದವಾಗಿ ಕುಮುದಚಂದ್ರನು ಚಕಿತನಾದನು. ಹಾಗೆಯೇ ಅದಾರೋ ಅಳುತ್ತಿರುವಂತೆ ಕೇಳಬಂದಿತು. ಅದೇ ಸಮಯ ದಲ್ಲಿಯೇ ಪುಷ್ಪಲತೆಯು ಶುಷ್ಕವದನಳಾಗಿ ಅವನೆದುರಿನಲ್ಲಿ ಬಂದಳು. ಅವನು ಚಕಿತನಾಗಿ ಭಯವಿಹ್ವಲನಾಗಿ ನಿಂತನು ಪುಷ್ಪಲತೆಯು ಮೇಲುಸಿರುಬಿಡುತ್ತೆ, "ಕುಮುದಚಂದ್ರಬಾಬುಗಳೆ! ಕುಮುದಚಂದ್ರ ಬಾಬುಗಳೆ!" ಎಂದು ಗಟ್ಟಿಯಾಗಿ ಕೂಗಿಕೊಂಡಳು.

ಬಂದಿಯು ಭೀತನಾಗಿ, "ಅಯ್ಯೋ ದೇವರೆ! ಸಮಾಚಾರವೇನು?" ಎಂದು ಕೇಳಿದನು.

"ಕುಮುದಚಂದ್ರಬಾಬುಗಳೆ! ಪುಷ್ಪವು . "

"ಏನು? ಪುಷ್ಪವೇನಾಯಿತು?"

"ಅಯ್ಯೋ! ಹೇಗೆ ಹೇಳಲಿ?"

"ಹೇಳು, ಹೇಳು. ಪುಷ್ಪಾ!"

"ಯಾರೋ ಅದನ್ನು ತೆಗೆದುಕೊಂಡಿದ್ದಾರೆ-ನನ್ನಿಂದ ಕದ್ದಿದ್ದಾರೆ."

"ಕದ್ದಿದ್ದಾರೆಯೆ?—ತೆಗೆದುಕೊಂಡಿದ್ದಾರೆಯೆ?'

ಪುಷ್ಪಲತೆಯು ಬೀಳದಂತೆ ಬಾಗಿಲಿಗೆ ಒರಗಿ ನಿಂತು, "ಅಹುದು ತೆಗೆದುಕೊಂಡು ಹೋಗಿದ್ದಾರೆ, ಕದ್ದುಬಿಟ್ಟಿದ್ದಾರೆ" ಎಂದಳು. ಹಾಗೆ ಹೇಳುತ್ತಿದ್ದಂತೆಯೇ ಅವಳ ಮೊಣಕಾಲುಗಳಲ್ಲಿ ಶಕ್ತಿಯು ಮಾಯವಾಗಿ ಅವಳು ಕುಸಿದುಬಿದ್ದಳು.

"ಆದರೆ—ಹೀಗಾದುದು ಹೇಗೆ? ಹೇಳು, ಎಲ್ಲವನ್ನೂ ಹೇಳು"

"ಓಹೋ! ನನ್ನ ತಪ್ಪೆಂದು ಭಾವಿಸಬೇಡಿ ಪರಮಮಿತ್ರರೆ!"

ಪಾಪ! ಅವಳು ಪ್ರಾಣಾಧಿಕನೆಂದವನನ್ನು ಸಂಬೋಧಿಸುವ ಧೈರ್ಯವುಳ್ಳವಳಾಗಿರಲಿಲ್ಲ. ಕುಮುದನು ಆಕ್ಷೇಪಿಸುವವನಂತೆ, "ಅದನ್ನು ಒಂಟಿಯಾಗಿಬಿಟ್ಟಿದ್ದೆಯಾ?" ಎಂದು ಕೇಳಿದನು.

"ಒಂದು ನಿಮಿಷ ಮಾತ್ರ ಬಿಟ್ಟಿದ್ದೆನು. ನೂರು ಗಜಗಳಷ್ಟು ದೂರ

ದಲ್ಲಿ ನಮ್ಮ ದೂತನಿದ್ದಾನೆ. ಅವನಿಗೆ ಸಮಾಚಾರವನ್ನು ತಿಳುಹಿ ಬರಲು ಒಂದು ಕ್ಷಣಮಾತ್ರ ಹೋಗಿದ್ದೆನು."

"ಆ ಸಮಯದಲ್ಲಿ ನನ್ನ ಮಾತನ್ನು ಮೀರಿ ಬಿಯಗದ ಕೈಯನ್ನು ಹಿಂದೆಯೇ ಬಿಟ್ಟುಹೋದೆಯಲ್ಲವೆ?—ಅಯ್ಯೋ! ಹುಚ್ಚು ಹುಡುಗಿ!"

"ಇಲ್ಲ, ಇಲ್ಲ, ಇಲ್ಲ. ನನಗಾ ವಿಷಯವೇ ಅರ್ಥವಾಗುತ್ತಿಲ್ಲ. ಬಿಯಗದ ಕೈಯನ್ನು ನನ್ನ ಬಳಿಯೇ ಇಟ್ಟುಕೊಂಡಿದ್ದೆನು. ಅದಕ್ಕೆ ರೆಕ್ಕೆಗಳು ಬಂದುಬಿಡಬಹುದೆಂಬ ಶಂಕೆಯುಳ್ಳವಳಂತೆ ಅದನ್ನು ಭದ್ರವಾಗಿ ಕೈಯಲ್ಲಿಯೇ ಹಿಡಿದಿದ್ದೆನು."

"ಹಾಗಾದರೆ, ಹೀಗಾಗಲು ಕಾರಣವೇನು?"

"ಅದೇ ನನಗರ್ಥವಾಗುತ್ತಿಲ್ಲ. ಕಾಗದವನ್ನು ದೂತನ ಕೈಗೆ ಕೊಟ್ಟೆನು. ಅವನ ಮನೆಯನ್ನು ತ್ಯಜಿಸಿ ನಾನು ಬರುವಷ್ಟರಲ್ಲಿಯೇ ಅವನು ಹೊರಟಿದ್ದನು. ನಾನು ಮನೆಗೆ ಬಂದೆನು ಬಿಯಗವು ಭದ್ರ ಪಡಿಸಲ್ಪಟ್ಟಿದ್ದುದು ಹಾಗೆಯೇ ಇತ್ತು. ನನ್ನ ಕಿರುಮನೆಯಲ್ಲಿದ್ದ ಪದಾರ್ಥ ಗಳನ್ನು ಎಲ್ಲೆಲ್ಲಿಟ್ಟಿದ್ದೆನೋ ಅಲ್ಲಿಯೇ ಅವೆಲ್ಲವೂ ಇದ್ದುವು. ಆದರೆ ಟ್ಯೂಲಿಪ್ ಪುಷ್ಪವು ಮಾತ್ರ ಇರಲಿಲ್ಲ ಅದು ಮಾಯವಾಗಿದ್ದಿತು. ಯಾರ ಬಳಿಯೋ ನನ್ನ ಕಿರುಮನೆಯ ಬಿಯಗದ ಕೈ ಇದ್ದಿರಬೇಕು ಅಥವಾ ಬೇಕೆಂದು ಯಾರೋ ಅಂತಹದನ್ನು ಮಾಡಿಸಿಟ್ಟುಕೊಂಡಿರಬೇಕು"

ದುಃಖಾತಿರೇಕದಿಂದ ಪುಷ್ಪಲತೆಯು ಮುಂದೆ ಹೇಳಲಾರದವ ಳಾದಳು ದುಃಖದಿಂದ ಅವಳ ಉಸಿರೇ ಕಟ್ಟಿಹೋದಂತಾಗಿತ್ತು. ಕುಮುದ ಚಂದ್ರನು ಅಲುಗಾಡದೆ, ಒಂದು ಮಾತನ್ನೂ ಅರ್ಥಮಾಡಿಕೊಳ್ಳದವನಂತೆ –ಗಾಬರಿಗೊಂಡವನಂತೆ– ನಿಂತು, "ಕದ್ದುಬಿಟ್ಟರೆ! ಕದ್ದುಬಿಟ್ಟರೆ! ಸರ್ವ ನಾಶವಾಗಿಹೋಯಿತು!" ಎಂದು ಕೂಗಿಕೊಳ್ಳುತ್ತಿದ್ದನು

ಪುಷ್ಪಲತೆಯು, "ಕ್ಷಮಿಸಿ, ಕ್ಷಮಿಸಿ ಕುಮುದಚಂದ್ರಬಾಬುಗಳೆ! ಇದರಿಂದ ನಾನು ಮೃತಳಾದಂತೆಯೇ ಸರಿ" ಎನ್ನುತ್ತಿದ್ದಳು.

ಪುಷ್ಪಲತೆಯ ಕಾತರತೆಯನ್ನು ಕಂಡು, ಕುಮುದಚಂದ್ರನು ಬಾಗಿಲಿನ ಸಣ್ಣ ಕಿಟಕಿಯ ಕಬ್ಬಿಣದ ಕಂಬಿಗಳನ್ನು ಹಿಡಿದು ಮಹಾ ನಿನಾದದೊಡನೆ ಅವುಗಳನ್ನಲ್ಲಾಡಿಸುತ್ತ ಹೇಳತೊಡಗಿದನು—

"ಪುಷ್ಪಾ! ಪುಷ್ಪಾ ಕಳ್ಳತನವಾಗಿದೆ ನಿಜ. ಆದರೆ ಅದರಿಂದ ನಾವು ಕಾತರರಾಗಿ ನಿಲ್ಲಲಾಗದು. ಇಲ್ಲ, ಇಲ್ಲ. ಪರಿಸ್ಥಿತಿಯೇನೋ ಭೀಕರವಾಗಿದೆ. ವಿಪತ್ತು ಭಯಂಕರವಾಗಿದೆ. ಆದರೆ ಎಲ್ಲವನ್ನು ಸರಿಪಡಿಸಬಹುದು ಪುಷ್ಪಾ! ನಮಗೆ ಕಳ್ಳನಾರೆಂಬುದು ತಿಳಿದಿದೆ"

"ಅಯ್ಯೋ! ನಾನೇನು ಹೇಳಲಿ?"

"ನಾನು ಬಲ್ಲೆ ಆ ಕೊರಮ ನಿರಂಜನನೇ ಅದನ್ನು ಕದ್ದಿರುವನು. ನಾವು ಕಷ್ಟಪಟ್ಟು ರಾತ್ರಿಯಲ್ಲಿ ನಿದ್ದೆಯಿಲ್ಲದೆ ಬೆಳಸಿದ ಪುಷ್ಪವನ್ನು ಅವನು ಕಲ್ಯಾಣನಗರಿಗೆ ತೆಗೆದುಕೊಂಡು ಹೋಗಲು ಬಿಡುವುದೆ? ನಮ್ಮ ಪ್ರೀತಿಯ ಮಗುವನ್ನು ಅವನು ಹೊತ್ತುಕೊಂಡು ಹೋಗಲು ಬಿಡುವುದೆ? ಪುಷ್ಪಾ! ನಾವು ಅವನನ್ನು ಹಿಂಬಾಲಿಸಿ ಹೋಗಬೇಕು ಅವನನ್ನು ಹಿಡಿಯಬೇಕು"

"ಆದರೆ ಇದೆಲ್ಲವನ್ನೂ ಹೇಗೆ ಮಾಡುವುದು? ನಾವಿಬ್ಬರೂ ಪರಸ್ಪರ ಮಾತನಾಡುತ್ತಿದ್ದೆವೆಂದು ನನ್ನ ತಂದೆಗೆ ತಿಳಿಸದೆ ಇದೆಲ್ಲವನ್ನೂ ಮಾಡುವುದು ಹೇಗೆ? ಪ್ರಪಂಚವನ್ನೇ ಸ್ವಲ್ಪವೂ ಅರಿಯದ ನನ್ನಂತಹ ಬಡ ಹುಡುಗಿಯು ಇದೆಲ್ಲವನ್ನೂ ಹೇಗೆ ಮಾಡುವಳು? ನಿಮಗೆ ಕೂಡ ಇದು ಸಾಧ್ಯವಾಗುತ್ತಿತ್ತೋ ಇಲ್ಲವೋ ಹೇಳಲಾರೆ"

"ಪುಷ್ಪಾ! ಪುಷ್ಪಾ! ಈ ಬಾಗಿಲನ್ನು ತೆಗೆ ಕಳ್ಳನನ್ನು ಕಂಡು ಹಿಡಿಯುವೆನೆ ಇಲ್ಲವೆ ತಿಳಿಯುವೆ ಅವನು ತಪ್ಪನ್ನೊಪ್ಪಿಕೊಂಡು ಕ್ಷಮಾಪಣೆ ಕೇಳುವಂತೆ ಮಾಡುವೆನೆ ಇಲ್ಲವೆ ನೋಡುವೆ"

"ಅಯ್ಯೋ! ಬಾಗಿಲನ್ನು ನಾನು ಹೇಗೆ ತೆಗೆಯಲಿ? ನನ್ನಲ್ಲಿ ಬಿಯಗದ ಕೈಗಳಿವೆಯೆ? ಅವು ನನ್ನಲ್ಲಿದ್ದಿದ್ದರೆ ನೀವು ಬಹಳ ದಿನಗಳ ಹಿಂದೆಯೇ ಸ್ವತಂತ್ರರಾಗಿಬಿಡುತ್ತಿದ್ದಿರಲ್ಲವೆ?"

"ಅವು ನಿನ್ನ ತಂದೆಯ ಬಳಿ ಇವೆ ನಿನ್ನ ಕೆಟ್ಟ ತಂದೆಯು ನನ್ನ ಮೊದಲನೆಯ ಸಸಿಯನ್ನು ತುಳಿದು ಹಾಳುಮಾಡಿದನು—ಆ ಕಳ್ಳ-ಕೊರಮ - ಅವನು ನಿರಂಜನನ ಅನುಯಾಯಿ"

"ದಯವಿಟ್ಟು ಅಷ್ಟು ಗಟ್ಟಿಯಾಗಿ ಕೂಗಬೇಡಿ."

"ಪುಷ್ಪಾ! ನೀನು ಈ ಬಾಗಿಲನ್ನು ತೆಗೆಯದಿದ್ದರೆ ಈ ಸಲಾಕಿಗಳನ್ನು

ಮುರಿದು ಹೊರಕ್ಕೆ ಬರುತ್ತೇನೆ. ಬಂದು ಕಾರಾಗೃಹದಲ್ಲಿರುವವರೆಲ್ಲರನ್ನೂ ಕೊಂದುಬಿಡುತ್ತೇನೆ."

"ಸ್ವಲ್ಪ ದಯವಿಡಿ, ಸ್ವಲ್ಪ ದಯವನ್ನು ತೋರಿ."

"ಪುಷ್ಪಾ! ಆಗಲೇ ಹೇಳಿದೆನಷ್ಟೆ.—ಈ ಕಾರಾಗೃಹದಲ್ಲಿರುವ ಕಲ್ಲುಗಳೆಲ್ಲವನ್ನೂ ಪುಡಿಪುಡಿ ಮಾಡಿಬಿಡುವೆನು."

ಆ ಅದೃಷ್ಟಹೀನನು ಹಾಗೆ ಹೇಳುತ್ತಿದ್ದಾಗ ಅವನ ಬಲವು ಹತ್ತಾರು ಬಾರಿಯಷ್ಟು ವೃದ್ಧಿಯಾಗಿದ್ದಿತು ಅವನು ಬಾಗಿಲನ್ನು ಬಲವಾಗಿ ಅಲ್ಲಾಡಿಸತೊಡಗಿದನು. ಅದರ ಶಬ್ದವೂ ಅವನ ಧ್ವನಿಯೂ ಗುಡುಗಿನಂತೆ ಮೆಟ್ಲುಗಳಮೇಲೆ ಪ್ರತಿಧ್ವನಿತವಾಗುತ್ತಿದ್ದುವು. ಪುಷ್ಪಲತೆಯು ತನ್ನ ಗಾಬರಿಯಲ್ಲಿ ಅವನ ಕೋಪಶಮನಮಾಡಲೆತ್ನಿಸುತ್ತ ವಿಫಲಳಾಗುತ್ತಿದ್ದಳು.

ಕುಮುದಚಂದ್ರನು ಗಟ್ಟಿಯಾಗಿ ಕೂಗುತ್ತ ಹೇಳತೊಡಗಿದನು—"ಆ ಕೊರಮ ಕಾಳೀಚರಣನನ್ನು ಕೊಂದುಬಿಡುತ್ತೇನೆ, ತಿಳಿಯಿತೆ? ಅವನು ನನ್ನ ಕರಿಯ ಸಸಿಯ ರಕ್ತವನ್ನು ಚೆಲ್ಲಿದಂತೆ ಅವನ ರಕ್ತವನ್ನು ಚೆಲ್ಲಿಬಿಡುತ್ತೇನೆ."

ಬಂದಿಯು ನಿಜವಾಗಿ ಹುಚ್ಚುಹಿಡಿದವನಂತೆ ಕೂಗಿಕೊಳ್ಳತೊಡಗಿದನು. ಪುಷ್ಪಲತೆಯು ಸಮಾಧಾನ ಪಡಿಸುತ್ತ ನಡುಗುವ ಧ್ವನಿಯಿಂದ ಹೇಳತೊಡಗಿದಳು—"ಸರಿ, ಇರಲಿ–ಸುಮ್ಮನಿರಿ. ಅವನ ಬಿಯಗದ ಕೈಗಳನ್ನು ತರುತ್ತೇನೆ. ನಿಮ್ಮ ಕಾರಾಗಾರದ ಬಾಗಿಲನ್ನು ತೆಗೆಯುತ್ತೇನೆ. ಸರಿ–ಸ್ವಲ್ಪ ಸುಮ್ಮನಿರಿ–ಪ್ರಾಣಾಧಿಕ–"

ಅವಳ ಮಾತು ಮುಗಿಯುವಷ್ಟರಲ್ಲಿ ಅವಳ ಪಕ್ಕದಲ್ಲಿ ಗರ್ಜನೆಯೊಂದು ಕೇಳಿಬಂದುದು. ಅವಳು ಮಾತನ್ನು ನಿಲ್ಲಿಸಿ ತಿರುಗಿ ನೋಡಿದಳು. ಪಕ್ಕದಲ್ಲಿ ಅವಳ ತಂದೆಯಿದ್ದನು. ಅವಳು "ಅಯ್ಯೋ! ನನ್ನ ತಂದೆಯು ಬಂದಿದ್ದಾನೆ!" ಎಂದಳು.

ಕುಮುದನು ಗರ್ಜಿಸುತ್ತ "ಕಾಳೀಚರಣ! ಚಿಃ! ಕಳ್ಳಕೊರಮ!" ಎಂದನು.

ಕಾಳೀಚರಣನು ಈ ಗಲಾಟೆಯ ಮಧ್ಯೆ ಯಾರಿಗೂ ತಿಳಿಯದಂತೆ

ಮೆಟ್ಲುಗಳನ್ನು ಹತ್ತಿ ಬಂದಿದ್ದನು. ಅವನು ಒರಟು ಒರಟಾಗಿ ತನ್ನ ಮಗಳ ಕೈಯನ್ನು ಹಿಡಿಯುತ್ತ ಕೋಪಕಂಪಿತಕಂಠದಿಂದ ಹೇಳತೊಡಗಿದನು—"ಓಹೋ! ನೀನು ನನ್ನ ಬಿಯಗದ ಕೈಗಳನ್ನು ತೆಗೆದುಕೊಂಡುಬಿಡುವೆಯೋ? ಆಹಾ! ಈ ದಗಾಖೋರ - ಈ ಸೈತಾನ - ಈ ಖೂನೀಕಾರ - ಈ ರಾಷ್ಟ್ರದ್ರೋಹಿ ನಿನ್ನ ಪ್ರಾಣಾಧಿಕ - ಅಲ್ಲವೆ? ಆಹಾ! ಚೋಟುದ್ದದ ಹುಡುಗಿಯು ರಾಷ್ಟ್ರದ ಬಂದಿಗಳೊಡನೆ ಮಾತನಾಡುತ್ತಿರುವಳಲ್ಲವೆ? ಇರಲಿ, ಇರಲಿ. ಇವಳಿಗೆ ಸರಿಯಾದ ಪಾಠವನ್ನು ಕಲಿಸುತ್ತೇನೆ"

ಪುಷ್ಪಲತೆಯು ನಿರಾಶಾಪರವಶಳಾಗಿ ಕೈಜೋಡಿಸಿ ನಿಂತಳು. ಕಾಳೀಚರಣನು ಕೋಪವನ್ನು ಸ್ವಲ್ಪ ಬಿಟ್ಟು ಶತ್ರುವನ್ನು ನಿಗ್ರಹಿಸುವುದನ್ನರಿತವನಂತೆ ಹಾಸ್ಯಪ್ರವಚನಗಳನ್ನು ಹೇಳತೊಡಗಿದನು—"ಆಹಾ! ಆಹಾ! ನಿರಪರಾಧಿಗಳಾದ ಪುಷ್ಪಭಕ್ತರೆ! ಘನ ವಿದ್ವಾಂಸರೆ! ತಾವು ನನ್ನನ್ನು ಕೊಂದು ನನ್ನ ರಕ್ತವನ್ನು ಪಾನಮಾಡುವಿರಲ್ಲವೆ! ಚೆನ್ನಾಗಿದೆ! ಚೆನ್ನಾಗಿದೆ! ತಮಗೆ ಸಹಾಯಮಾಡಲು ನನ್ನ ಮಗಳು ಸಿದ್ಧಳಾಗಿದ್ದಾಳೆ! ಇದೇನು! ನಿಜವಾಗಿ ಕಳ್ಳರ ಗುಹೆಯಲ್ಲಿಯೋ ಖೂನಿಕಾರರ ಗುಹೆಯಲ್ಲಿಯೋ ಇರುವೆನೆ?—ಸರಿ ಗವರ್ನರಿಗೆ ನಾಳೆ ಎಲ್ಲವನ್ನು ತಿಳಿಸುವೆನು. ಕಾಯಿದೆಕಟ್ಟಳೆಗಳನ್ನು ನಾವು ಚೆನ್ನಾಗಿ ಬಲ್ಲವರಾಗಿದ್ದೇವೆ. ಸುರನಗರಿಯಲ್ಲಿ ತಾವು ಬರೆದ ಪುಸ್ತಕವನ್ನು ಪುನಃ ಮುದ್ರಣ ಮಾಡಿಸುತ್ತೇನೆ ಭಯಪಡಬೇಡಿ. ವಿದ್ಯಾನಿಧಿಗಳೆ! ಈ ಬಾರಿ ಸರಿಯಾಗಿ ಗಲ್ಲಿಗೆ ಹಾಕುತ್ತೇವೆ—ಸರಿ, ಸರಿ. ಪಂಜರಸ್ಥವಾದ ಕರಡಿಯಂತೆ ಕೈಕಡಿಯುತ್ತಿರಿ—ರಾಣೀಸಾಹೇಬರೆ! ತಾವು ತಮ್ಮ ಪ್ರಾಣಾಧಿಕ ಕುಮುದಚಂದ್ರನನ್ನು ಕಣ್ಣುಗಳಿಂದ ನೋಡಿ ನೋಡಿ ನುಂಗಿಹಾಕಿರಿ—ತಾವಿಬ್ಬರೂ ರಹಸ್ಯವಾಗಿ ಮಾತನಾಡಿಕೊಳ್ಳಲು ಮಾತ್ರ ಇನ್ನುಮೇಲೆ ಸಾಧ್ಯವಿಲ್ಲ. ತಿಳಿಯಿತೆ? ಹೋಗು! ಕೆಟ್ಟಹುಡುಗಿ - ಹೊರಡು - ವಿದ್ಯಾನಿಧಿಗಳೆ! ತಾವು ನಿಶ್ಚಿಂತರಾಗಿರಿ. ಪುನಃ ಭೇಟಮಾಡಿಕೊಳ್ಳೋಣ - ಸ್ವಲ್ಪ ಸುಮ್ಮನಿರಿ ಪುನಃ ಖಂಡಿತವಾಗಿ ಭೇಟಿ ತೆಗೆದುಕೊಳ್ಳುತ್ತೇನೆ."

ಪುಷ್ಪಲತೆಯು ಗಾಬರಿಯಿಂದಲೂ ನಿರಾಶೆಯಿಂದಲೂ ತನ್ನ ಪ್ರಿಯ

ತಮನ ಕಡೆಗೆ ನೋಡಿದಳು. ತಟ್ಟನೆ ಅವಳಿಗೆ ಯೋಚನೆಯೊಂದು ಹೊಳೆಯಿತು. ಅವಳು ಬಾಗಿಲಬಳಿಗೆ ಓಡಿಹೋಗಿ, "ಕುಮುದಚಂದ್ರ ಬಾಬುಗಳೇ! ಎಲ್ಲವೂ ಮುಗಿದಂತೇನೂ ಇಲ್ಲ. ನನ್ನ ಮೇಲೆ ಭರವಸೆಯಿಡಿ" ಎಂದು ಹೇಳಿದಳು. ಬಳಿಕ ಗೊಣಗುತ್ತ ತನ್ನ ತಂದೆಯೊಡನೆ ಹೊರಟುಹೋದಳು

ಕುಮುದಚಂದ್ರನು ಕಂಬಿಗಳನ್ನು ಹಿಡಿದಿದ್ದವನು ಮೆಲ್ಲನೆ ಅವುಗಳನ್ನು ಬಿಟ್ಟನು. ಅವನ ತಲೆಯು ಭಾರವಾಗಿತ್ತು. ಕಣ್ಣುಗಳು ತಮ್ಮ ಸ್ಥಾನವನ್ನು ಬಿಟ್ಟು ಹೊರಗಡೆ ಬರುವಂತಿದ್ದುವು. ಅವನು ಮೆಲ್ಲನೆ, "ಕದ್ದಿದ್ದಾರೆ! ನನ್ನ ಪುಷ್ಪವನ್ನು ಕದ್ದಿದ್ದಾರೆ!" ಎಂದು ಗೊಣಗುತ್ತ ಧೊಪ್ಪನೆ ನೆಲದಮೇಲೆ ಬಿದ್ದನು

* * * *

ಈ ವೇಳೆಗೆ ವಿಷಕಂಠನು ಕಾರಾಗೃಹವನ್ನು ಬಿಟ್ಟು ಹೊರಟುಹೋಗಿದ್ದನು. ಪುಷ್ಪಲತೆಯು ತೆಗೆದುಕೊಂಡುಬಂದ ಬಾಗಿಲಿನ ಮುಖಾಂತರವೇ ಅವನೂ ಹೊರಬಿದ್ದನು. ಅವನು ತೆಳುವಾದ ಬಟ್ಟೆಯೊಂದರಲ್ಲಿ ಕರಿಯ ಪುಷ್ಪದ ಸಸಿಯನ್ನು ಪುಷ್ಪಸಹಿತವಾಗಿ ಸುತ್ತಿ ಗಾಡಿಯೊಂದನ್ನು ಹತ್ತಿದನು. ಗಾಡಿಯನ್ನವನು ಮೊದಲೇ ಸಿದ್ಧಪಡಿಸಿದ್ದನು. ಹೋಗುವಾಗ ಕಾಳೀಚರಣನಿಗೆ ಹೇಳಿಹೋಗುವ ಹವ್ಯಾಸಕ್ಕೆ ಅವನು ಹೋಗಲಿಲ್ಲ.

ಅವನು ಪುಷ್ಪಸಹಿತನಾಗಿದ್ದುದರಿಂದ ಬೇಗಬೇಗನೆ ಹೋಗಲಾಗಲಿಲ್ಲ ಆದುದರಿಂದ ಅವನು ದಾರಿಯಲ್ಲಿದ್ದ ಹಳ್ಳಿಯೊಂದರಲ್ಲಿ ಒಂದು ಸಣ್ಣ ಪೆಟ್ಟಿಗೆಯನ್ನು ತೆಗೆದುಕೊಂಡನು. ಅದರಲ್ಲಿ ಸುತ್ತಲೂ ಹಾವಸೆಯನ್ನು ಹರಡಿ ಟ್ಯೂಲಿಪ್‌ಸಸಿಯನ್ನು ಮಧ್ಯೆ ಇಟ್ಟನು. ಹೂವಿನ ಮೇಲೆ ಈಗ ಭಾರವು ಬೀಳದಂತಾಯಿತು. ಮೇಲಿನಿಂದ ಗಾಳಿಯೂ ಅದರಮೇಲೆ ಬೀಸುವಂತಾಯಿತು ವಿಷಕಂಠನು ಅತಿವೇಗವಾಗಿ ಗಾಡಿಯಲ್ಲಿ ಹೋಗಲನುಕೂಲವಾಯಿತು.

ವಿಷಕಂಠನು ಮರುದಿನ ಬೆಳಗ್ಗೆ ಕಲ್ಯಾಣನಗರಿಯನ್ನು ಸೇರಿದನು. ಆಯಾಸಗೊಂಡಿದ್ದರೂ ವಿಜಯಿಯಾದುದಕ್ಕಾಗಿ ಅವನು ಬಹಳ ಸಂತೋಷದಿಂದಿದ್ದನು. ಕಳ್ಳತನದ ಕುರುಹುಗಳೆಲ್ಲವನ್ನೂ ನಿರ್ಮೂಲ ಮಾಡುವು

ದಕ್ಕಾಗಿ ಮೊದಲಿದ್ದ ಪುಷ್ಪಕುಂಡವನ್ನು ಅವನು ಒಡೆದುಹಾಕಿದನು. ಬಳಿಕ ಅದನ್ನು ಬೇರೊಂದು ಪುಷ್ಪಕುಂಡದಲ್ಲಿ ನೆಟ್ಟನು. ಮೊದಲನೆಯದರ ಚೂರುಗಳನ್ನು ನದಿಯಲ್ಲಿ ಹಾಕಿದನು.

ಅವನು ಟ್ಯೂಲಿಪ್‌ಸಂಘದ ಅಧ್ಯಕ್ಷನಿಗೆ ಒಂದು ಪತ್ರವನ್ನು ಬರೆದು ತಾನು ಕರಿಯಪುಷ್ಪವೊಂದನ್ನು ಬೆಳೆಸಿ ತಂದಿರುವುದಾಗಿ ತಿಳಿಸಿದನು. ಪುಷ್ಪವು ಸರ್ವವಿಧದಲ್ಲಿಯೂ ಸುರಕ್ಷಿತವಾಗಿರುವುದೆಂದು ನಿರ್ಧರಿಸಿಕೊಂಡು ಕಲ್ಯಾಣನಗರಿಯ ಹೋಟಲೊಂದರಲ್ಲಿ ನಿಂತು ಮುಂದೇನಾಗುವುದೆಂದು ನೋಡಲು ಕಾಯತೊಡಗಿದನು.

## ಪಂಚವಿಂಶತಿ ಪರಿಚ್ಛೇದ

### ಅಧ್ಯಕ್ಷ ರವಿವರ್ಮ ಮಹಾಶಯ

ಪುಷ್ಪಲತೆಯು ಕುಮುದಚಂದ್ರನನ್ನು ಬಿಟ್ಟು ಹೊರಡುವಾಗಲೇ ತನ್ನ ಕರ್ತವ್ಯವನ್ನು ನಿರ್ಧರಿಸಿಕೊಂಡಿದ್ದಳು ಕಳುವಾದ ಪುಷ್ಪವನ್ನು ಕುಮುದನಿಗೆ ಹಿಂತಿರುಗಿಸಬೇಕೆಂದೂ, ಅದಸಾಧ್ಯವಾದರೆ ಅವನನ್ನು ಪುನಃ ನೋಡಲೇ ಬಾರದೆಂದೂ ಅವಳು ನಿರ್ಧರಿಸಿದ್ದಳು. ಅವಳು ಬಂದಿಯ ನಿರಾಶಾಭಾವನೆಯನ್ನು ಕಂಡಿದ್ದಳು. ಅದರ ಕಾರಣವನ್ನೂ ಅರಿತಿದ್ದಳು. ಅದಕ್ಕಾಗಿ ಸಮಾಧಾನವನ್ನು ಹೇಳುವುದು ನಿಷ್ಪ್ರಯೋಜನವೆಂದೂ ಅವಳಿಗೆ ತಿಳಿದಿದ್ದಿತು.

ಈಗ ಅವರಿಬ್ಬರೂ ಒಟ್ಟಿಗೆ ನೇರುವಂತಿರಲಿಲ್ಲ ಕಾಳೀಚರಣನಿಗೆ ಅವರ ಪ್ರೇಮವೂ ಅವರ ರಹಸ್ಯ ಭೇಟಿಗಳೂ ತಿಳಿದುಹೋಗಿದ್ದುವು ಕುಮುದಚಂದ್ರನು ಯಾವ ಆಸಯಿಂದ ಏಳು ವರ್ಷಗಳವರೆಗೆ ಜೀವಿಸಿದ್ದನೋ ಆ ಆಸೆಯೂ ಈಗ ಮಣ್ಣುಗೂಡಿದಂತಾಗಿದ್ದಿತು. ಪುಷ್ಪಲತೆಯೂ ಖಿನ್ನಳಾಗಿದ್ದುದು ನಿಜ. ಆದರೆ ಆಪತ್ಸಮಯದಲ್ಲಿ ಧೈರ್ಯಗೊಂಡು ಆ ಆಪತ್ತನ್ನೇ ತನ್ನ ಶಕ್ತಿಯಂತೆ ಉಪಯೋಗಿಸಿಕೊಳ್ಳುವ ಬಲವು ಅವಳಲ್ಲಿದ್ದಿತು ಆದಕ್ಕಾಗಿ ಅವಳು ಸರಸರನೆ ತನ್ನ ಕಿರುಮನೆಗೆ ಹೋದಳು. ತಾನು ಮೋಸಹೋಗಿರಬಹುದೆಂದು ಶಂಕಿಸಿ ಪುನಃ ಪುಷ್ಪವನ್ನು

ಕೊಟಡಿಯಲ್ಲೆಲ್ಲಾ ಹುಡುಕಿದಳು. ಆದರೆ ಅವಳ ಅನ್ವೇಷಣೆಯು ಫಲಕಾರಿಯಾಗಲಿಲ್ಲ. ಪುಷ್ಪವು ನಿಜವಾಗಿ ಅಪಹರಿಸಲ್ಪಟ್ಟಿದ್ದಿತು.

ಪುಷ್ಪಲತೆಯು ಪ್ರಯಾಣಕ್ಕೆ ಬೇಕಾಗುವ ಮುಖ್ಯವಸ್ತುಗಳನ್ನು ತೆಗೆದುಕೊಂಡಳು. ಹಾಗೆಯೇ ತನ್ನ ಸರ್ವಸಂಪತ್ತಾದ ಮುನ್ನೂರು ರೂಪಾಯಿಗಳನ್ನು ತೆಗೆದುಕೊಂಡಳು ತನ್ನ ಬಟ್ಟೆಗಳ ಮಧ್ಯೆ ಇಟ್ಟಿದ್ದ ಮೂರನೆಯ ಸಸಿಯನ್ನು ತೆಗೆದುಕೊಂಡು ತನ್ನ ವಕ್ಷಸ್ಥಲದಲ್ಲಿಟ್ಟು ಕೊಂಡಳು. ಬಳಿಕ ತನ್ನ ಕಿರುಮನೆಗೆ ಎರಡುಬಾರಿ ಬಿಯಗವನ್ನು ಹಾಕಿ ಭದ್ರಪಡಿಸಿದಳು. ಆ ಕಿರುಮನೆಗೆ ಎರಡು ಕಡೆಗಳಿಂದಲೂ ಬಿಯಗವನ್ನು ಹಾಕುವಂತಿದ್ದುದರಿಂದ ಅವಳು ಒಳಗೆ ಇಲ್ಲದಿರುವುದನ್ನು ತಿಳಿಯುವುದು ನಿಧಾನವಾಗುತ್ತಿದ್ದಿತು. ಅದನ್ನು ಯೋಚಿಸಿಯೇ ಅವಳು ಹಾಗೆ ಭದ್ರ ಪಡಿಸಿದ್ದಳು. ಒಡನೆಯೇ ಅವಳು ಬೇಗಬೇಗನೆ ಹೊರಟು ವಿಷಕಂಠನು ಒಂದು ಗಂಟೆಗೆ ಮುಂಚೆ ಪಾರಾಗಿಹೋಗಿದ್ದ ಬಾಗಿಲ ಮೂಲಕವೇ ತಾನೂ ಕಾರಾಗೃಹವನ್ನು ತ್ಯಜಿಸಿ ನಡೆದಳು.

ಅವಳು ಸಮೀಪದಲ್ಲಿದ್ದ ಗಾಡಿಯವನೊಬ್ಬನ ಬಳಿಗೆ ಹೋದಳು. ಅವನ ಬಳಿ ಇದ್ದುದು ಒಂದೇ ಗಾಡಿ. ಆ ಬಂಡಿಯನ್ನು ವಿಷಕಂಠನು ತೆಗೆದುಕೊಂಡು ಹೋಗಿದ್ದನು. ಅದರಿಂದ ಅವಳಿಗೆ ಬಂಡಿಯಾವುದೂ ದೊರೆಯಲಿಲ್ಲ ಅವಳು ಕುದುರೆಯೊಂದನ್ನು ಬಂಡಿಯವನಿಂದ ತೆಗೆದು ಕೊಂಡು ಹೊರಟಳು. ತಾನು ಮೊದಲೇ ಕಳುಹಿದ್ದ ದೂತನನ್ನು ಮೊದಲು ಕಂಡುಹಿಡಿಯಬೇಕೆಂದು ಅವಳು ಬೇಗಬೇಗನೆ ಹೊರಟಳು. ಅವನು ಸಿಕ್ಕರೆ ತನಗವನು ದಾರಿತೋರಿಸಬಹುದೆಂದೂ ಹಾಗೆಯೇ ತನ್ನ ರಕ್ಷಕ ನಾಗಿ ನಿಲ್ಲಬಹುದೆಂದೂ ಅವಳು ಯೋಚಿಸಿದ್ದಳು.

ಪುಷ್ಪಲತೆಯು ಮೂರು ನಾಲ್ಕು ಮೈಲಿಗಳಷ್ಟು ದೂರ ಹೋಗುವಷ್ಟ ರಲ್ಲಿ ಅವಳ ದೂತನು ಸಿಕ್ಕಿದನು. ಅವನು ತನ್ನ ಪತ್ರದ ಅಮೂಲ್ಯತೆ ಯನ್ನು ಅರಿತಿರಲಿಲ್ಲ. ಆದರೂ ಅವನು ಅದಷ್ಟು ಬೇಗಬೇಗನೆ ನಡೆ ದಿದ್ದನು. ಸುಮಾರು ಒಂದು ಗಂಟೆಯು ಕಳೆಯುವುದಕ್ಕೆ ಮೊದಲೇ ಮೂರು ನಾಲ್ಕು ಮೈಲಿಗಳಿಗಿಂತ ಹೆಚ್ಚಾಗಿ ನಡೆದಿದ್ದನು

ಪುಷ್ಪಲತೆಯು ಅವನ ಬಳಿ ಇದ್ದ ಪತ್ರವನ್ನು ತೆಗೆದುಕೊಂಡಳು.

ಈಗ ಅದು ನಿಷ್ಪ್ರಯೋಜಕವಾಗಿದ್ದಿತು. ಅವಳು ತನ್ನ ದೂತನಿಗೆ ಎಲ್ಲ ವನ್ನೂ ವಿಶದಪಡಿಸಿ ತನಗವನು ಮಾಡಿಕೊಡಬೇಕಾದ ಕಾರ್ಯಗಳನ್ನು ವಿವರಿಸಿದಳು. ಅವನು ಅವಳು ಹೇಳಿದಂತೆ ಎಲ್ಲ ಕೆಲಸಗಳನ್ನು ಮಾಡುವು ದಾಗಿ ಹೇಳಿದನು. ಹೀಗಾಗಿ ಕುದುರೆಯ ಜತೆಯಲ್ಲಿಯೇ ಅವನೂ ನಡೆದು ಹೊರಟನು. ಸುಮಾರು ಐದುಗಂಟೆಗಳ ಕಾಲ ಅವರು ಪ್ರಯಾಣ ಮಾಡಿ ಇಪ್ಪತ್ತುನಾಲ್ಕು ಮೈಲಿಗಳಷ್ಟು ದೂರ ಹೋದರು. ಆ ಸಮಯ ದಲ್ಲಿ ಪುಷ್ಪಲತೆಯು ಕಾರಾಗಾರದ ಭವನದಲ್ಲಿಲ್ಲದಿದ್ದುದು ಕಾಳೀಚರಣನಿ ಗಿನ್ನೂ ತಿಳಿದೇ ಇರಲಿಲ್ಲ.

* * * *

ಕಾಳೀಚರಣನು ಅತಿಕ್ರೂರಿಯೂ ಅತಿಮತ್ಸರವುಳ್ಳವನೂ ಆಗಿದ್ದುದರಿಂದ ಪುತ್ರಿಯ ಹೃದಯದಲ್ಲಿ ಎಂತಹ ಭೀತಿಯುತ್ಪನ್ನಮಾಡಿದೆ ನೆಂದವನು ಹಿಗ್ಗುತ್ತಿದ್ದನು ಅವನು ತನ್ನ ಸ್ನೇಹಿತ ನಿರಂಜನನಿಗೆ ಅತಿ ಸಂತೋಷಕರವಾದ ಕತೆಯನ್ನು ಹೇಳುವುದಾಗಿ ಆನಂದಪಡುತ್ತಿದ್ದ ಸಮಯದಲ್ಲಿ ಆ ಮಿತ್ರನು ಕಲ್ಯಾಣನಗರಿಯ ದಾರಿಯಲ್ಲಿದ್ದನು. ಅವನ ಕುದುರೆಗಳು ವೇಗದಿಂದ ಹೊರಟಿದ್ದುವಾಗಿ ಅವನು ಪುಷ್ಪಲತೆಗಿಂತ ಹನ್ನೆರಡು ಮೈಲಿಗಳಷ್ಟು ಹೆಚ್ಚಾಗಿ ಮುಂದುವರಿದಿದ್ದನು.

ಪ್ರೀತಿಸುತ್ತಿದ್ದ ತಂದೆಯು ಕಿರುಮನೆಯಲ್ಲಿದ್ದ ಮಗಳ ಅಳುವನ್ನು ನೆನೆಸಿಕೊಂಡು ಹಿಗ್ಗುತ್ತಿದ್ದಾಗ ವಾಸ್ತವವಾಗಿ ಅವಳೂ ಕಲ್ಯಾಣನಗರಿಯ ಕಡೆಗೆ ನಡೆದಿದ್ದಳು.

ಹೀಗಾಗಿ ಕುಮುದಚಂದ್ರನೊಬ್ಬನು ಮಾತ್ರ ಕಾಳೀಚರಣನಿಗೆ ಮೋಸಮಾಡದೆ ಅವನು ಯೋಚಿಸಿದಂತೆಯೇ ತನ್ನ ಸ್ಥಾನದಲ್ಲಿದ್ದನು.

ಪುಷ್ಪವನ್ನು ಬೆಳಿಸಲು ಪ್ರಾರಂಭಿಸಿದ ಮೊದಲ್ಗೊಂಡು ಪುಷ್ಪಲತೆಯು ತನ್ನ ಪಿತನೊಡನೆ ಹೆಚ್ಚಾಗಿರುತ್ತಿರಲಿಲ್ಲ. ಊಟದ ಸಮಯದಲ್ಲಿ ಮಾತ್ರ ಅವನನ್ನು ನೋಡುತ್ತಿದ್ದಳು. ಹೀಗಾಗಿ ಪುಷ್ಪಲತೆಯು ಊಟದವೇಳೆ ಯಲ್ಲಿಯೂ ಬಾರದಿದ್ದುದನ್ನು ನೋಡಿ ಕಾಳೀಚರಣನು ಸ್ವಲ್ಪ ಯೋಚಿ ಸುತ್ತೆ ಇವಳೇಕೆ ಇಷ್ಟೊಂದು ದುಃಖಪಡುತ್ತಿರುವಳೆಂದುಕೊಂಡನು. ಅವನು ತನ್ನ ಅನುಚರರಲ್ಲೊಬ್ಬನನ್ನು ಪುಷ್ಪಲತೆಯ ಕಿರುಮನೆಯ

ಬಳಿಗೆ ಕಳುಹಿದನು ಅವನು ಹಿಂತಿರುಗಿ ಬಂದು, ಒಳಗಿನಿಂದ ಅವಳು ಕಿರುಮನೆಯ ಬಾಗಿಲನ್ನು ಹಾಕಿಬಿಟ್ಟಿರುವಳೆಂದೂ, ಎಷ್ಟು ಕೂಗಿ ಕರೆದರೂ ಉತ್ತರ ಕೊಡಲಿಲ್ಲವೆಂದೂ ಹೇಳಿದನು. ಕಾಳೀಚರಣನು ತಾನೇ ಸ್ವಂತ ವಾಗಿ ಹೋಗಿ ಗಟ್ಟಿಯಾಗಿ ಬಾಗಿಲು ತಟ್ಟಿದನು. ಪುಷ್ಪಲತೆಯು ಉತ್ತರ ಕೊಡಲಿಲ್ಲ.

ಕಾರಾಗೃಹದ ಕಮ್ಮಾರನನ್ನು ಕಾಳೀಚರಣನು ಕರೆಕಳುಹಿದನು. ಅವನು ಬಾಗಿಲ ಬಿಯಗವನ್ನು ತೆಗೆದನು ಪುಷ್ಪಲತೆಗೆ ಪುಷ್ಪವು ಹೇಗೆ ಸಿಕ್ಕಲಿಲ್ಲವೋ ಹಾಗೆಯೇ ಕಾಳೀಚರಣನಿಗೆ ಪುಷ್ಪಲತೆಯು ಸಿಕ್ಕಲಿಲ್ಲ

ಆ ಸಮಯದಲ್ಲವಳು ದಾರಿಯ ಮಧ್ಯೆ ದೂತನೊಡನೆ ಹೋಗು ತ್ತಿದ್ದಳು.

ಕಾಳೀಚರಣನು ಅಡಿಗೆಯ ಮನೆಯಲ್ಲಿಯೂ ಉದ್ಯಾನದಲ್ಲಿಯೂ ಹುಡುಕಿದನು ಪುಷ್ಪಲತೆಯು ಸಿಕ್ಕಲಿಲ್ಲ. ನೆರೆಹೊರೆಯವರಲ್ಲಿ ವಿಚಾರಿಸ ಲಾಗಿ ಅವಳು ಕುದುರೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು, ಎಲ್ಲಿ ಹೋಗುವುದೆಂದಾರಿಗೂ ಹೇಳದೆ ಅತಿಸಾಹಸಿಯಂತೆ ಹೊರಟಿದ್ದುದು ತಿಳಿದುಬಂದುದು. ಆಗವನ ಕೋಪಕ್ಕೆ ಮಿತಿಯಿಲ್ಲವಾಯಿತು.

ಅವನು ನೇರವಾಗಿ ಕುಮುದಚಂದ್ರನ ಕೊಟಡಿಗೆ ಹೋಗಿ ತನ್ನ ಕ್ರೋಧವೆಲ್ಲವನ್ನೂ ಅವನ ಮೇಲೆ ತಿರುಗಿಸಿದನು. ಅವನನ್ನು ಬೈದು ಹೆದರಿಸಿದನು. ಅವನ ಕಾರಾಗೃಹದಲ್ಲಿದ್ದ ಪದಾರ್ಥಗಳೆಲ್ಲವನ್ನೂ ಉರುಳಿ ಸಿದನು. ಅವನಿಗೆ ಹೆಚ್ಚು ಕಿರುಕುಳ ಕೊಡುವುದಾಗಿಯೂ ಅನ್ನನೀರಿಲ್ಲ ದಂತೆ ಮಾಡುವುದಾಗಿಯೂ ಛಡಿ ಏಟುಗಳನ್ನು ಕೊಡುವುದಾಗಿಯೂ ಭಾಷೆಕೊಟ್ಟನು. ಕುಮುದಚಂದ್ರನಿಗೆ ಜೈಲರನು ಹೇಳಿದುದಾವುದೂ ಕೇಳಿಸಿದಂತೆಯೇ ಕಾಣಬರಲಿಲ್ಲ. ಭಯವಾಗಲಿ ಆಸಕ್ತಿಯಾಗಲಿ ಇಲ್ಲ ದವನಂತೆ ಅವನು ಮೌನವಾಗಿ ಅಲುಗಾಡದೆ ಕುಳಿತಿದ್ದನು.

ಪುಷ್ಪಲತೆಯನ್ನು ಎಲ್ಲಕಡೆಗಳಲ್ಲಿಯೂ ಹುಡುಕಿ ಕಾಳೀಚರಣನು ನಿರಂಜನನನ್ನು ಹುಡುಕಿದನು. ಅವನೂ ಸಿಕ್ಕಲಿಲ್ಲವಾಗಿ ಪುಷ್ಪಲತೆಯೊಡನೆ ಅವನು ಓಡಿಹೋಗಿರಬೇಕೆಂದು ಜೈಲರನು ಸಿದ್ಧಾಂತಮಾಡಿಕೊಂಡನು.

* * * *

ಪುಷ್ಪಲತೆಯು ದಾರಿಯಲ್ಲಿ ಎರಡುಗಂಟೆಗಳ ಕಾಲ ವಿಶ್ರಮಿಸಿ ಕೊಂಡು ಪುನಃ ಪ್ರಯಾಣಮಾಡಿದಳು. ಮರುದಿನ ಬೆಳಗ್ಗೆ ಅವಳು ಕಲ್ಯಾಣನಗರಿಯನ್ನು ಸೇರಿದಳು. ಆ ವೇಳೆಗೆ ವಿಷಕಂಠನು ಆ ಪಟ್ಟಣ ವನ್ನು ಸೇರಿ ನಾಲ್ಕುಗಂಟೆಗಳು ಕಳೆದಿದ್ದುವು

ಪುಷ್ಪಲತೆಯು ನೇರವಾಗಿ ಟ್ಯೂಲಿಪ್‌ಸಂಘದ ಅಧ್ಯಕ್ಷನ ಬಳಿಗೆ ಹೋದಳು. ಅವನು ಸಂಘದ ಸಮಿತಿಗೆ ರಿಪೋರ್ಟನ್ನು ಬರೆಯುತ್ತ ಕುಳಿತಿದ್ದನು. ಪುಷ್ಪಲತೆಯು ಮೊದಲು ತನ್ನ ಹೆಸರನ್ನು ಹೇಳಿ ಕಳುಹಿದಳು ಹೆಸರು ಮನೋಹರವಾಗಿದ್ದಿತಾದರೂ ಅಧ್ಯಕ್ಷನಿಗೆ ಅಪರಿಚಿತ ವಾದುದಾಗಿದ್ದಿತು ಆದುದರಿಂದ ಅವನು ಪ್ರವೇಶಕ್ಕೆ ಅನುಮತಿಯ ನ್ನೀಯಲಿಲ್ಲ ಪುಷ್ಪಲತೆಯು ಯಾವ ಕಷ್ಟಕ್ಕಾಗಲಿ, ಅಪಾಯಕ್ಕಾಗಲಿ, ಬೈಗಳಿಗಾಗಲಿ ಹಿಂಜರಿಯಬಾರದೆಂದು ನಿರ್ಧರಿಸಿದ್ದಳಾಗಿ ತಾನು ಕರಿಯ ಟ್ಯೂಲಿಪ್‌ಪುಷ್ಪದ ವಿಚಾರವಾಗಿ ಮಾತನಾಡಲು ಬಂದಿರುವುದಾಗಿ ಹೇಳಿ ಕಳುಹಿದಳು ಒಡನೆಯೇ ಅಧ್ಯಕ್ಷನ ಕಿರುಮನೆಯನ್ನವಳು ಪ್ರವೇಶಿಸಲು ಅನುಕೂಲವಾಯಿತು

ಅವನು ಮರ್ಯಾದೆಯಿಂದೆದ್ದು ಅವಳನ್ನು ಆದರದಿಂದ ಬರಮಾಡಿ ಕೊಂಡು, "ತಾಯಿ! ನೀನು ಕರಿಯಪುಷ್ಪದ ವಿಚಾರವಾಗಿ ಮಾತನಾಡಲು ಬಂದೆಯೇನಮ್ಮಾ?" ಎಂದು ಕೇಳಿದನು

ಪುಷ್ಪಲತೆ—ಅಹುದು ಸ್ವಾಮಿ! ಅದರ ವಿಚಾರವಾಗಿ ಮಾತನಾಡು ವುದಕ್ಕಾದರೂ ಸಮಯ ಸಿಗಲೆಂದು ಬಂದೆನು

"ಹಾಗಾದರೆ ಪುಷ್ಪವು ಸೌಖ್ಯವಾಗಿದೆಯಷ್ಟೆ?"

"ಅಯ್ಯೋ! ಅದನ್ನೇ ಅರಿಯಲಾರದವಳಾಗಿದ್ದೇನೆ, ಸ್ವಾಮಿ!"

"ಅದೇಕೆ? ಅದಕ್ಕೇನಾದರೂ ಅನಾಹುತವುಂಟಾಯಿತೇನು?"

"ದೊಡ್ಡ ಅನಾಹುತವಾಗಿದೆ ಸ್ವಾಮಿ! ಆದರೂ ಅದಕ್ಕೇನೂ ಆಗಿಲ್ಲ ವೆನ್ನಬಹುದು! ನನಗೆ ಸರ್ವನಾಶವುಂಟಾಗಿದೆ"

"ಅಂತಹುದೇನಾಗಿದೆ?"

"ನನ್ನಿಂದಾರೋ ಅದನ್ನು ಕದ್ದಿದ್ದಾರೆ"

"ಕದ್ದಿದ್ದಾರೆಯೆ! ಕರಿಯಪುಷ್ಪವನ್ನು ಕದ್ದಿರುವರೆ?"

"ಅಹುದು, ಸ್ವಾಮಿ!"

"ಕಳ್ಳನನ್ನು ಬಲ್ಲೆಯಾ?"

"ನನಗೆ ಗುಮಾನಿಯೇನೋ ಇದೆ. ಆದರೂ ಈಗಾಗಲೇ ನಾನಾರನ್ನೂ ಆಕ್ಷೇಪಿಸುವಂತಿಲ್ಲ."

"ಈ ವಿಷಯವನ್ನು ಸುಲಭವಾಗಿ ತಿಳಿಯಬಹುದು."

"ಅದು ಹೇಗೆ?"

"ಅದು ನಿನ್ನ ಬಳಿ ಇದ್ದು ಅಪಹರಿಸಲ್ಪಟ್ಟಿದ್ದರೆ—ಕಳ್ಳನು ಬಹಳ ದೂರ ಹೋಗಿರಲಾರನು."

"ಹೋಗಿರಬಾರದೇಕೆ?"

"ಏಕೆಂದರೆ ಈಗ ಸುಮಾರು ಎರಡುಗಂಟೆಗಳ ಹಿಂದೆ ಕರಿಯಪುಷ್ಪವನ್ನು ನಾನೇ ನೋಡಿದ್ದೆನು."

"ತಾವೇ ಕರಿಯಪುಷ್ಪವನ್ನು ನೋಡಿದಿರಾ?"

"ನಿನ್ನನ್ನೀಗ ನೋಡುತ್ತಿರುವಂತೆಯೇ ಅದನ್ನೂ ನೋಡಿದೆನು"

"ಅದೆಲ್ಲಿದೆ?"

"ನಿನ್ನೊಡೆಯನ ಬಳಿ ಇದೆ."

"ನನ್ನೊಡೆಯನೆ?"

"ಅಹುದು. ನೀನು ವಿಷಕಂಠಶರ್ಮರ ಬಳಿ ಕೆಲಸಮಾಡುವೆಯಲ್ಲವೆ?"

"ಯಾರು? ನಾನೆ?"

"ಅಹುದು. ನೀನು"

"ಸ್ವಾಮಿ! ಹಾಗಾದರೆ ನಾನಾರೆಂದು ತಿಳಿದುಕೊಂಡಿರುವಿರಿ?"

"ನಾನಾರೆಂದು ತಿಳಿದುಕೊಂಡಿರುವೆ, ಮಗು?"

"ಸ್ವಾಮಿ! ನಾನು ಸರಿಯಾಗಿ ತಿಳಿದಿರುವೆನಾದರೆ–ತಾವೇ ರವಿವರ್ಮ ಮಹಾಶಯರು–ಟ್ಯೂಲಿಪ್‌ಸಂಘದ ಅಧ್ಯಕ್ಷರು–ಕಲ್ಯಾಣ ನಗರಿಯ ಪೌರಸಭಾಧ್ಯಕ್ಷರು."

"ಹಾಗಾದರೆ ಈಗತಾನೆ ನೀನು ಹೇಳಿದುದೇನು?"

"ನನ್ನ ಪುಷ್ಪವು ಅಪಹರಿಸಲ್ಪಟ್ಟಿದೆಯೆಂದು ಹೇಳಿದೆನು ಸ್ವಾಮಿ!"

"ಹಾಗಾದರೆ ನಿನ್ನ ಪುಷ್ಪವೇ ವಿಷಕಂಠಶರ್ಮರ ಪುಷ್ಪವು ಮಗು! ನಿನಗೆ ಸರಿಯಾಗಿ ಹೇಳಲು ಬಾರದು. ಪುಷ್ಪವನ್ನು ನಿನ್ನಿಂದ ಯಾರೂ ಅಪಹರಿಸಿಲ್ಲ. ವಿಷಕಂಠಶರ್ಮರ ಬಳಿಯಿಂದ ಅಪಹರಿಸಿದ್ದಾರೆ."

"ಸ್ವಾಮಿ! ಈ ವಿಷಕಂಠಶರ್ಮರಾರೋ ನಾನರಿಯೆ. ಅವರ ಹೆಸರನ್ನು ಈಗಲೇ ಮೊದಲನೆಯ ಬಾರಿ ಕೇಳುತ್ತಿದ್ದೇನೆ"

"ವಿಷಕಂಠಶರ್ಮರಾರೆಂದರಿಯೆಯಾ? ಹಾಗಾದರೆ ನಿನ್ನ ಬಳಿ ಬೇರೊಂದು ಕರಿಯಪುಷ್ಪವಿತ್ತೇನು?"

ಪುಷ್ಪಲತೆಯು ನಡುಗುತ್ತ, "ನನ್ನ ಪುಷ್ಪವಲ್ಲದೆ ಬೇರೊಂದು ಇದೆಯೇನು?" ಎಂದಳು.

"ಇದೆ ಅದೇ ವಿಷಕಂಠಶರ್ಮರದು"

"ಅದು ಹೇಗಿದೆ?"

"ಕಪ್ಪಗಿದೆ"

"ಬೇರೆ ಬಣ್ಣದ ಸೋಂಕೇ ಇಲ್ಲವೆ?"

"ಬೇರೆ ಬಣ್ಣದ ಸೋಂಕೇ ಇಲ್ಲ"

"ಇಲ್ಲಿಯೇ ಅದನ್ನು ಇರಿಸಿಕೊಂಡಿರುವಿರಾ?"

"ಇಲ್ಲ ಇಲ್ಲಿಯೇ ಇಷ್ಟರಲ್ಲಿ ಅದನ್ನಿಡಲಾಗುವುದು. ಸಂಘದ ಸಮಿತಿಯವರ ಮುಂದೆ ಅದನ್ನು ಪ್ರದರ್ಶಿಸಿ ಬಳಿಕ ಅದಕ್ಕೆ ಬಹುಮಾನವನ್ನು ಕೊಡಲಾಗುವುದು"

"ಸ್ವಾಮಿ! ಈ ವಿಷಕಂಠನು – ವಿಷಕಂಠಶರ್ಮನು – ಪುಷ್ಪವು ತನ್ನದೆಂದು ಹೇಳುತ್ತಿರುವಾ ವಿಷಕಂಠನು . . "

"ಅವನು ಅದರ ಯಜಮಾನನಲ್ಲವೇನು?"

"ಅವನು ಬಹಳ ತೆಳ್ಳಗಿರುವನಲ್ಲವೆ?"

"ಅಹುದು."

"ತಲೆಯಲ್ಲಿ ಕೂದಲಿಲ್ಲ, ಅಲ್ಲವೆ?"

"ನಿಜ"

"ಕಣ್ಣುಗಳು ಗುಳಿಬಿದ್ದಿವೆಯಲ್ಲವೆ?"

"ಹಾಗೆಯೇ ಇರಬೇಕು"

"ಕಳವಳಗೊಂಡವನಂತೆ ಶಾಂತಿಹೀನನಂತೆ ಕ್ಷುಬ್ಧನಾದವನಂತಿರುವನಲ್ಲವೆ? ಅವನಿಗೆ ಗೂನುಬೆನ್ನಿಡೆಯಲ್ಲವೆ? ಅವನ ಕಾಲುಗಳು ಹೊರಕ್ಕೆ ಬಾಗಿದಂತಿರುವುವಲ್ಲವೆ?"

"ನಿಜವಾಗಿ ಹೇಳಬೇಕೆಂದರೆ ನೀನು ವಿಷಕಂಠಶರ್ಮರ ವರ್ಣನೆಯನ್ನು ಪೂರ್ಣವಾಗಿ ಮಾಡಿದಂತಾಯಿತು ಮಗು!"

"ಟ್ಯೂಲಿಪ್‌ಸಸಿಯು ಒಂದು ಬಿಳಿಯ ಪುಷ್ಪಕುಂಡದಲ್ಲಿದೆಯಲ್ಲವೆ?"

"ಅದನ್ನು ಹೇಳಲಾರೆ. ಏಕೆಂದರೆ ನಾನು ಪುಷ್ಪವನ್ನು ಚೆನ್ನಾಗಿ ನೋಡಿದೆನು. ಪುಷ್ಪಕುಂಡವನ್ನು ನೋಡಲಿಲ್ಲ!"

"ಸ್ವಾಮಿ! ಅದೇ ನನ್ನ ಪುಷ್ಪ ಸ್ವಾಮಿ! ಅದನ್ನು ನನ್ನಿಂದ ಕದ್ದಿದ್ದಾರೆ. ನೀವದನ್ನು ಹಿಂತಿರುಗಿಸಿ ಕೊಡಬೇಕು."

"ಓಹೋ! ಇದೇನು! ನೀನು ವಿಷಕಂಠಶರ್ಮರ ಟ್ಯೂಲಿಪ್‌ಪುಷ್ಪವನ್ನು ಕೇಳಲು ಬಂದೆಯಾ? ಸರಿ. ನೀನು ಬಹಳ ಧೈರ್ಯಶಾಲಿಯೆಂದು ಹೇಳಲೇಬೇಕು."

ಅದನ್ನು ಕೇಳಿ ಪುಷ್ಪಲತೆಯು ಸ್ವಲ್ಪ ಕೋಪಗೊಂಡವಳಾಗಿ, "ಸ್ವಾಮಿ! ನಾನು ವಿಷಕಂಠಶರ್ಮರ ಪುಷ್ಪವನ್ನು ಕೇಳಲು ಬಂದಿಲ್ಲ. ನನ್ನ ಪುಷ್ಪವನ್ನು ಹಿಂದಿರುಗಿಸಿ ಕೊಡಬೇಕೆಂದು ಕೇಳಲು ಬಂದಿದ್ದೇನೆ" ಎಂದಳು.

"ನಿನ್ನದೆ?"

"ಅಹುದು. ನಾನೇ ನೆಟ್ಟು ಬೆಳಸಿದುದು."

"ಹಾಗಾದರೆ ಸರಿ. ನೀನು ಹೋಗಿ ಹೋಟಲಿನಲ್ಲಿರುವ ವಿಷಕಂಠಶರ್ಮರನ್ನು ನೋಡು. ಅವರ ಬಳಿ ನಿನ್ನ ವಿಷಯವೇನಿದ್ದರೂ ಹೇಳಿ ಸರಿಪಡಿಸಿಕೊ. ಈ ಸಮಸ್ಯೆಯು ಸಾಲೊಮನ್ ದೊರೆಯ ಮುಂದೆ ಬಂದ ಸಮಸ್ಯೆಗಿಂತ ಕಠಿಣವಾದುದಾಗಿದೆ. ನಾನು ಆತನಷ್ಟು ಬುದ್ಧಿವಂತನೆಂದು ಹೇಳಿಕೊಳ್ಳುವಂತೆಯೂ ಇಲ್ಲ. ಕರಿಯ ಪುಷ್ಪವಿರುವ ವಿಚಾರವನ್ನು ನಾನು ನನ್ನ ರಿಪೋರ್ಟಿನಲ್ಲಿ ಬರೆದಿಡುತ್ತೇನೆ. ಅದನ್ನು ಬೆಳಸಿದವರಿಗೆ ಒಂದು ಲಕ್ಷರೂಪಾಯಿಗಳನ್ನು ಕೊಡುವಂತೆ ಶಿಫಾರಸು ಮಾಡುತ್ತೇನೆ. ಹೋಗಿ ಬಾ, ಮಗು, ಹೋಗಿ ಬಾ."

ಪುಷ್ಪಲತೆಯು ಏನೂ ತೋರದವಳಾಗಿ, "ಅಯ್ಯೋ! ಏನು ಮಾಡಲಿ ಸ್ವಾಮಿ!" ಎಂದು ಬೇಡಿಕೊಂಡಳು.

ಅಧ್ಯಕ್ಷನು ಪುನಃ ಹೇಳತೊಡಗಿದನು—"ನೀನಿನ್ನೂ ಯುವತಿಯಾಗಿರುವೆ. ಸುಂದರಿಯಾಗಿರುವೆ ಮಗು! ನೀನು ಒಳ್ಳೆಯವಳಾಗಿರುವೆಯೆಂದು ಭಾವಿಸುತ್ತೇನಾದುದರಿಂದ ನಿನಗೆ ಬುದ್ಧಿವಾದವನ್ನು ಹೇಳುತ್ತೇನೆ ಕೇಳು. ಈ ವಿಷಯದಲ್ಲಿ ಸ್ವಲ್ಪ ಜಾಗರೂಕಳಾಗಿರು. ಕಲ್ಯಾಣನಗರಿಯಲ್ಲಿ ನ್ಯಾಯಾಸ್ಥಾನವೊಂದಿರುವುದು. ಕಾರಾಗೃಹವೂ ಇರುವುದು. ಅಲ್ಲದೆ ಟ್ಯೂಲಿಪ್‌ಪುಷ್ಪಗಳ ಗೌರವವನ್ನು ನಾವು ಬಹಳ ಚೆನ್ನಾಗಿ ಕಾಪಾಡಿಕೊಂಡು ಬರುತ್ತಿದ್ದೇವೆ. ಹೋಗು, ಮಗು! ಹೋಗು. ವಿಷಕಂಠಶರ್ಮರು ಸಮೀಪದಲ್ಲಿರುವ ಹೋಟಲೊಂದರಲ್ಲಿರುವರು. ಅವರನ್ನು ಹೋಗಿ ನೋಡು."

ಅಧ್ಯಕ್ಷನು ಅಷ್ಟು ಹೇಳಿ ತನ್ನ ಲೇಖಣಿಯನ್ನು ತೆಗೆದುಕೊಂಡು ತನ್ನ ರಿಪೋರ್ಟನ್ನು ಪುನಃ ಬರೆಯುತೊಡಗಿದನು.

## ಷಷ್ಠವಿಂಶತಿ ಪರಿಚ್ಛೇದ

### ಟ್ಯೂಲಿಪ್‌ಸಂಘದ ಸದಸ್ಯನೊಬ್ಬನು

ಪುಷ್ಪಲತೆಯು ಪುಷ್ಪವನ್ನು ಪುನಃ ಪಡೆಯುವ ಆಸೆಯುಳ್ಳವಳಾಗಿ ತನ್ನ ದೂತನೊಡನೆ ವಿಷಕಂಠನಿದ್ದ ಹೋಟಲಿನ ಕಡೆಗೆ ನಡೆದಳು. ಅವಳ ದೂತನೊಬ್ಬನೇ ಹನ್ನೆರಡುಜನ ವಿಷಕಂಠರರನ್ನು ಏಕಾಂಗಿಯಾಗಿ ನಿಗ್ರಹಿಸಬಲ್ಲವನಾಗಿದ್ದನು.

ಪ್ರಯಾಣ ಸಮಯದಲ್ಲಿಯೇ ಪುಷ್ಪಲತೆಯು ಎಲ್ಲ ವಿಷಯವನ್ನೂ ದೂತನಿಗೆ ವಿಶದಪಡಿಸಿದ್ದಳು. ಅವನು ಎಲ್ಲಕ್ಕೂ ಸಿದ್ಧನಾಗಿ ನಿಂತು ಜಗಳವಾಡಲು ಕೂಡ ಹಿಂಜರಿಯದವನಾಗಿದ್ದನು. ಆದರೆ ಅಂತಹ ಸಮಯ ಒದಗಿದರೆ ಪುಷ್ಪವನ್ನು ಮಾತ್ರ ಉಳಿಸುವ ಪ್ರಯತ್ನ ಪಡಬೇಕೆಂದು ಪುಷ್ಪಲತೆಯು ಅವನಿಗೆ ಕಟ್ಟಪ್ಪಣೆ ಮಾಡಿದ್ದಳು.

ಪುಷ್ಪಲತೆಯು ಹೋಟಲಿನವರೆಗೆ ಬಂದಳು. ಆದರೆ ಅಲ್ಲಿ

ನಿಂತುಬಿಟ್ಟಳು. ಅವಳು ತಟ್ಟನೆ ಯೋಚಿಸತೊಡಗಿದಳು-"ದೇವರೇ ಗತಿ! ನಾನು ಮಹಾಪರಾಧವೊಂದನ್ನು ಮಾಡಿಬಿಡುತ್ತಿದ್ದೆನು - ಕುಮುದ ಚಂದ್ರರೂ, ಪುಷ್ಪವೂ, ನಾನೂ ಎಲ್ಲರೂ ಸರ್ವನಾಶ ಹೊಂದಿಬಿಡುತ್ತಿದ್ದೆವು. ಈಗಾಗಲೇ ಪುಷ್ಪದ ವಿಷಯವನ್ನು ಪ್ರಕಟನಮಾಡಿಬಿಟ್ಟಿರುವೆನು. ಕೆಲವರಿಗೆ ಈಗಾಗಲೇ ಸಂದೇಹಗಳುತ್ಪನ್ನವಾಗಿರಬೇಕು. ನಾನೆಷ್ಟಾದರೂ ಹೆಂಗಸು ಈ ಪುರುಷರೆಲ್ಲರೂ ನನಗೆ ವಿರೋಧವಾಗಿ ನಿಂತರೆ ಏನು ಮಾಡುವುದು? ಆಗೆನಗೆ ಸರ್ವನಾಶವಾಗಿಹೋಗುವುದು. ನಾನು ನಾಶ ವಾದರೆ ಚಿಂತೆಯಿಲ್ಲ. ಆದರೆ ಕುಮುದಚಂದ್ರರೂ ಟ್ಯೂಲಿಪ್ ಪುಷ್ಪವೂ ನಾಶವಾದರೆ ಗತಿಯೇನು?"

ಅವಳು ಸ್ವಲ್ಪಹೊತ್ತು ಯೋಚಿಸಿ ಪುನಃ ತನ್ನಲ್ಲಿಯೇ ತರ್ಕಮಾಡಿ ಕೊಳ್ಳತೊಡಗಿದಳು — "ಈ ವಿಷಕಂಠಶರ್ಮನ ಬಳಿಗೆ ಹೋಗಿ ಅವನಾರೆಂಬುದನ್ನು ಗುರ್ತಿಸಲಾರದೆಹೋದರೇನುಮಾಡುವುದು? ವಿಷ ಕಂಠನು ನಿರಂಜನನಲ್ಲದೆ ಬೇರೊಬ್ಬ ಟ್ಯೂಲಿಪ್ ಭಕ್ತನಾಗಿದ್ದು ಅವನೂ ಕೃಷ್ಣವರ್ಣದ ಪುಷ್ಪವನ್ನು ಕಂಡುಹಿಡಿದಿದ್ದರೇನುಮಾಡುವುದು? ಅಥವಾ ನನ್ನ ಪುಷ್ಪವು ಬೇರೊಬ್ಬರಾರಿಂದಲೋ ಕದಿಯಲ್ಪಟ್ಟಿದ್ದು ಮೂರನೆಯವನ ಕೈಸೇರಿದ್ದರೇನುಮಾಡುವುದು? ಅವನನ್ನು ಗುರುತಿಸದೆ ಪುಷ್ಪವನ್ನು ಮಾತ್ರ ಗುರುತಿಸಿದರೆ ಅದೇ ನನ್ನ ಹೂವೆಂದು ನಿರ್ಧರಿಸಿ ಹೇಳುವುದು ಹೇಗೆ? ಅಥವಾ ವಿಷಕಂಠನೇ ನಿರಂಜನನೆಂದು ಗುರುತಿಸಿದರೆ ಅದರಿಂದಾ ಗುವುದೇನು? ನಾವು ಒಬ್ಬರೊಡನೊಬ್ಬರು ಜಗಳವಾಡುತ್ತಿರುವಷ್ಟರಲ್ಲಿ ಪುಷ್ಪವು ಸಾಯುವುದು"

ಆ ಸಮಯದಲ್ಲಿ ಕಲ್ಯಾಣನಗರಿಯಲ್ಲಿ ಶಬ್ದಗಳನೇಕವು ಕೇಳಿ ಬರುತ್ತಿದ್ದುವು ಜನಗಳು ಬಹಳವಾಗಿ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು. ಬಾಗಿಲುಗಳನ್ನು ತೆಗೆಯುವ ಶಬ್ದವೂ ಮುಚ್ಚುವ ಶಬ್ದವೂ ಕೇಳಿಬರು ತ್ತಿದ್ದುವು. ಪುಷ್ಪಲತೆಗೆ ಮಾತ್ರ ಈ ಜನಗಳ ಸಡಗರವು ತಿಳಿದಿರಲಿಲ್ಲ ಅವಳು ದೂತನನ್ನು ನೋಡಿ, "ಅಧ್ಯಕ್ಷರ ಬಳಿಗೇ ಹಿಂತಿರುಗಿ ಹೋಗೋಣ" ಎಂದಳು. ಅವನು, ಸರಿ, ನಡೆ ಹೋಗೋಣ ಎಂದು ಉತ್ತರಕೊಟ್ಟನು.

ಅವರು ಸಣ್ಣ ಬೀದಿಯೊಂದರಲ್ಲಿ ಹೊರಟು ನೇರವಾಗಿ ಅಧ್ಯಕ್ಷ

ರವಿವರ್ಮನ ಭವನಕ್ಕೆ ಹೋದರು. ಅವನು ಉತ್ತಮವಾದ ತನ್ನ ಲೇಖಣಿಯಿಂದ ಅತ್ಯುತ್ತಮವಾದ ಬರವಣಿಗೆಯಲ್ಲಿ ರಿಪೋರ್ಟನ್ನು ಬರೆಯುತ್ತಿದ್ದನು.

ದಾರಿಯಲ್ಲೆಲ್ಲರೂ ಕರಿಯಹೂವಿನ ವಿಚಾರವನ್ನೇ ಮಾತನಾಡಿಕೊಳ್ಳುತ್ತಿದ್ದರು. ಅದಕ್ಕೆ ಸಿಗುವ ಲಕ್ಷ ರೂಪಾಯಿಗಳ ಬಹುಮಾನದ ವಿಷಯವನ್ನೂ ಹೇಳುತ್ತಿದ್ದರು. ನಗರದಲ್ಲೆಲ್ಲಾ ಅದರ ವಿಚಾರವು ಕಾಡ್ಗಿಚ್ಚಿನಂತೆ ಹರಡಿದ್ದಿತು.

ಪುಷ್ಪಲತೆಯು ಎರಡನೆಯ ಬಾರಿ ಅಧ್ಯಕ್ಷನ ಬಳಿಗೆ ಹೋಗಲು ಬಹಳ ತೊಂದರೆಪಡಬೇಕಾಯಿತು. ಕರಿಯಪುಷ್ಪದ ಹೆಸರನ್ನು ಹೇಳುತ್ತಲೇ ಪುನಃ ಅವಳಿಗೆ ಒಳಕ್ಕೆ ಬರಲು ಅಪ್ಪಣೆಯು ದೊರೆಯಿತು. ಆದರೆ ಪುನಃ ಪುಷ್ಪಲತೆಯೇ ಬಂದುದನ್ನು ನೋಡುತ್ತಲೇ ರವಿವರ್ಮನ ಕೋಪವು ಮಿತಿಮೀರಿದುದು ಅವಳು ಹುಚ್ಚಳಿರಬೇಕೆಂದವನು ಭಾವಿಸಿಕೊಂಡು ಅವಳನ್ನು ಓಡಿಸಲೆತ್ನಿಸಿದನು ಅವಳು ಕೈ ಮುಗಿಯುತ್ತೆ ಸರಳಸ್ವಭಾವವನ್ನು ಪ್ರಕಟಿಸುತ್ತೆ ಪ್ರಾಮಾಣಿಕತನವನ್ನು ತೋರುತ್ತೆ ಹೇಳತೊಡಗಿದಳು—"ಸ್ವಾಮಿ! ದಯವಿಟ್ಟು ನಾನು ಹೇಳುವುದನ್ನು ಕೇಳಿ. ನನ್ನನ್ನು ಕಳುಹಿಸಬೇಡಿ ನನಗೆ ನ್ಯಾಯವನ್ನು ದೊರಕಿಸಿಕೊಡಲಾರದೆ ಹೋಗುವಿರಾದರೆ, ಕೆಟ್ಟಕಾರ್ಯಕ್ಕೆ ಅನುಯಾಯಿಯಾಗಿ ನಿಂತ ಅಪರಾಧಕ್ಕೆ ತಾವು ದೇವದೇವನ ಮುಂದೆ ಉತ್ತರ ಹೇಳಬೇಕಾಗುವುದು."

ರವಿವರ್ಮನು ಶಾಂತಿಹೀನನಾಗಿ ಕಾಲನ್ನು ಬಲವಾಗಿ ನೆಲದಮೇಲೆ ತುಳಿದನು. ತನ್ನ ಜಂಭವನ್ನು ಪ್ರಕಟಿಸಲೋಸುಗ ಅವನು ರಿಪೋರ್ಟಿನ ರಚನೆಯಲ್ಲಿ ನಿರತನಾಗಿದ್ದನು. ಅವನು ವಿಕೃತಸ್ವರದಿಂದ, "ನನ್ನ ರಿಪೋರ್ಟು!—ರಿಪೋರ್ಟಿನ ಗತಿಯೇನಾಗಬೇಕು!" ಎಂದು ಕೂಗಿಕೊಂಡನು

ಸರಳಸ್ವಭಾವದಿಂದಲೂ ಸತ್ಯದಿಂದಲೂ ದತ್ತವಾದ ದೃಢಮನಸ್ಸಿನಿಂದ ಪುಷ್ಪಲತೆಯು ಪುನಃ ಹೇಳತೊಡಗಿದಳು—"ತಾವು ನನ್ನ ಮಾತನ್ನು ಕೇಳದಿದ್ದರೆ ತಮ್ಮ ರಿಪೋರ್ಟು ಸುಳ್ಳಿನಿಂದ ಕೂಡಿದುದಾಗುವುದು. ಅಲ್ಲದೆ ಕಳ್ಳತನಕ್ಕೆ ಸಹಾಯಮಾಡಿದ ರಿಪೋರ್ಟಾಗುವುದು. ಸ್ವಾಮಿ! ತಾವು

ಹೇಳುವಾ ವಿಶಕಂರಶರ್ಮನನ್ನು ತಮ್ಮ ಮುಂದೆಯೂ ನನ್ನ ಮುಂದೆಯೂ ನಿಲ್ಲುವಂತೆ ಮಾಡಿರಿ. ಅವನೇ ನಿರಂಜನನೆಂದು ನನಗೆ ಖಂಡಿತವಾಗಿ ತಿಳಿದಿದೆ. ಅವನನ್ನಾಗಲಿ ಅವನ ಪುಷ್ಪವನ್ನಾಗಲಿ ನಾನು ಗುರ್ತಿಸ ದಿದ್ದರೆ ಅವನೇ ಹೂವನ್ನು ಹೊಂದಿರಲು ನನ್ನ ಅಭ್ಯಂತರವಿರುವುದಿಲ್ಲ"

"ನೀನು ಹೇಳುವುಹು ಬಹಳ ಚೆನ್ನಾಗಿದೆ."

"ಹಾಗಂದರೇನು?"

"ಅವರನ್ನು ನೀನು ಗುರುತಿಸುವುದರಿಂದ ರುಜುವಾತು ಹೊಂದಿ ದಂತಾಯಿತೇನು?"

"ಸ್ವಾಮಿ! ತಾವೆಷ್ಟಾದರೂ ಪ್ರಾಮಾಣಿಕರು. ಯೋಚಿಸಿನೋಡಿ. ತಾನು ಕಷ್ಟಪಟ್ಟು ಬೆಳೆಸದೆ- ಪುಷ್ಪವನ್ನು ಕದ್ದು ತಂದವನಿಗೆ ತಾವು ಬಹುಮಾನವನ್ನು ಕೊಟ್ಟಿರುವುದು ಎಂದಾದರೊಂದುದಿನ ತಮಗೆ ತಿಳಿದು ಬಂದರೆ ತಮ್ಮ ಮನಸ್ಸು ಸ್ಥಿರವಾಗಿರಬಲ್ಲದೆ?"

ಆ ಮಾತುಗಳನ್ನು ಕೇಳಿ ಅಧ್ಯಕ್ಷನ ಮನಸ್ಸು ಸ್ವಲ್ಪ ಪರಿವರ್ತಿತ ವಾದಂತೆ ಕಂಡುಬಂದುದು ಅವನು ಸ್ವಲ್ಪ ಮೃದುವಚನಗಳಲ್ಲಿ ಉತ್ತರ ಕೊಡುತ್ತಿದ್ದನೆಂದು ತೋರುವುದು ಅಷ್ಟರಲ್ಲಿ ಬೀದಿಯಲ್ಲಿ ಬಹಳ ಗಲಾಟೆ ಯಾಗುತ್ತಿದ್ದಂತೆ ಶಬ್ದವಾಯಿತು. ಯಾರನ್ನೋ ಸಂತೋಷದಿಂದಾಹ್ವಾನಿ ಸುತ್ತಿದ್ದಂತೆ ಧ್ವನಿಗಳು ಕೇಳಿಬಂದುವು ಅಧ್ಯಕ್ಷನು, "ಇದೇನು?— ಇದೇನು?—ನಿಜವೆ? ನಾನು ಸರಿಯಾಗಿ ಕೇಳಿದೆನೆ?" ಎಂದು ಕೂಗಿ ಕೊಳ್ಳುತ್ತ ತನ್ನ ಕಿರುಮನೆಯ ಪಕ್ಕದಲ್ಲಿದ್ದ ಕೊಟಡಿಗೆ ನುಗ್ಗಿದನು ಪುಷ್ಪಲತೆಯನ್ನವನು ಅಲ್ಲಿಯೇ ಬಿಟ್ಟು ಹೊರಟುಹೋದನು ಅವಳ ವಿಷಯವನ್ನೇ ಅವನು ಮರತುಹೋದನು

ಅವನು ಪಕ್ಕದ ಕೊಟಡಿಯನ್ನು ಸೇರುವವೇಳೆಗೆ ಅನೇಕ ಜನರು ಕೊಟಡಿಗೆ ಬರುತ್ತಿದ್ದುದು ಕಂಡುಬಂದಿತು ಅವರೆಲ್ಲರಿಗಿಂತಲೂ ಮುಂದೆ ಯುವಕನೊಬ್ಬನು ಸಾಮಾನ್ಯವಾದ ಉಡುಪನ್ನುಟ್ಟು ದೊಡ್ಡಮನುಷ್ಯನಂತೆ ನಿಧಾನವಾಗಿ ಬರುತ್ತಿದ್ದನು. ಅವನ ಹಿಂದೆಯೇ ಇಬ್ಬರು ಸರದಾರರು ಅವನನ್ನು ಹಿಂಬಾಲಿಸಿ ಬರುತ್ತಿದ್ದರು.

ಮನೆಯವರೆಲ್ಲರೂ ಗಾಬರಿಗೊಂಡಿದ್ದರು. ಅವರೆಲ್ಲರನ್ನೂ ಪಕ್ಕಕ್ಕೆ

ತಳ್ಳುತ್ತಿ ಅಧ್ಯಕ್ಷನು ಮುಂದರಿದು ಹೋಗಿ ಯುವಕನ ಮುಂದೆ ಪ್ರಣಾಮ ಮಾಡುವವನಂತೆ ಬಗ್ಗಿನಿಂತು, "ರಾಜಕುಮಾರರೆ! ರಾಜಕುಮಾರರೆ! ತಾವು ಬಡವನ ಮನೆಗೆ ದಯಮಾಡಿಸಿ ನನಗೆ ಬಹಳ ಗೌರವವನ್ನು ತೋರಿದಂತಾಯಿತು. ನನ್ನ ಅದೃಷ್ಟಕ್ಕೆ ಪಾರವೇ ಇಲ್ಲ" ಎಂದು ಹೇಳಿದನು

ಬಂದವನು ರಾಜಕುಮಾರ ವಿನಯಸಿಂಹನಾಗಿದ್ದನು. ಅವನು ಅಧ್ಯಕ್ಷನನ್ನು ಗಂಭೀರಭಾವದಿಂದ ನೋಡುತ್ತ ಹೇಳತೊಡಗಿದನು— "ರವಿವರ್ಮಮಹಾಶಯರೆ! ನಾನೂ ಸ್ವಲ್ಪ ದೇಶಾಭಿಮಾನವುಳ್ಳವನು. ನಮ್ಮ ದೇಶದಲ್ಲಿ ಬೆಳೆಯುವ ಪದಾರ್ಥಗಳನ್ನು ಬಹಳವಾಗಿ ಪ್ರೀತಿಸುವವನು ನಾನೂ ಹೂವುಗಳನ್ನು ಪ್ರೀತಿಸುತ್ತೇನೆ. ಎಲ್ಲ ಹೂವುಗಳಿಗಿಂತಲೂ ಟ್ಯೂಲಿಪ್ ಪುಷ್ಪವನ್ನು ಹಚ್ಚು ಪ್ರೀತಿಸುತ್ತೇನೆ. ಕಲ್ಯಾಣ ನಗರಿಯವರು ಕರಿಯಟ್ಯೂಲಿಪನ್ನು ಹೂಂದಿರುವರೆಂದು ತಿಳಿಯಿತು. ಅದನ್ನು ನಂಬಲಾಗಲೇ ಇಲ್ಲ ಕಡೆಗೆ ಈ ವರ್ತಮಾನವು ನಿಶ್ಚಯವಾದುದೆಂದು ತಿಳಿದು ಸುರನಗರಿಯಿಂದ ನೇರವಾಗಿ ಟ್ಯೂಲಿಪ್‌ಸಂಘದ ಅಧ್ಯಕ್ಷನ ಬಳಿಗೆ ಬರುತ್ತಿದ್ದೇನೆ"

ರವಿವರ್ಮ—ರಾಜಕುಮಾರರೆ! ನಮ್ಮ ಸಂಘದ ಉದ್ಯಮಗಳು ತಮಗೆ ಸಂತೋಷವನ್ನು ಕೊಡುವುವಾದರೆ ನಮ್ಮ ಆನಂದಕ್ಕೆ ಮಿತಿಯೇ ಇರುವುದಿಲ್ಲ.

ವಿನಯಸಿಂಹನು ಈಗಾಗಲೇ ಬಹಳ ದೊಡ್ಡ ಉಪನ್ಯಾಸ ಮಾಡಿದುದಕ್ಕಾಗಿ ಪಶ್ಚಾತ್ತಾಪ ಪಟ್ಟವನಂತೆ, "ಪುಷ್ಪವು ಇಲ್ಲಿಯೇ ಇರುವುದೆ?" ಎಂದು ಕೇಳಿದನು.

"ಅದು ಇಲ್ಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ."

"ಅದೆಲ್ಲಿದೆ?"

"ಅದರ ಯಜಮಾನನ ಬಳಿ ಇದೆ"

"ಅವನಾರು?"

"ರತ್ನಗಿರಿಯ ಪ್ರಾಮಾಣಿಕನಾದ ಟ್ಯೂಲಿಪ್ ಭಕ್ತನೊಬ್ಬನು."

"ಅವನ ಹೆಸರೇನು?"

"ವಿಷಕಂಠಶರ್ಮ."

"ಈಗೆಲ್ಲಿದ್ದಾನೆ?"

"ಈ ಪಟ್ಟಣದಲ್ಲಿಯೇ ಹೋಟಲೊಂದರಲ್ಲಿದ್ದಾನೆ. ಅವನನ್ನು ಬರಹೇಳುತ್ತೇನೆ. ಈ ಮಧ್ಯೆ ಮಹಾಪ್ರಭುಗಳು ನನ್ನ ಕಿರುಮನೆಗೆ ದಯಮಾಡೋಣಾಗಲಿ. ತಾವು ಇಲ್ಲಿರುವುದನ್ನು ತಿಳಿಯುತ್ತಲೇ ಅವನು ಕಾಲವಿಳಂಬಮಾಡದೆ ಟ್ಯೂಲಿಪ್ ಪುಷ್ಪವನ್ನು ತರುತ್ತಾನೆ."

"ಸರಿ. ಅವನನ್ನು ಬರಮಾಡಿರಿ."

"ಸರಿ. ಮಹಾಪ್ರಭುಗಳೆ! ಆದರೆ.... . ."

"ಅದೇನು?"

"ಏನೂ ಇಲ್ಲ. ಮಹಾಪ್ರಭುಗಳೆ! ದೊಡ್ಡ ವಿಚಾರವೇನೂ ಇಲ್ಲ."

"ರವಿವರ್ಮಮಹಾಶಯರ! ಎಲ್ಲವನ್ನೂ ದೊಡ್ಡ ವಿಚಾರವೆಂದೇ ತಿಳಿಯಬೇಕು."

"ಸರಿ. ಮಹಾಪ್ರಭುಗಳೆ! ಹೇಳಲೇ ಬೇಕೆಂದರೆ ನಿವೇದಿಸುತ್ತೇನೆ. ಈ ಪುಷ್ಪದ ವಿಚಾರದಲ್ಲಿ ತೊಡಕೊಂದುಂಟಾಗಿದೆ."

"ತೊಡಕೇನಾಗಿದೆ?"

"ಆ ಟ್ಯೂಲಿಪ್ ಪುಷ್ಪವನ್ನು ಅಪಹರಿಸಲಿಷ್ಟವುಳ್ಳವರು ಕೆಲವರು ಅದು ತಮ್ಮದೇ ಎಂದು ಹೇಳಿಕೊಳ್ಳುತ್ತಿರುವರು. ಅದು ಲಕ್ಷ ರೂಪಾಯಿಗಳ ಬೆಲೆಯುಳ್ಳುದೆಂದವರು ಬಲ್ಲರು"

"ನಿಜವೆ?"

"ನಿಜ ಮಹಾಪ್ರಭುಗಳೆ! ಅಪಹರಿಸುವವರು – ಫೋರ್ಜರಿ ಮಾಡುವವರು ಹಾಗೆ ಹೇಳುತ್ತಿದ್ದಾರೆ."

"ರವಿವರ್ಮಮಹಾಶಯರೆ! ತಾವು ಹೇಳಿದ ಕೃತ್ಯವನ್ನು ಮಾಡುವವರು ಮಹಾಪರಾಧಿಗಳಾಗುವರು."

"ನಿಜ, ಮಹಾಪ್ರಭುಗಳೆ!"

"ಹೀಗೆ ಹೇಳುವವರ ತಪ್ಪಿಗೆ ರುಜುವಾತು ಸಿಕ್ಕಿದೆಯೆ?"

"ಇಲ್ಲ ಮಹಾಪ್ರಭುಗಳೆ!–ತಪ್ಪಿತಸ್ಥಳಾದವಳು.... ......."

"ತಪ್ಪುಮಾಡುತ್ತಿರುವುದು ಹೆಂಗಸೆ?"

"ಪುಷ್ಪವು ತನ್ನದೆಂದು ಹೇಳಿಕೊಳ್ಳುತ್ತಿರುವವಳು ಇಲ್ಲಿಯೇ ಕಿರುಮನೆಯಲ್ಲಿದ್ದಾಳೆ, ಮಹಾಪ್ರಭುಗಳೆ!"

"ಅವಳ ವಿಷಯವಾಗೇನು ಯೋಚಿಸುತ್ತಿರುವಿರಿ?"

"ಮಹಾಪ್ರಭುಗಳೆ! ಲಕ್ಷ ರೂಪಾಯಿಗಳ ಆಸೆಯಿಂದ ಅವಳು ಈ ಕೃತ್ಯಕ್ಕೆ ಕೈಹಾಕಿರಬಹುದೆಂದು ತೋರುವುದು."

"ಪುಷ್ಪವು ತನ್ನದೆಂದು ಇವಳು ಹೇಳುತ್ತಿರುವಳೋ?"

"ನಿಜ, ಮಹಾಪ್ರಭುಗಳೆ!"

"ಅದಕ್ಕೆ ರುಜುವಾತನ್ನೊದಗಿಸಲು ಸಿದ್ಧಳಾಗಿರುವಳೆ?"

"ಅವಳನ್ನು ಅದೇ ವಿಷಯವಾಗಿ ಪ್ರಶ್ನಿಸಲೆತ್ನಿಸುತ್ತಿದ್ದೆನು. ಅಷ್ಟರಲ್ಲಿ ಮಹಾಪ್ರಭುಗಳು ಬರೋಣಾಯಿತು."

"ಅವಳನ್ನು ಪ್ರಶ್ನಿಸಿ, ರವಿವರ್ಮಮಹಾಶಯರೆ! ಅವಳನ್ನು ಪ್ರಶ್ನಿಸಿ. ನಾನು ದೇಶದ ಮೊದಲನೆಯ ಮ್ಯಾಜಿಸ್ಟ್ರೇಟನು. ಈ ಮೊಕದ್ದಮೆಯನ್ನು ವಿಚಾರಿಸುತ್ತೇನೆ. ನ್ಯಾಯವಾದ ತೀರ್ಪನ್ನು ಕೊಡುತ್ತೇನೆ."

ರವಿವರ್ಮನು, "ನನ್ನ ಸಾಲೊಮನ್ ದೊರೆಯನ್ನು ಕಂಡುಹಿಡಿದಂತಾಯಿತು" ಎನ್ನುತ್ತ, ನೆಲದವರೆಗೂ ಬಗ್ಗಿ ನಮಸ್ಕರಿಸುತ್ತ ರಾಜಕುಮಾರನಿಗೆ ದಾರಿ ತೋರಿದನು.

ರಾಜಕುಮಾರನು ಮುಂದೆ ನಡೆದುಹೋಗುವುದರಲ್ಲಿದ್ದನು. ಅಷ್ಟರಲ್ಲಿ ಏನನ್ನೋ ಜ್ಞಾಪಕಕ್ಕೆ ತಂದುಕೊಂಡವನಂತೆ, "ನನಗಿಂತ ಮೊದಲು ನೀವೇ ಹೋಗಿ. ನನ್ನನ್ನು ಸಾಮಾನ್ಯನಂತೆ ಸಂಬೋಧಿಸಿ" ಎಂದನು.

ಆಗವರಿಬ್ಬರೂ ರವಿವರ್ಮನ ಕಿರುಮನೆಯನ್ನು ಪ್ರವೇಶಿಸಿದರು.

ಪುಷ್ಪಲತೆಯು ತಾನು ಮೊದಲಿದ್ದ ಸ್ಥಳದಲ್ಲಿಯೇ ನಿಂತು ಕಿಟಕಿಯ ಮೂಲಕ ಉದ್ಯಾನವನವನ್ನು ನೋಡುತ್ತಿದ್ದಳು. ವಿನಯಸಿಂಹನು ಅವಳ ಉಡುಪನ್ನು ನೋಡಿ "ಓಹೋ! ಸುರನಗರಿಯವಳಿರಬೇಕು" ಎಂದುಕೊಂಡನು. ಅವರ ಹೆಜ್ಜೆಯ ಶಬ್ದವನ್ನು ಕೇಳಿ ಪುಷ್ಪಲತೆಯು ತಿರುಗಿ ನೋಡಿದಳು. ಆದರೆ ಅವಳಿಗೆ ರಾಜಕುಮಾರನು ಸರಿಯಾಗಿ ಕಾಣಿಸಲಿಲ್ಲ. ಅವನಾವೇಳೆಗೆ ಮೂಲೆಯೊಂದರಲ್ಲಿ ಒಂದು ಕುರ್ಚಿಯ ಮೇಲೆ

ಕುಳಿತಿದ್ದನು. ಅವಳು ಮುಖ್ಯಸ್ಥನಂತೆ ಕಂಡುಬರುತ್ತಿದ್ದ ರವಿವರ್ಮನನ್ನು ನೋಡುತ್ತಿದ್ದಳು. ಅವನ ಹಿಂದೆ ಬಂದ ಅಪರಿಚಿತನನ್ನು ಅವಳು ಅಷ್ಟಾಗಿ ಗಮನಕ್ಕೆ ತಂದುಕೊಳ್ಳಲಿಲ್ಲ.

ವಿನಯಸಿಂಹನು ಸಮೀಪದಲ್ಲಿದ್ದ ಬೀರುವೊಂದರಿಂದ ಪುಸ್ತಕವೊಂದನ್ನು ತೆಗೆದುಕೊಂಡು, ಪರೀಕ್ಷೆಯನ್ನು ಮುಂದುವರಿಸುವಂತೆ ಅಧ್ಯಕ್ಷನಿಗೆ ಸನ್ನೆಮಾಡಿದನು.

ಅಧ್ಯಕ್ಷನು ಅದನ್ನು ಕಂಡು ತಾನೂ ಕುಳಿತನು ತನಗೆ ಪ್ರಾಮುಖ್ಯತೆಯೊದಗಿದುದಕ್ಕಾಗಿ ಅತೀವಸಂತೋಷಭರಿತನಾದ ಅಧ್ಯಕ್ಷನು ಪರೀಕ್ಷೆಯನ್ನು ಪ್ರಾರಂಭಿಸಿದನು—"ಮಗು! ಪುಷ್ಪದ ವಿಷಯವಾಗಿ ನೀನು ನಿಜವನ್ನು–ಸತ್ಯವನ್ನು–ಹೇಳುವುದಾಗಿ ಪ್ರಮಾಣಮಾಡುವೆಯಾ?"

"ಪ್ರಮಾಣಮಾಡುತ್ತೇನೆ"

"ಹಾಗಾದರೆ ಸರಿ. ಈ ದೊಡ್ಡಮನುಷ್ಯರ ಮುಂದೆ ಮಾತನಾಡು. ಇವರು ನಮ್ಮ ಸಂಘದ ಸದಸ್ಯರು"

"ನಾನಾಗಲೇ ಎಲ್ಲವನ್ನೂ ತಮಗೆ ಹೇಳಿರುವೆನು. ಹೊಸದಾಗಿ ಏನು ಹೇಳಲಿ?"

"ಅದನ್ನೇ ಪುನಃ ಹೇಳು"

"ತಮಗೆ ಮೊದಲೇ ಮಾಡಿಕೊಂಡ ಪ್ರಾರ್ಥನೆಯನ್ನೇ ಪುನಃ ಮಾಡುತ್ತೇನೆ"

"ಅದಾವುದು?"

"ವಿಷಕಂಠಶರ್ಮರನ್ನು ಪುಷ್ಪದೊಡನೆ ಇಲ್ಲಿಗೆ ಕರೆಸಬೇಕೆಂಬುದು. ಆ ಪುಷ್ಪವನ್ನು ನಾನು ಗುರ್ತಿಸಲಾರದವಳಾದರೆ ಮುಚ್ಚುಮರೆಯಿಲ್ಲದೆ ಹೇಳಿಬಿಡುತ್ತೇನೆ ಆದರೆ ಅದನ್ನು ಗುರ್ತಿಸಿದರೆ ಅದನ್ನು ಕೊಡಿಸಬೇಕಾಗಿ ಕೇಳುತ್ತೇನೆ. ಕಡೆಗೆ ನನ್ನ ಬಳಿ ಇರುವ ರುಜುವಾತುಗಳನ್ನು ರಾಜಾವಿನಯಸಿಂಹರ ಮುಂದಿಡಬೇಕಾಗಿ ಬಂದರೂ ಹಿಂತೆಗೆಯುವುದಿಲ್ಲ."

"ಹಾಗಾದರೆ ನಿನ್ನಲ್ಲಿ ಸರಿಯಾದ ರುಜುವಾತುಗಳಿವೆಯೆ? ಮಗು!"

"ನನ್ನ ಸ್ವಭಾವವನ್ನು ಬಲ್ಲ ದೇವದೇವನು ತಕ್ಕ ರುಜುವಾತುಗಳನ್ನೊದಗಿಸುವನು."

ಆ ಮಾತುಗಳನ್ನು ಕೇಳಿ ರವಿವರ್ಮನು ವಿನಯಸಿಂಹನ ಕಡೆಗೆ ನೋಡಿದನು. ವಿನಯಸಿಂಹನು ಪುಷ್ಪಲತೆಯ ದನಿಯನ್ನು ಕೇಳಿದಾಗಿನಿಂದ ಈ ಅಪ್ಸರನಿಂದಿತಕಂಠವನ್ನು ಮೊದಲೆಲ್ಲಿ ಕೇಳಿದ್ದೆನೆಂದು ಯೋಚಿಸಿಕೊಳ್ಳುತ್ತಿದ್ದನು.

ಅಧಿಕಾರಿಯೊಬ್ಬನು ವಿಷಕಂಠನನ್ನು ಕರೆತರಲು ಹೊರಟುಹೋದನು. ರವಿವರ್ಮನು ತನ್ನ ಪರೀಕ್ಷೆಯನ್ನು ಮುಂದುವರಿಸಿದನು—"ಕರಿಯ ಪುಷ್ಪವು ನಿನ್ನದೇ ಎಂದು ಯಾವ ಆಧಾರದಮೇಲೆ ಹೇಳುತ್ತಿರುವೆ?"

"ನನ್ನ ಕಿರುಮನೆಯಲ್ಲಿಯೇ ಅದನ್ನು ನೆಟ್ಟು ಬೆಳೆಸಿದುದರಿಂದ"

"ನಿನ್ನ ಕಿರುಮನೆಯಲ್ಲಿಯೆ? ಅದೆಲ್ಲಿದೆ?"

"ಮಣಿಪುರದಲ್ಲಿ"

"ನೀನು ಮಣಿಪುರದಿಂದ ಬಂದೆಯಾ?"

"ಮಣಿಪುರದ ಕಾರಾಗೃಹದ ಜೈಲರನಿಗೆ ನಾನು ಮಗಳಾಗಬೇಕು"

ವಿನಯಸಿಂಹನು ತನ್ನಲ್ಲಿಯೇ "ಸರಿ, ಅಲ್ಲಿಯೇ ಇರಬೇಕು. ಈಗ ಸ್ಮೃತಿಗೆ ಬರುತ್ತಿದೆ" ಎಂದುಕೊಂಡನು. ತನ್ನ ಪುಸ್ತಕದಲ್ಲಿಯೇ ನಟ್ಟ ದೃಷ್ಟಿಯುಳ್ಳವನಂತೆ ತೋರ್ಪಡಿಸಿಕೊಳ್ಳುತ್ತ ಆಕ್ಷಣಮೊದಲ್ಗೊಂಡು ಅವನು ಪುಷ್ಪಲತೆಯನ್ನು ಮತ್ತಷ್ಟು ಪರೀಕ್ಷಿಸತೊಡಗಿದನು.

ರವಿವರ್ಮನು ಪುನಃ ಪುಷ್ಪಲತೆಯನ್ನು ಪ್ರಶ್ನಿಸುತ್ತ, "ನಿನಗೆ ಪುಷ್ಪಗಳೆಂದರೆ ಬಹಳ ಪ್ರೀತಿಯಿರುವುದೆ?" ಎಂದನು.

"ಅಹುದು ಸ್ವಾಮಿ! ಇದೆ."

"ಹಾಗಾದರೆ ಪುಷ್ಪಗಳ ವಿಷಯದಲ್ಲಿ ನಿನಗೆ ಬಹಳ ಅನುಭವವಿರುವುದಲ್ಲವೆ?"

ಆ ಪ್ರಶ್ನೆಗುತ್ತರ ಕೊಡಲು ಪುಷ್ಪಲತೆಯು ಸ್ವಲ್ಪ ನಿಧಾನಿಸಿದಳು. ಬಳಿಕ ಆಂತರ್ಯದಿಂದುದ್ಭವವಾದ ದನಿಯಿಂದ ಹೇಳುವವಳಂತೆ, "ಸ್ವಾಮಿ! ತಾವು ಗೌರವಬುದ್ಧಿಯವರೆಂದೂ ಪ್ರಾಮಾಣಿಕರೆಂದೂ ನಂಬಬಹುದೆ?" ಎಂದಳು.

ಅವಳ ದನಿಯಲ್ಲಿ ಸತ್ಯವು ತುಂಬಿದ್ದಂತೆ ಬೋಧೆಯಾಗುತ್ತಿದ್ದುದರಿಂದ

ರವಿವರ್ಮನೂ ವಿನಯಸಿಂಹನೂ ಏಕಕಾಲದಲ್ಲಿ ಸಮ್ಮತಿಸೂಚಕವಾಗಿ ತಲೆಯನ್ನಲ್ಲಾಡಿಸಿದರು.

ಪುಷ್ಪಲತೆಯು ಹೇಳತೊಡಗಿದಳು–"ಹಾಗಾದರೆ ಸರಿ. ಹೇಳುತ್ತೇನೆ ಕೇಳಿ. ನಾನು ಅನುಭವಸ್ಥಳಾದವಳಲ್ಲ. ನನಗೆ ಪುಷ್ಪವಿಚಾರಗಳು ತಿಳಿಯವು. ನಾನೊಬ್ಬ ಬಡಹೆಂಗಸು. ಮೂರು ತಿಂಗಳ ಹಿಂದೆ ನನಗೆ ಓದುವುದಕ್ಕಾಗಲಿ ಬರೆಯುವುದಕ್ಕಾಗಲಿ ಬರುತ್ತಿರಲಿಲ್ಲ. ಇಲ್ಲ–ನಾನು ಕರಿಯ ಟ್ಯೂಲಿಪ್ ಪುಷ್ಪವನ್ನು ಕಂಡುಹಿಡಿಯಲಿಲ್ಲ."

"ಮತ್ತಾರು ಕಂಡುಹಿಡಿದರು?"

"ಮಣಿಪುರದ ಕಾರಾಗೃಹದ ಬಂದಿಯೊಬ್ಬನು."

ರಾಜಾವಿನಯಸಿಂಹನು ಚಕಿತನಾಗಿ, "ಮಣಿಪುರದ ಕಾರಾಗೃಹದ ಬಂದಿಯೆ? ಎಂದನು."

ಆ ಧ್ವನಿಯನ್ನು ಕೇಳಿ ಪುಷ್ಪಲತೆಯು ಚಕಿತಳಾದಳು. ಅದನ್ನು ಎಲ್ಲಿಯೋ ಮೊದಲು ಕೇಳಿದ್ದಂತೆ ಅವಳಿಗೆ ಭಾಸವಾಯಿತು. ವಿನಯ ಸಿಂಹನು ಮುಂದುವರಿಸುತ್ತ, "ಅಲ್ಲಿ ರಾಜದ್ರೋಹಿಗಳು ಮಾತ್ರ ಇರುವ ರಲ್ಲವೆ? ರಾಜದ್ರೋಹಿಯೊಬ್ಬನು ಹೂಗಳನ್ನು ಬೆಳೆಸಿದನೆ?" ಎಂದನು. ಅಷ್ಟು ಹೇಳಿ ಅವನು ಪುನಃ ಓದುವವನಂತೆ ನಟಿಸತೊಡಗಿದನು.

ಪುಷ್ಪಲತೆಯು ತೊದಲುತ್ತ, "ನಿಜ. ರಾಜದ್ರೋಹಿಯಾಗಿ ಬಂದಿಯಾಗಿರುವಾತನು ಪುಷ್ಪವನ್ನು ಬೆಳೆಸಿದನು" ಎಂದು ಹೇಳಿದಳು.

ಆ ಮಾತುಗಳನ್ನು ಕೇಳಿ ರವಿವರ್ಮನು ನಡುಗಿದನು. ಅಂತಹ ಸಾಕ್ಷಿಯ ಮುಂದೆ ಪುಷ್ಪಲತೆಯು ಬಂದಿಯ ತಪ್ಪನ್ನೊಪ್ಪಿಕೊಂಡುದನ್ನು ಕೇಳಿ ಅವನಿಗೆ ಭೀತಿಯುಂಟಾಯಿತು.

ವಿನಯಸಿಂಹನು ಆಸಕ್ತಿಹೀನನಂತೆ, "ಮುಂದೆ ಪ್ರಶ್ನಿಸೋಣಾಗಲಿ" ಎಂದನು.

ತನ್ನ ನಿಜನ್ಯಾಯಾಧಿಪತಿಯು ರವಿವರ್ಮನೆಂದು ಭಾವಿಸಿದ್ದ ಪುಷ್ಪಲತೆಯು ಅವನ ಕಡೆಗೆ ತಿರುಗಿ, "ಸ್ವಾಮಿ! ನಾನು ಮಹಾಪರಾಧ ವನ್ನು ಮಾಡಿದಂತಾಯಿತೆಂದು ತೋರುವುದು" ಎಂದಳು.

"ನಿಜ. ರಾಜದ್ರೋಹಿಗಳನ್ನು ಮಣಿಪುರದ ಜೈಲರು ಏಕಾಂತ ವಾಸದಲ್ಲಿಟ್ಟು ಸರಿಯಾಗಿ ನೋಡಿಕೊಳ್ಳಬೇಕಾಗಿತ್ತು."

"ಅಯ್ಯೋ! ಏನುಮಾಡಲಿ ಸ್ವಾಮಿ!"

"ನೀನು ಹೇಳುವುದನ್ನು ನೋಡಿದರೆ—ಜೈಲರನ ಮಗಳಾಗಿದ್ದವಳು ತನ್ನ ಪರಿಸ್ಥಿತಿಯ ಪ್ರಭಾವದಿಂದ ರಾಜದ್ರೋಹಿಯೊಡನೆ ಪುಷ್ಪಗಳ ವಿಚಾರವಾಗಿ ಪತ್ರವ್ಯವಹಾರಮಾಡಿದಳೆಂದು ಕಾಣುವುದು."

ಪುಷ್ಪಲತೆಯು ಅಪ್ರತಿಭಳಾಗಿ, "ನಿಜ ಸ್ವಾಮಿ! ನಾನೊಪ್ಪಿಕೊಳ್ಳದೆ ವಿಧಿಯಿಲ್ಲ. ಬಂದಿಯನ್ನು ನಾನು ಪ್ರತಿದಿನವೂ ನೋಡುತ್ತಿದ್ದೆನು" ಎಂದಳು.

ರವಿವರ್ಮನೂ ಭೀತನಾಗಿ, "ಎಂತಹ ದುರದೃಷ್ಟ ಹುಡುಗಿಯಮ್ಮಾ ನೀನು" ಎಂದನು.

ವಿನಯಸಿಂಹನು ಪುಷ್ಪಲತೆಯ ಭೀತಿಯನ್ನೂ, ರವಿವರ್ಮನ ಶುಷ್ಕವದನವನ್ನೂ ನೋಡಿ, ಎಲ್ಲವನ್ನೂ ಇತ್ಯರ್ಥಪಡಿಸುವವನಂತೆ, "ಟ್ಯೂಲಿಪ್‌ಸಂಘದವರಿಗೆ ಈ ವಿಷಯಗಳು ಯಾವ ವಿಧದಲ್ಲಿಯೂ ಉಪಯುಕ್ತವಾದವುಗಳಲ್ಲ. ಅವರು ಕರಿಯಟ್ಯೂಲಿಪನ್ನು ನೋಡಿ ಎಲ್ಲವನ್ನೂ ನಿರ್ಧರಿಸಬೇಕಾಗಿರುವುದು. ರಾಜದ್ರೋಹಕರವಾದ ಅಪರಾಧಗಳನ್ನು ಅವರು ಗಣನೆಗೆ ತೆಗೆದುಕೊಳ್ಳುವಂತಿಲ್ಲ. ಹೇಳು ತಾಯಿ! ಮುಂದೇನಾಯಿತು ಎಲ್ಲವನ್ನೂ ಹೇಳು" ಎಂದನು.

ರವಿವರ್ಮನು ಸ್ವಲ್ಪ ಧೈರ್ಯಗೊಂಡು ಟ್ಯೂಲಿಪ್‌ಸಂಘದ ಪರವಾಗಿ ಅಭಿವಂದನೆಗಳನ್ನು ಅರ್ಪಿಸುವವನಂತೆ ರಾಜಕುಮಾರನ ಕಡೆಗೆ ನೋಡಿದನು.

ಪುಷ್ಪಲತೆಯು ಧೈರ್ಯಗೊಂಡು ಕಳೆದ ಮೂರು ತಿಂಗಳಿಂದ ನಡೆದ ವಿಷಯಗಳೆಲ್ಲವನ್ನೂ ವಿಶದಪಡಿಸಿದಳು. ತಾನು ಮಾಡಿದುದೆಲ್ಲವನ್ನೂ—ತಾನು ಕಷ್ಟಪಟ್ಟುದೆಲ್ಲವನ್ನೂ ವಿವರಿಸಿದಳು. ಕಾಳೀಚರಣನ ಕ್ರೌರ್ಯ—ಮೊದಲನೆಯ ಸಸಿಯ ನಾಶ – ಬಂದಿಯ ದುಃಖ – ಎರಡನೆಯ ಸಸಿಯನ್ನು ಸರಿಯಾಗಿ ಬೆಳೆಸಲು ನಡೆಸಿದ ಪ್ರಯತ್ನಗಳು – ಬಂದಿಯ ಶಾಂತತೆ – ಅಗಲಿದ್ದಾಗ ಅವನ ಅಪಾರವಾದ ದುಃಖ – ಟ್ಯೂಲಿಪದ ಸಮಾಚಾರ

ವನ್ನರಿಯದೆ ಅವನು ಸಾಯಲು ಸಿದ್ಧನಾಗಿದ್ದುದು - ಅವಳನ್ನವನು ಪುನಃ ನೋಡಲು ಹೋದಾಗ ಅವನಿಗುಂಟಾದ ಅತೀವ ಸಂತೋಷ - ಕಡೆಗೆ ಪುಷ್ಪವು ವಿಕಸಿತವಾದೊಂದು ಗಂಟೆಯೊಳಗಾಗಿ ಅಪಹರಿಸಲ್ಪಟ್ಟುದು - ಅದರಿಂದ ಅವರಿಬ್ಬರಿಗೂ ದಿಕ್ಕು ತೋರದಂತಾದುದು—ಇವೇ ಮುಂತಾದ ವಿಷಯಗಳೆಲ್ಲವನ್ನೂ ಪುಷ್ಪಲತೆಯು ಸ್ಪಷ್ಟವಾಗಿ ಹೇಳಿದಳು

ಆ ವಿಷಯಗಳನ್ನು ಹೇಳುವಾಗ ಅವಳ ಮುಖದಲ್ಲಿ ಕಂಡುಬಂದ ಸತ್ಯಾಂಶದ ಕುರುಹುಗಳು ವಿನಯಸಿಂಹನಮೇಲೆ ಯಾವ ಪರಿಣಾಮ ವನ್ನೂ ಉಂಟುಮಾಡಿದಂತೆ ಕಂಡುಬರಲಿಲ್ಲ. ಆದರೂ ರವಿವರ್ಮನ ಮೇಲೆ ಮಾತ್ರ ಒಳ್ಳೆಯ ಪರಿಣಾಮವನ್ನುಂಟುಮಾಡಿದುವು.

ವಿನಯಸಿಂಹನು ಸ್ವಲ್ಪಹೊತ್ತು ಸುಮ್ಮನಿದ್ದು, "ಆದರೆ ನೀನು ಬಂದಿಯ ಪರಿಚಯವನ್ನು ಹೊಂದಿ ಬಹಳದಿನಗಳಾಗಿಲ್ಲ - ಅಲ್ಲವೆ?" ಎಂದು ಕೇಳಿದನು

"ಅದೇಕೆ ಸ್ವಾಮಿ! ಹಾಗೆ ಹೇಳುವಿರಿ"

"ಏಕೆಂದರೆ - ಕಾಳೀಚರಣನೂ ಅವನ ಮಗಳೂ ಮಣಿಪುರದ ಕಾರಾಗೃಹಕ್ಕೆ ಬಂದು ನಾಲ್ಕುತಿಂಗಳು ಕೂಡ ಕಳೆದಿಲ್ಲವೆಂಮ ಬಲ್ಲೆನು"

"ನಿಜ ಸ್ವಾಮಿ! ನಾಲ್ಕುತಿಂಗಳಾಗಿಲ್ಲ"

"ಹಾಗಿಲ್ಲದಿದ್ದರೆ - ಸುರನಗರಿಯಿಂದ ಮಣಿಪುರಕ್ಕೆ ವರ್ಗಾಯಿಸ ಲ್ಪಟ್ಟ ಬಂದಿಯೊಬ್ಬನನ್ನು ಹಿಂಬಾಲಿಸಿ ಬರಲು ನೀನು ನಿನ್ನ ತಂದೆಯ ವರ್ಗವನ್ನು ಕೇಳಿರಬೇಕೆಂದು ತೋರುವುದು"

ಪುಷ್ಪಲತೆಯು ಲಜ್ಜಾಯುಕ್ತಳಾಗಿ, "ಸ್ವಾಮಿ!" ಎಂದಳು

ವಿನಯಸಿಂಹನು, "ಹೇಳು ನೀನು ಹೇಳಬೇಕೆಂದಿರುವುದನ್ನು ಪೂರ್ತಿಯಾಗಿ ಹೇಳು" ಎಂದನು.

"ಸುರನಗರಿಯಲ್ಲಿದ್ದಾಗಲಿಂದ ಆ ಬಂದಿಯನ್ನು ಬಲ್ಲೆ ಸ್ವಾಮಿ!"

"ಬಂದಿಯು ಅದೃಷ್ಟಶಾಲಿಯೇ ಸರಿ!"

ಆ ಸಮಯದಲ್ಲಿ ವಿಷಕಂಠನನ್ನು ಕರೆತರಲು ಹೋಗಿದ್ದ ಅಧಿ ಕಾರಿಯು ಹಿಂತಿರುಗಿ ಬಂದು, ಪುಷ್ಪದೊಡನೆ ಅವನು ಬರುತ್ತಿರುವನೆಂದು ವಿನಯಸಿಂಹನಿಗೆ ಹೇಳಿದನು

# ಸಪ್ತವಿಂಶತಿ ಪರಿಚ್ಛೇದ

## ಮೂರನೆಯ ಸಸಿ

ವಿಷಕಂಠನು ಬರುತ್ತಲೇ ಪಕ್ಕದ ಕೊಟಡಿಯಲ್ಲಿ ಕರಿಯಪುಷ್ಪವನ್ನಿಟ್ಟು ಅಧ್ಯಕ್ಷನಿಗಾಗಿ ಕಾಯತೊಡಗಿದನು. ಅವನೊಡನೆ ಅನುಚರರಿಬ್ಬರು ಬಂದಿದ್ದರು. ಅವರು ಮೇಜೊಂದರ ಮೇಲೆ ತಮ್ಮ ಅಮೂಲ್ಯವಾದ ಪುಷ್ಪವನ್ನಿಟ್ಟಿದ್ದರು.

ಈ ವಿಷಯವು ತಿಳಿಯುತ್ತಲೇ ವಿನಯಸಿಂಹನು ರವಿವರ್ಮನಿದ್ದ ಕೊಟಡಿಯನ್ನು ಬಿಟ್ಟು ವಿಷಕಂಠನಿದ್ದ ಕೊಟಡಿಯನ್ನು ಸೇರಿದನು. ಪುಷ್ಪವನ್ನು ಕಂಡು ಆಶ್ಚರ್ಯಚಕಿತನಾಗಿ ಅದನ್ನೇ ನಟ್ಟ ದೃಷ್ಟಿಯಿಂದ ಸ್ವಲ್ಪಹೊತ್ತು ನೋಡುತ್ತ ನಿಂತನು. ಬಳಿಕ ರವಿವರ್ಮನ ಬಳಿಗೆ ಹಿಂತಿರುಗಿಹೋಗಿ ಮೂಲೆಯೊಂದರಲ್ಲಿ ಕುರ್ಚಿಯಮೇಲೆ ಪುನಃ ಕುಳಿತನು.

ಪುಷ್ಪಲತೆಯು ನಡುಗುತ್ತ, ವಿವರ್ಣವದನಳಾಗಿ, ಭೀತಳಾಗಿ ತನಗಾವಾಗ ಪುಷ್ಪವನ್ನು ತೋರಿಸುವರೆಂದು ಚಿಂತಿಸುತ್ತ ನಿಂತಿದ್ದಳು. ಆ ಸಮಯದಲ್ಲಿ ಅವಳಿಗೆ ವಿಷಕಂಠನ ಧ್ವನಿಯು ಕೇಳಿಸಿತು. ಅವಳು ಒಡನೆಯೇ, "ಇವನೇ!" ಎಂದು ಕೂಗಿಕೊಂಡಳು.

ವಿನಯಸಿಂಹನು ಸನ್ನೆಮಾಡಿ ಪುಷ್ಪವನ್ನು ನೋಡುವಂತೆ ಆಜ್ಞಾಪಿಸಿದನು ಅವಳು ಅದನ್ನು ರವಿವರ್ಮನ ಕೊಟಡಿಯಿಂದಲೇ ನೋಡಿದಳು ಒಡನೆಯೇ, "ಅದು ನನ್ನ ಪುಷ್ಪ! ನಾನು ಗುರ್ತಿಸಿದ್ದೇನೆ. ಅಯ್ಯೋ! ಕುಮುದಚಂದ್ರರ ಗತಿಯೇನು!" ಎಂದು ಮುಂತಾಗಿ ಕೂಗಿಕೊಂಡು ಗಟ್ಟಿಯಾಗಿ ಅಳತೊಡಗಿದಳು.

ವಿನಯಸಿಂಹನು ಎದ್ದು ಪುಷ್ಪವಿದ್ದ ಕೊಟಡಿಯ ಬಾಗಿಲಲ್ಲಿ ನಿಂತುಕೊಂಡನು. ಅವನ ಮೇಲೆ ಈಗ ಬೆಳಕು ಚೆನ್ನಾಗಿ ಬೀಳುತಿತ್ತು. ಪುಷ್ಪಲತೆಯು ಆ ಅಪರಿಚಿತನನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಅವನನ್ನು ಮೊದಲೆಲ್ಲಿಯೋ ನೋಡಿದ್ದಂತೆ ಭಾವಿಸಿಕೊಂಡಳು

ವಿನಯಸಿಂಹನು ವಿಷಕಂಠನನ್ನು ನೋಡಿ, "ವಿಷಕಂಠಶರ್ಮರೆ! ಅಧ್ಯಕ್ಷರಿರುವ ಕೊಟಡಿಗೆ ಬರೋಣಾಗಲಿ" ಎಂದನು.

ವಿಷಕಂಠನು ಆತುರನಾಗಿ ಬಂದನು. ಎದುರಿಗೆ ನಿಂತಿದ್ದವನನ್ನು ಕಂಡು ಚಕಿತನಾಗಿ, "ರಾಜಾವಿನಯಸಿಂಹರೆ!" ಎಂದನು

ಪುಷ್ಪಲತೆಯೂ ಚಕಿತಳಾಗಿ, "ರಾಜಾವಿನಯಸಿಂಹರೆ!" ಎಂದಳು.

ಅವಳು ಕೂಗಿದುದನ್ನು ಕಂಡು ವಿಷಕಂಠನು ಮತ್ತಷ್ಟು ಆಶ್ಚರ್ಯದಿಂದ ಹಿಂತಿರುಗಿ ನೋಡಿ ಪುಷ್ಪಲತೆಯನ್ನು ಕಂಡನು ಒಡನೆಯೇ ಅವನ ಶರೀರವಾದ್ಯಂತವೂ ವಿದ್ಯುಚ್ಛಕ್ತಿಯಿಂದ ತಾಡಿತವಾದಂತೆ ಥರಥರನೆ ನಡುಗತೊಡಗಿದುದು ವಿನಯಸಿಂಹನು ಇದೆಲ್ಲವನ್ನೂ ಕಂಡು ತನ್ನಲ್ಲಿಯೇ, "ಆಹಾ! ಇವನು ಬುದ್ಧಿಶೂನ್ಯನಾದಂತಿದೆ" ಎಂದುಕೊಂಡನು.

ವಿಷಕಂಠನು ಮಹತ್ಪ್ರಯತ್ನಮಾಡಿ ತನ್ನ ಯೋಚನೆಗಳನ್ನು ನಿಲ್ಲಿಸಿ ಗಾಬರಿಯಿಲ್ಲದವನಂತೆ ತೋರ್ಪಡಿಸಿಕೊಳ್ಳತೊಡಗಿದನು

ವಿನಯಸಿಂಹನು ಅವನನ್ನು ನೋಡಿ "ವಿಷಕಂಠಶರ್ಮರೆ! ತಾವು ಕರಿಯ ಟ್ಯೂಲಿಪ್ ಪುಷ್ಪವನ್ನು ಬೆಳೆಸುವ ರಹಸ್ಯವನ್ನು ಕಂಡುಹಿಡಿದಿರುವಂತಿದೆಯಲ್ಲವೆ?" ಎಂದು ಕೇಳಿದನು

ವಿಷಕಂಠನು, "ಅಹುದು ಮಹಾ ಪ್ರಭುಗಳೆ!" ಎಂದನು. ಅವನ ದನಿಯಲ್ಲಿ ಇನ್ನೂ ಸ್ವಲ್ಪ ಗಾಬರಿಯು ಕಂಡುಬರುತ್ತಿದ್ದುದು.

ವಿನಯಸಿಂಹನು ಮುಂದುವರಿಸುತ್ತ, "ಇಲ್ಲಿ ಹಂಗಸೊಬ್ಬಳಿದ್ದಾಳೆ. ತಾನೂ ಅಂತಹುದನ್ನು ಕಂಡುಹಿಡಿದಿರುವುದಾಗಿ ಅವಳು ಹೇಳುತ್ತಿದ್ದಾಳಲ್ಲಾ! ಇದಕ್ಕೇನು ಹೇಳುವಿರಿ?" ಎಂದನು.

ವಿಷಕಂಠನು ತಿರಸ್ಕಾರಸೂಚಕವಾಗಿ ನಗುತ್ತ ಭುಜಗಳನ್ನು ಹಾರಿಸಿದನು. ವಿನಯಸಿಂಹನು ಆಸಕ್ತಿಯಿಂದಲೂ ಉತ್ಸುಕತೆಯಿಂದಲೂ ಅವನ ಚಲನವಲನಗಳನ್ನು ಪರೀಕ್ಷಿಸುತ್ತಿದ್ದವನು, "ಹಾಗಾದರೆ ಈ ಹುಡುಗಿಯ ಪರಿಚಯವು ನಿಮಗಿಲ್ಲವೆ?" ಎಂದನು.

"ಇಲ್ಲ ಮಹಾಪ್ರಭುಗಳೆ!"

"ಮಗು! ನೀನು ವಿಷಕಂಠಶರ್ಮರನ್ನು ಬಲ್ಲೆಯೇನಮ್ಮಾ?"

"ಇಲ್ಲ. ನಾನು ವಿಷಕಂಠಶರ್ಮರನ್ನರಿಯೆ. ಆದರೆ ನಿರಂಜನರನ್ನು ಬಲ್ಲೆ."

"ಹಾಗಂದರೇನು?"

"ವಿಷಕಂಠಶರ್ಮರೆಂದು ಈಗ ಹೇಳುತ್ತಿರುವವರು ಮಣಿಪುರ ದಲ್ಲಿದ್ದಾಗ ನಿರಂಜನರೆಂದು ಪ್ರಸಿದ್ಧರಾಗಿದ್ದರು."

"ವಿಷಕಂಠಶರ್ಮರೆ! ತಾವು ಇದಕ್ಕೇನು ಹೇಳುವಿರಿ?"

"ಮಹಾಪ್ರಭುಗಳೆ! ಆ ಹುಡುಗಿಯು ಸುಳ್ಳು ಹೇಳುತ್ತಿದ್ದಾಳೆ."

"ಹಾಗಾದರೆ ತಾವು ಮಣಿಪುರಕ್ಕಾವಾಗಲೂ ಹೋಗಿಯೇ ಇಲ್ಲವೆಂದು ಹೇಳುವಿರೇನು?"

ವಿಷಕಂಠನು ಸ್ವಲ್ಪ ನಿಧಾನವಾಗಿ ಯೋಚಿಸತೊಡಗಿದನು. ರಾಜ ಕುಮಾರನು ನಟ್ಟದೃಷ್ಟಿಯಿಂದ ಅವನನ್ನೇ ನೋಡುತ್ತಿದ್ದನಾಗಿ ಅವನು ಸುಳ್ಳು ಹೇಳಲು ಧೈರ್ಯವಿಲ್ಲದವನಾಗಿದ್ದನು. ಅವನು ಮೆಲ್ಲನೆ, "ನಾನು ಮಣಿಪುರಕ್ಕೇ ಹೋಗಿಲ್ಲವೆಂದು ಹೇಳಲಾರೆನು. ಆದರೆ ನಾನು ಟ್ಯೂಲಿಪ್ ಪುಷ್ಪವನ್ನು ಕದ್ದಿಲ್ಲವೆಂದು ಮಾತ್ರ ಹೇಳಬಲ್ಲೆನು" ಎಂದನು.

ಪುಷ್ಪಲತೆಯು ಕೋಪಾವಿಷ್ಟಳಾಗಿ, "ತಾವು ಕದ್ದಿರುವಿರಿ. ಅದೂ ನನ್ನ ಕಿರುಮನೆಯಿಂದಲೇ ಕದ್ದಿರುವಿರಿ" ಎಂದಳು.

ವಿಷಕಂಠ—ಇದೆಲ್ಲವೂ ಸುಳ್ಳು.

ಪುಷ್ಪಲತೆ—ನಾನು ಹೇಳುವುದನ್ನು ಕೇಳೋಣಾಗಲಿ. ನಾನು ಸಸ್ಯಭೂಮಿಯನ್ನು ಪರಿಷ್ಕಾರಮಾಡಿ ಅದರಲ್ಲಿ ಸಸಿಯನ್ನು ನೆಡಬೇ ಕೆಂದಿದ್ದಾಗ ತಾವು ನನ್ನನ್ನು ಹಿಂಬಾಲಿಸಿ ಬಂದುದು ಸುಳ್ಳೇನು? ಅದನ್ನು ನೆಡುವಂತೆ ನಾನು ನಟನೆಮಾಡಿದಾಗ ತಾವು ನನ್ನನ್ನು ಹಿಂಬಾಲಿಸಿ ಬಂದುದೂ ಸುಳ್ಳೇನು? ಆ ದಿನ ನಾನು ಹೊರಟುಹೋಗುತ್ತಲೇ ಸಸಿಯು ಸಿಗುವುದೆಂಬಾಸೆಯಿಂದ ಸರಸರನೆ ನೀವು ಆ ಸಸ್ಯಭೂಮಿಯ ಸಮೀಪಕ್ಕೆ ಓಡಿದುದೂ ಸುಳ್ಳೇನು? ನೀವು ಆ ಸಮಯದಲ್ಲಿ ಕೈಗಳಿಂದ ಸಸ್ಯಭೂಮಿ ಯನ್ನು ಅಗೆದು ನೋಡಿದುದೂ, ನಾನು ನಿಮ್ಮನ್ನು ಮೋಸಗೊಳಿಸ ಲೋಸುಗ ಅಲ್ಲೇನೂ ನೆಟ್ಟಿರಲಿಲ್ಲವಾಗಿ ನಿಮಗಾವುದೂ ಸಿಕ್ಕದಿದ್ದುದೂ ಸುಳ್ಳೇನು? ಹೇಳಿ. ಇವೆಲ್ಲವೂ ಸುಳ್ಳಿನ ಕಂತೆಗಳೇನು?

ವಿಷಕಂಠನು ಇದಾವುದಕ್ಕೇ ಆಗಲಿ ಉತ್ತರ ಹೇಳುವುದು ಅನಾವಶ್ಯಕ ವೆಂದು ಭಾವಿಸಿ, ವಿನಯಸಿಂಹನ ಕಡೆಗೆ ತಿರುಗಿ ಹೇಳತೊಡಗಿದನು— "ಮಹಾಪ್ರಭುಗಳೆ! ಈಗ ಸುಮಾರು ಇಪ್ಪತ್ತು ವರ್ಷಗಳಿಂದ ನಾನು

ರತ್ನಗಿರಿಯಲ್ಲಿ ಪ್ರಸಿದ್ಧನಾದ ಟ್ಯೂಲಿಪ್‌ಭಕ್ತನಾಗಿದ್ದೇನೆ. ಪುಷ್ಪಗಳನ್ನು ಬೆಳೆಯುತ್ತಿದ್ದೇನೆ. ಈ ಕಲೆಯಲ್ಲಿ ಸ್ವಲ್ಪ ಪ್ರಶಸ್ತಿಯನ್ನೂ ಪಡೆದವನಾಗಿದ್ದೇನೆ. ಪಕ್ಕದ ದೇಶದ ದೊರೆಯ ಹೆಸರನ್ನಿಟ್ಟು ಒಂದು ಪುಷ್ಪವನ್ನು ಪುಷ್ಪಪಟ್ಟಿಯಲ್ಲಿ ಸೇರಿಸಿದ್ದೇನೆ.—ಈ ವಿಷಯದಲ್ಲಿ ನಿಜವಾದ ಸಂಗತಿಯನ್ನು ಪ್ರಭುಗಳ ಅವಗಾಹನೆಗೆ ತರುತ್ತೇನೆ. ಪ್ರಭುಗಳು ಕೇಳೋಣಾಗಲಿ. ನಾನು ಕರಿಯಟ್ಯೂಲಿಪನ್ನು ಬೆಳೆದುದು ಈ ಹೆಂಗಸಿಗೆ ತಿಳಿಯಿತು. ಇವಳು ಮಣಿಪುರದ ಕಾರಾಗೃಹದಲ್ಲಿರುವ ಪ್ರೇಮಪಾತ್ರನೊಬ್ಬನೊಡನೆ ಸಂಧಾನಮಾಡಿ ನನ್ನ ಸರ್ವನಾಶಮಾಡಲೆತ್ನಿಸಿರುವಳು. ನನಗೆ ಸಲ್ಲುವ ಲಕ್ಷ ರೂಪಾಯಿಗಳ ಬಹುಮಾನವನ್ನು ತಾನೇ ಸಂಪಾದಿಸಿಕೊಳ್ಳಬೇಕೆಂದು ಹವಣಿಸಿರುವಳು. ಮಹಾಪ್ರಭುಗಳವರ ಕೃಪೆಯಿಂದ ನಾನದನ್ನು ಹೊಂದುವೆನೆಂದು ಭಾವಿಸಿರುವೆನು."

ಪುಷ್ಪಲತೆಯು ಅತೀವ ಕೋಪಾವಿಷ್ಟಳಾಗಿ, "ಚೀ! ಸುಳ್ಳುಗಾರ!" ಎಂದಳು

ವಿನಯಸಿಂಹನು "ಸದ್ದುಮಾಡಬೇಡ!" ಎಂದಾಜ್ಞಾಪಿಸಿ, ವಿಷಕಂಠನ ಕಡೆಗೆ ತಿರುಗಿ, "ಈ ಸ್ತ್ರೀಗೆ ಪ್ರೀತಿಪಾತ್ರನಾಗಿರುವ ಬಂದಿಯಿರುವನೆಂದೆಯಲ್ಲವೆ? ಅವನಾರು?" ಎಂದನು.

ಅದನ್ನು ಕೇಳಿ ಪುಷ್ಪಲತೆಗೆ ತಲೆ ತಿರುಗಿದಂತಾಯಿತು. ಕುಮುದಚಂದ್ರನು ಭಯಂಕರನೆಂದೂ ಅವನನ್ನು ಜೈಲರನು ಅತಿಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದೂ ಗವರ್ನರನ ಆಜ್ಞೆಯಾಗಿದ್ದಿತು. ಈ ಪ್ರಶ್ನೆಯು ವಿಷಕಂಠನಿಗೆ ಬಹಳ ಸಂತೋಷವನ್ನುಂಟುಮಾಡುವುದಾಗಿದ್ದಿತು. ಅವನು ಹೇಳತೊಡಗಿದನು—"ಈ ಬಂದಿಯ ಹೆಸರನ್ನು ಹೇಳಿದೊಡನೆಯೇ ಅವನ ಮಾತೂ ಅವನ ಕಡೆಯವರ ಮಾತೂ ಎಷ್ಟುಮಾತ್ರ ನಂಬಲರ್ಹವೆಂದು ತಾವೇ ತಿಳಿಯೋಣಾಗುವುದು. ಅವನೊಬ್ಬ ರಾಜದ್ರೋಹಿ ಅವನನ್ನೊಂದುಬಾರಿ ಗಲ್ಲಿಗೆ ಹಾಕಲು ಅಪ್ಪಣೆಯಾಗಿತ್ತು."

"ಅವನ ಹೆಸರೇನು?"

ಪುಷ್ಪಲತೆಯು ನಿರಾಶಾಪರವಶಳಾಗಿ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ನಿಂತಳು. ವಿಷಕಂಠನು ಗರ್ವಿತನಾಗಿ, "ಅವನ ಹೆಸರು

ಕುಮುದಚಂದ್ರನೆಂದು. ಅವನು ರಾಜದ್ರೋಹಿಯಾದ ರಮಾನಾಥ ಬಾಬುವಿನ ಸಾಕುಮಗನು" ಎಂದನು.

ರಾಜಕುಮಾರನು ಚಕಿತನಾದನು. ಅವನ ಕಣ್ಣುಗಳಲ್ಲಿ ಒಂದು ಬಗೆಯ ಕಾಂತಿಯುಂಟಾಯಿತು. ಅವನ ಮುಖವು ತೀರ ವಿವರ್ಣವಾಯಿತು. ಅವನು ಪುಷ್ಪಲತೆಯ ಬಳಿಗೆ ಹೋಗಿ ಕೈಗಳನ್ನು ಮುಖದಿಂದ ತೆಗೆಯುವಂತೆ ಆಜ್ಞಾಪಿಸಿದನು. ಅವಳು ಕೈಗಳನ್ನು ತೆಗೆದಳು. ವಿನಯಸಿಂಹನು ಗರ್ಜಿಸುವವನಂತೆ, "ಹಾಗಾದರೆ ಈ ಮನುಷ್ಯನನ್ನು ಹಿಂಬಾಲಿಸಲೋಸುಗ ನನ್ನ ಬಳಿಗೆ ಬಂದು ನಿನ್ನ ತಂದೆಗೆ ವರ್ಗಮಾಡಬೇಕೆಂದು ಕೇಳಿಕೊಂಡೆಯಾ?" ಎಂದು ಹೇಳಿದನು.

ಪುಷ್ಪಲತೆಯು ತಲೆತಗ್ಗಿಸಿ ನಿಂತಳು. ಅವಳ ಉಸಿರೇ ಕಟ್ಟಿಹೋಗಿತ್ತು. ಅವಳು ಮೆಲ್ಲನೆ, "ಅಹುದು ಮಹಾಪ್ರಭುಗಳೆ!" ಎಂದಳು.

ವಿನಯಸಿಂಹನು ವಿಷಕಂಠನ ಕಡೆಗೆ ತಿರುಗಿ, "ಮುಂದೆ ಹೇಳಿರಿ" ಎಂದನು.

ವಿಷಕಂಠನು ಹೇಳತೊಡಗಿದನು—"ನಾನು ಹೇಳಬೇಕಾದುದು ಹೆಚ್ಚಾಗಿಯೇನೂ ಇಲ್ಲ. ಮಹಾಪ್ರಭುಗಳು ಎಲ್ಲವನ್ನೂ ಬಲ್ಲವರಾಗಿರುವರು. ಒಂದು ವಿಷಯವನ್ನು ಮಾತ್ರ ಹೇಳಬಾರದೆಂದಿದ್ದೆನು. ಏಕೆಂದರೆ ಈ ಹುಡುಗಿಯು ಉಪಕಾರ ಮಾಡಲೆಳಸಿದವರಿಗೆ ಅಪಕಾರವನ್ನೆಣಿಸುವವಳೆಂಬುದನ್ನು ತಿಳಿಸಬಾರದೆಂದು ಯೋಚಿಸಿದೆನು. ಮಣಿಪುರದಲ್ಲಿ ನನಗೆ ಕಾರ್ಯಾಂತರವಿದ್ದುದರಿಂದ ಅಲ್ಲಿಗೆ ಹೋಗಿದ್ದೆನು. ಆಗ ಕಾಳೀಚರಣನ ಪರಿಚಯವನ್ನು ಹೊಂದಿದೆನು. ಆಗ ಅವನ ಮಗಳನ್ನು ಮದುವೆ ಮಾಡಿಕೊಳ್ಳುವುದಾಗಿ ಹೇಳಿದೆನು. ಆ ಸಮಯದಲ್ಲಿ ಕರಿಯ ಟ್ಯೂಲಿಪ್ ಪುಷ್ಪವು ನನ್ನ ಬಳಿ ಇರುವುದಾಗಿಯೂ ನಾನದನ್ನು ಬೆಳೆಸಿರುವುದಾಗಿಯೂ ಅದಕ್ಕೆ ಲಕ್ಷ ರೂಪಾಯಿಗಳ ಬಹುಮಾನವು ನನಗೆ ಬರುವುದಾಗಿಯೂ ಹೇಳಿದೆನು. ಅದನ್ನು ತಂದೆಗೂ ಮಗಳಿಗೂ ತೋರಿಸಿದೆನು. ಅದೇ ನನ್ನ ದೊಡ್ಡ ತಪ್ಪಾಯಿತು. ಅವಳ ಪ್ರೀತಿಪಾತ್ರನು ರತ್ನಗಿರಿಯಲ್ಲಿದ್ದಾಗ ತನ್ನ ರಾಜಕೀಯ ಚಟುವಟಿಕೆಗಳನ್ನು ಮುಚ್ಚಲೋಸುಗ ಟ್ಯೂಲಿಪ್ ಪುಷ್ಪಗಳನ್ನು ಬೆಳೆಯುವವನಂತೆ ತೋರ್ಪಡಿಸಿಕೊಳ್ಳುತ್ತಿದ್ದನು. ಈಗ

ಇವರಿಬ್ಬರೂ ನನ್ನ ಸರ್ವನಾಶವನ್ನುಂಟುಮಾಡಲು ಸಂಧಾನ ಮಾಡ ತೊಡಗಿದರು. ಪುಷ್ಪವು ಅರಳುವುದೆಂದು ತಿಳಿದ ದಿನ ಈ ಹೆಂಗಸು ಅದನ್ನು ತೆಗೆದುಕೊಂಡು ಹೋದಳು ಅದನ್ನು ತನ್ನ ಕಿರುಮನೆಯಲ್ಲಿಟ್ಟು ಕೊಂಡಿದ್ದಳು. ಅವಳು ಟ್ಯೂಲಿಪ್‌ಸಂಘದವರಿಗೆ ಪತ್ರವೊಂದನ್ನು ದೂತ ನೊಬ್ಬನೊಡನೆ ಕಳುಹಿಸಿದಳು. ಆ ಸಮಯದಲ್ಲಿ ಅದೃಷ್ಟವಶಾತ್ ನಾನು ಪುನಃ ಪುಷ್ಪವನ್ನು ಹೊಂದಿದೆನು ಪುಷ್ಪವನ್ನು ಕಳೆದುಕೊಂಡವಳಂತೆ ಇವಳು ನಟಿಸುತ್ತಿ ಮುಂದಿನ ಪ್ರಯತ್ನಗಳನ್ನು ಮಾಡತೊಡಗಿದಳು ಇವಳ ಬಳಿ ಪುಷ್ಪವಿದ್ದಾಗ ಅದನ್ನು ಇವಳು ಅನೇಕರಿಗೆ ತೋರಿಸಿರ ಬಹುದು. ಅವರನ್ನು ಸಾಕ್ಷಿಗಳಾಗಿ ಈಗ ಕರೆಯುಬಹುದು. ಆದರೆ ನನ್ನ ಅದೃಷ್ಟವಶದಿಂದ ಮಹಾಪ್ರಭುಗಳವರಿಗೆ ಈ ನಟಿಯ ವಿಚಾರವನ್ನೂ ಇವಳ ಸಾಕ್ಷಿಗಳ ವಿಚಾರವನ್ನೂ ಮೊದಲೇ ತಿಳಿಸಿಬಿಟ್ಟಿದ್ದೇನೆ"

ಪುಷ್ಪಲತೆಯು ಗಟ್ಟಿಯಾಗಿ ಅಳುತ್ತಿ, "ಅಯ್ಯೋ! ದೇವರೆ! ಎಂತಹ ಸುಳ್ಳಿನ ಕಂತೆಗಳು!" ಎನ್ನುತ್ತಿ ರಾಜಕುಮಾರನ ಪಾದತಲದಲ್ಲಿ ಬಿದ್ದಳು ಅವಳು ತಪ್ಪಿತಸ್ಥಳೆಂದು ತಿಳಿದುಕೊಂಡು, ವಿನಯಸಿಂಹನು ಅವಳ ಅತೀವಶೋಕವನ್ನು ನೋಡಿ ಮರುಕಗೊಂಡು, ಹೇಳತೊಡಗಿ ದನು—"ಮಗು! ನೀನು ಬಹಳ ದೊಡ್ಡ ತಪ್ಪನ್ನು ಮಾಡಿರುವೆಯಮ್ಮ! ನಿನಗೆ ಹೀಗೆ ಕೆಟ್ಟದಾರಿಯನ್ನು ತೋರಿಸಿದುದಕ್ಕಾಗಿ ನಿನ್ನ ಪ್ರೀತಿ ಪಾತ್ರನನ್ನು ಚೆನ್ನಾಗಿ ಶಿಕ್ಷಿಸುವೆನು. ನೀನಿನ್ನೂ ಚಿಕ್ಕವಳಾಗಿರುವೆ ಪ್ರಾಮಾಣಿಕಳೆಂದು ಕಂಡುಬರುವೆ. ಆದುದರಿಂದ ಈ ಅಪರಾಧವು ನಿನ್ನ ಪ್ರೀತಿಪಾತ್ರನದೇ ಇರಬೇಕು. ನಿನ್ನದಲ್ಲವೆಂದು ತೋರುವುದು"

ಪುಷ್ಪಲತೆಯು, "ಮಹಾಪ್ರಭುಗಳೆ! ಮಹಾಪ್ರಭುಗಳೆ! ಕುಮುದ ಚಂದ್ರಬಾಬುಗಳು ನಿರಪರಾಧಿಗಳು" ಎಂದು ಕೂಗಿಕೊಂಡಳು

ರಾಜಕುಮಾರನು ಚಕಿತನಾಗಿ, "ನೀನು ಹೇಳುವುದೇನು? ನಿನಗೆ ಕೆಟ್ಟದಾರಿಯನ್ನವನು ತೋರಿಸಲಿಲ್ಲವೆಂದು ಹೇಳುತ್ತಿರುವೆಯಾ? ಈ ಅಪರಾಧವನ್ನವನು ಮಾಡಲಿಲ್ಲವೆಂದು ಹೇಳುತ್ತಿರುವೆಯಾ?" ಎಂದನು.

"ಮಹಾಪ್ರಭುಗಳೆ! ಆತನು ಈ ಅಪರಾಧವನ್ನೂ ಮಾಡಿಲ್ಲ.

ಆತನ ಮೇಲೆ ಆಪಾದನೆಯಾಗಿರುವ ಮೊದಲನೆಯ ಅಪರಾಧವನ್ನೂ ಮಾಡಿಲ್ಲ. ಇದೇ ನಾನು ಹೇಳಲೆತ್ನಿಸುತ್ತಿರುವುದು.''

''ಮೊದಲನೆಯ ಅಪರಾಧವೆ? ಅವನ ಮೊದಲನೆಯ ಅಪರಾಧ ವಾವುದೆಂಬುದನ್ನು ಬಲ್ಲೆಯಾ? ಅವನ ಮೇಲೆ ಯಾವ ಅಪರಾಧವು ಹೊರಿಸಲ್ಪಟ್ಟು ಶಿಕ್ಷಿತನಾಗಿರುವನೆಂಬುದನ್ನು ಬಲ್ಲೆಯಾ? ಅವನು ರಮಾನಾಥಬಾಬುವಿನೊಡನೆ ಪಿತೂರಿ ನಡೆಸಿ ಉಮಾನಾಥಬಾಬುವಿಗೂ ನೆರೆರಾಜ್ಯದ ಅಧಿಕಾರಿಗಳಿಗೂ ನಡೆದ ಪತ್ರವ್ಯವಹಾರವನ್ನು ಬಚ್ಚಿಟ್ಟಿದ್ದನು. ತಿಳಿಯಿತೋ?''

''ಸ್ವಾಮಿ! ಈ ಬಗೆಯ ಪತ್ರಗಳು ತನ್ನ ಬಳಿಯಿದ್ದುವೆಂಬುದನ್ನು ಆತನು ಅರಿತಿರಲಿಲ್ಲ. ಸ್ವಲ್ಪವೂ ಅರಿತಿರಲಿಲ್ಲ. ನನ್ನ ಪ್ರಾಣವನ್ನಾದರೂ ಒಪ್ಪಿಸಿಬಿಡಲು ಸಿದ್ಧಸಿದ್ದೇನೆ. ಆತನು ತಪ್ಪಿತಸ್ಥನೆಂದು ಎಂದಿಗೂ ನಂಬ ಲಾರೆ ಆತನು ಅಂತಹ ಸರಳಹೃದಯನು ಹಾಗೆ ಆತನಿಗೆ ಆ ಪತ್ರಗಳ ಸಾರಾಂಶವು ತಿಳಿದುಬಿಟ್ಟಿದ್ದರೆ ಅದೆಲ್ಲವನ್ನೂ ನನ್ನೊಡನೆ ನಿರ್ವಂಚನೆ ಯಿಂದ ಹೇಳಿಬಿಡುತ್ತಿದ್ದನು. ಅಷ್ಟು ಪವಿತ್ರವಾದ ಹೃದಯವುಳ್ಳವರು ನನ್ನಿಂದಾವ ರಹಸ್ಯವನ್ನೂ ಮುಚ್ಚಿಟ್ಟಿರಲಾರರು ಇಲ್ಲ ಮಹಾಪ್ರಭುಗಳೆ! ಇಲ್ಲ ತಾವು ಕೋಪಮಾಡಿಕೊಳ್ಳುವುದಾದರೂ ಚಿಂತೆಯಿಲ್ಲ. ಎಲ್ಲವನ್ನೂ ಸ್ಪಷ್ಟವಾಗಿ ಹೇಳಿಬಿಡುತ್ತೇನೆ. ಕುಮುದಚಂದ್ರಬಾಬುಗಳು ಎರಡನೆಯ ಅಪರಾಧದಲ್ಲಿ ಎಷ್ಟು ನಿರ್ದೋಷಿಗಳೋ ಮೊದಲನೆಯ ಅಪರಾಧದಲ್ಲೂ ಅಷ್ಟೇ ನಿರ್ದೋಷಿಗಳು. ಆಹಾ! ತಾವು ನನ್ನ ಕುಮುದಚಂದ್ರರನ್ನು ಅರಿತಿದ್ದರೆ ಎಷ್ಟು ಚೆನ್ನಾಗಿತ್ತು!''

ವಿಷಕಂಠನು ಆ ಮಾತುಗಳನ್ನು ಕೇಳಿ, ''ಅವನು ರಮಾನಾಥನ ಶಿಷ್ಯನು. ಮಹಾಪ್ರಭುಗಳು ಅವನಿಗೆ ಮರಣದಂಡನೆಯನ್ನು ಒಂದು ಬಾರಿ ತಪ್ಪಿಸಿರುವರು. ಅವನ ವಿಷಯವನ್ನು ಅವರು ಚೆನ್ನಾಗಿ ಬಲ್ಲರು'' ಎಂದನು.

ರಾಜಕುಮಾರನು, ''ಸದ್ದುಮಾಡದಿರಿ ಎಂದಾಗಲೇ ಹೇಳಲಿಲ್ಲವೆ! ಈ ರಾಜಕೀಯ ವಿಚಾರಗಳಿಗೂ ಕಲ್ಯಾಣನಗರಿಯ ಟ್ಯೂಲಿಪ್‌ಸಂಘದ ವಿಚಾರಗಳಿಗೂ ಯಾವ ಸಂಬಂಧವೂ ಇಲ್ಲವೆಂದು ಆಗಲೇ ಹೇಳಲಿಲ್ಲವೆ?''

ಎಂದು ಹೇಳಿದನು. ಒಡನೆಯೇ ಹುಬ್ಬುಗಂಟಿಟ್ಟುಕೊಂಡು ವಿಷಕಂಠನನ್ನು ನೋಡುತ್ತ, "ವಿಷಕಂಠಶರ್ಮರೆ! ಟ್ಯೂಲಿಪ್‌ ಪುಷ್ಪದ ವಿಚಾರವಾಗಿ ನೀವೇನೂ ಯೋಚಿಸಬೇಕಾಗಿಲ್ಲ-ತಮಗೆ ಸಲ್ಲಬೇಕಾದ ನ್ಯಾಯವು ದೊರಕುವುದು'' ಎಂದನು.

ವಿಷಕಂಠನು ಆಹ್ಲಾದಿತನಾಗಿ ರಾಜಕುಮಾರನಿಗೆ ವಂದಿಸಿದನು. ಅಧ್ಯಕ್ಷ ರವಿವರ್ಮನು ಅವನನ್ನು ಅಭಿನಂದಿಸಿದನು

ವಿನಯಸಿಂಹನು ಪುಷ್ಪಲತೆಯ ಕಡೆಗೆ ತಿರುಗಿ ಹೇಳತೊಡಗಿದನು- "ಮಗು! ನೀನು ದೊಡ್ಡದೊಂದು ಅಪರಾಧವನ್ನು ಮಾಡುವುದರಲ್ಲಿದ್ದೆ ಯಮ್ಮ! ಆದರೆ ನಿನ್ನನ್ನು ನಾನಾವ ಶಿಕ್ಷೆಗೂ ಗುರಿಮಾಡುವುದಿಲ್ಲ. ನಿಜವಾದ ತಪ್ಪಿತಸ್ಥನು ನಿಮ್ಮಿಬ್ಬರ ಅಪರಾಧಗಳಿಗೂ ಸರಿಯಾದ ಶಿಕ್ಷೆ ಯನ್ನನುಭವಿಸುವನು. ಅವನ ಹೆಸರುಳ್ಳವನು ಪಿತೂರಿ ನಡೆಸಬಹುದು- ರಾಜದ್ರೋಹಿಯಾಗಬಹುದು-ಆದರೆ ಎಂದಿಗೂ ಕಳ್ಳನಾಗಬಾರದು"

ಪುಷ್ಪಲತೆಯು ಉದ್ವೇಗದಿಂದ, "ಕಳ್ಳನೆ! ನನ್ನ ಕುಮುದಚಂದ್ರ ಬಾಬುಗಳು ಕಳ್ಳತನ ಮಾಡುವರೆ! ದಯವಿಟ್ಟು ಅಂತಹ ಮಾತುಗಳನ್ನು ಹೇಳಬೇಡಿ. ಅವರಿಗೆ ಕೇಳಿಬಂದರೆ ಪ್ರಾಣಬಿಡುವರು ಕಳ್ಳತನ ನಡೆ ದಿರುವುದೇ ನಿಜವಾದರೆ ಈ ಮನುಷ್ಯನ ಹೊರತು ಮತ್ತಾರೂ ಅಂತಹ ಕೃತ್ಯವನ್ನು ಮಾಡಿಲ್ಲ" ಎಂದಳು

ವಿಷಕಂಠನು ನಿಶ್ಚಿಂತನಾಗಿ, "ರುಜುವಾತು ತೋರಿಸು" ಎಂದನು.

ಪುಷ್ಪಲತೆಯು, "ರುಜುವಾತು ಮಾಡುತ್ತೇನೆ. ದೇವರ ದಯೆ ಯಿರುವುದಾದರೆ ಸರಿಯಾದ ರುಜುವಾತನ್ನೊದಗಿಸುತ್ತೇನೆ" ಎಂದು ಹೇಳಿ, ವಿಷಕಂಠನನ್ನೇ ನೋಡುತ್ತ "ಟ್ಯೂಲಿಪ್‌ ಪುಷ್ಪವು ನಿಮ್ಮದೇ ಅಲ್ಲವೇ?" ಎಂದಳು.

"ಅಹುದು"

"ಹಾಗಾದರೆ ಟ್ಯೂಲಿಪದ ಸಸಿಗಳೆಷ್ಟಿದ್ದುವು ಹೇಳಿರಿ."

ವಿಷಕಂಠನು ನಿಧಾನವಾಗಿ ಯೋಚಿಸತೊಡಗಿದನು. ಅವನಿಗೆ ತಿಳಿದುಬಂದಿದ್ದ ಎರಡು ಸಸಿಗಳಲ್ಲದೆ ಬೇರೊಂದಿಲ್ಲದೇ ಹೋಗಿದ್ದರೆ ಅವಳು

ಹಾಗೆ ಪ್ರಶ್ನಿಸುತ್ತಿರಲಿಲ್ಲವೆಂದು ನಿರ್ಧರಿಸಿಕೊಂಡವನು, "ಮೂರಿದ್ದುವು" ಎಂದುತ್ತರಕೊಟ್ಟನು.

"ಈ ಸಸಿಗಳೇನಾದುವು?"

"ಸಸಿಗಳೆ! ಏನಾದುವೆನ್ನುವೆಯಾ! ಒಂದು ನಿಷ್ಪ್ರಯೋಜಕವಾಯಿತು ಎರಡನೆಯದು ಪುಷ್ಪವನ್ನು ಬಿಟ್ಟಿದೆ"

"ಮೂರನೆಯದು?"

"ಮೂರನೆಯದೆ!"

"ಮೂರನೆಯದೆಲ್ಲಿದೆ?"

ವಿಷಕಂಠನು ವಿಚಲಿತನಾಗಿ, "ನನ್ನ ಮನೆಯಲ್ಲಿದೆ" ಎಂದನು.

"ಮನೆಯಲ್ಲಿಯೋ? ಎಲ್ಲಿ? ಮಣಿಪುರದಲ್ಲಿದೆಯೋ? ಅಥವಾ ರತ್ನಗಿರಿಯಲ್ಲಿದೆಯೋ?"

"ರತ್ನಗಿರಿಯಲ್ಲಿದೆ"

ಪುಷ್ಪಲತೆಯು "ನೀವು ಸುಳ್ಳುಹೇಳುತ್ತಿರುವಿರಿ!" ಎಂದು ಹೇಳಿ, ರಾಜಕುಮಾರನ ಕಡೆಗೆ ತಿರುಗಿ ಹೇಳತೊಡಗಿದಳು—"ಈ ಮೂರು ಸಸಿಗಳ ನಿಜ ಚರಿತ್ರೆಯನ್ನು ನಾನು ಹೇಳುತ್ತೇನೆ ಕೇಳಿ ಮೊದಲನೆಯದನ್ನು ನನ್ನ ತಂದೆಯು ಬಂದಿಯು ಕಾರಾಗಾರದಲ್ಲಿ ತುಳಿದು ಹಾಕಿದನು ಈ ಮನುಷ್ಯನದನ್ನು ಬಲ್ಲನು ಏಕೆಂದರೆ ಇವನೇ ಅದನ್ನು ಪಡೆಯಲು ಪ್ರಯತ್ನಪಡುತ್ತಿದ್ದನು. ಆದರೆ ವಿಫಲಮನೋರಥನಾಗಿ ಅದನ್ನು ತುಳಿದು ಹಾಕಿದ ನನ್ನ ತಂದೆಯ ಮೇಲೆ ಬಹಳನಾಗಿ ಕೋಪಗೊಂಡನು ಅವರಿಬ್ಬರೂ ಜಗಳವಾಡುವುದೊಂದೇ ಉಳಿದಿತ್ತು -ನಾನು ನೆಟ್ಟ ಎರಡನೆಯ ಸಸಿಯಿಂದಲೇ ಕರಿಯ ಟ್ಯೂಲಿಪವು ವಿಕಸಿತವಾಗಿದೆ ಮೂರನೆಯದು - ಮತ್ತು ಕಡೆಯ ಸಸಿಯು - (ಹಾಗೆ ಹೇಳುತ್ತ ಅವಳು ತನ್ನ ವಕ್ಷಸ್ಥಳದಲ್ಲಿ ಅಡಗಿಸಲ್ಪಟ್ಟಿದ್ದ ಮೂರನೆಯ ಸಸಿಯನ್ನು ಹೊರಕ್ಕೆ ತೆಗೆದಳು) ಇಲ್ಲಿದೆ ನೋಡಿ ಕುಮುದಚಂದ್ರರು ಉಳಿದೆರಡು ಸಸಿಗಳೊಡನೆ ಯಾವ ಕಾಗದದಲ್ಲಿ ಇದನ್ನೂ ಸುತ್ತಿಟ್ಟಿದ್ದರೋ ಅದೇ ಕಾಗದದಲ್ಲಿಯೇ ಈಗಲೂ ಇದೆ ಕುಮುದಚಂದ್ರಬಾಬುಗಳನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋದ ಸಮಯದಲ್ಲಿ ಮೂರು ಸಸಿಗಳನ್ನೂ ಅವರು

ನನಗೆ ಕೊಟ್ಟರು. ಮಹಾಪ್ರಭುಗಳೆ! ತೆಗೆದುಕೊಳ್ಳಿ ಇದನ್ನು ತೆಗೆದುಕೊಳ್ಳಿ "

ಹಾಗೆ ಹೇಳುತ್ತ ಪುಷ್ಪಲತೆಯು ಕಾಗದವನ್ನು ತೆಗೆದು ಸಸಿಯನ್ನು ವಿನಯಸಿಂಹನ ಕೈಗೆ ಕೊಟ್ಟಳು. ಅವನದನ್ನು ತೆಗೆದುಕೊಂಡು ಪರೀಕ್ಷಿಸ ತೊಡಗಿದನು.

ವಿಷಕಂಠನು ಗದ್ಗದಸ್ವರದಿಂದ, "ಮಹಾಪ್ರಭುಗಳೆ! ಈ ಹೆಂಗಸು ಪುಷ್ಪವನ್ನು ಕದ್ದಂತೆಯೇ ಈ ಸಸಿಯನ್ನೂ ಕದ್ದಿರಬಹುದು" ಎಂದು ಹೇಳಿದನು. ವಿನಯಸಿಂಹನು ಸಸಿಯನ್ನು ಪರೀಕ್ಷಿಸುತ್ತಿದ್ದ ರೀತಿಯನ್ನು ಕಂಡು ವಿಷಕಂಠನಿಗೆ ಗಾಬರಿಯಾಗಿದ್ದಿತು ಪುಷ್ಪಲತೆಯು ತನ್ನ ಕೈಯಲ್ಲಿದ್ದ ಕಾಗದದಲ್ಲಿದ್ದ ಪಂಕ್ತಿಗಳನ್ನು ಓದುತ್ತ ಅತೀವ ಸಂತೋಷ ವನ್ನು ಸೂಚಿಸುತ್ತಿದ್ದಳಾಗಿ ವಿಷಕಂಠನ ಗಾಬರಿಯು ಮತ್ತಷ್ಟು ಹೆಚ್ಚಾಗ ತೊಡಗಿದುದು

ಪುಷ್ಪಲತೆಯ ಕಣ್ಣುಗಳು ಕಾಂತಿಯುಕ್ತವಾಗಿ ಹೊಳೆಯತೊಡಗಿ ದುವು ಅವಳು ತನ್ನ ಕೈಯಲ್ಲಿದ್ದ ಪತ್ರವನ್ನು ಅತ್ಯಾಸಕ್ತಿಯಿಂದ ಮೇಲೆ ಮೇಲೆ ಓದಿದಳು ಕಡೆಗೆ ಗಟ್ಟಿಯಾಗೊಂದು ಬಾರಿ ಚೀತ್ಕರಿಸಿ ಆ ಪತ್ರ ವನ್ನು ರಾಜಕುಮಾರನ ಕೈಗೆ ಕೊಡುತ್ತ, "ಮಹಾಪ್ರಭುಗಳೆ! ಓದಿ! ದಯವಿಟ್ಟು ಇದನ್ನು ಓದಿ!" ಎಂದು ಕೂಗಿಕೊಂಡಳು.

ವಿನಯಸಿಂಹನು ಮೂರನೆಯ ಸಸಿಯನ್ನು ರವಿವರ್ಮನ ಕೈಗೆ ಕೊಟ್ಟು ಪತ್ರವನ್ನು ತೆಗೆದುಕೊಂಡು ಓದತೊಡಗಿದನು.

ಪತ್ರವನ್ನು ನೋಡಿದೊಡನೆಯೇ ವಿನಯಸಿಂಹನು ಒಂದು ಹೆಜ್ಜೆ ಯಷ್ಟು ಹಿಂದಕ್ಕೆ ಸರಿದು ನಿಂತನು. ಅವನ ಕೈ ನಡುಗತೊಡಗಿತು. ಪತ್ರವು ಕೆಳಕ್ಕೆ ಬಿದ್ದುಹೋಗುವುದರಲ್ಲಿದ್ದಿತು. ಅವನ ಮುಖದಲ್ಲಿ ದುಃಖವೂ ದಯೆಯೂ ನೋವೂ ಏಕಕಾಲದಲ್ಲುದಯಿಸಿದುವು.

ರಮಾನಾಥಬಾಬುವು ಗೀತಾಪುಸ್ತಕದಿಂದ ಹಾಳೆಯೊಂದನ್ನು ಹರಿದ ಕುಮುದಚಂದ್ರನಿಗೆ ಸೇವಕ ರಾಮವರ್ಮನ ಮೂಲಕ ಕಳುಹಿಸಿದ ಪತ್ರವನ್ನೇ ಈಗ ವಿನಯಸಿಂಹನು ಓದುತ್ತಿದ್ದುದು. ರಾಜಕೀಯ ಪತ್ರ ಗಳನ್ನು ಸುಟ್ಟುಹಾಕಿಬಿಡಬೇಕೆಂದು ಅದರಲ್ಲಿ ರಮಾನಾಥನು ಆಜ್ಞೆ

ಮಾಡಿದ್ದನು ಈ ಆಜ್ಞೆಯನ್ನು ಈ ರೀತಿಯಾಗಿ ಅವನು ಕಳುಹಿದ್ದುದು ವಾಚಕರ ನೆನಪಿನಲ್ಲಿರಬಹುದು—

"ನನ್ನ ಪ್ರೀತಿಪಾತ್ರ ಕುಮುದಚಂದ್ರ!

ನಿನ್ನ ಬಳಿ ನಾನಿಟ್ಟಿರುವ ಕಾಗದಗಳ ಕಟ್ಟನ್ನು ಸುಟ್ಟುಹಾಕು. ಆ ಕಟ್ಟನ್ನು ನೋಡದೆ ಅದನ್ನು ಬಿಚ್ಚದೆ ಸುಟ್ಟುಬಿಡು ಅದರಲ್ಲಿರುವ ವಿಷಯವು ನಿನಗೆ ಎಂದಿಗೂ ತಿಳಿಯದೆ ಇರಲೋಸುಗ ನೀನು ಹಾಗೆ ಮಾಡಬೇಕು ಆ ರಹಸ್ಯಕಾಗದಗಳು ಯಾರ ಬಳಿ ಇರುವುವೋ ಅವರಿಗೆ ಮರಣವುಂಟಾಗುವುದು ಖಂಡಿತ. ಅವುಗಳನ್ನು ಸುಟ್ಟು ಬೂದಿಮಾಡು. ಹಾಗೆ ಮಾಡಿದರೆ ನೀನು ಉಮಾನಾಥ ರಮಾನಾಥರಿಬ್ಬರನ್ನೂ ಉಳಿಸಿ ದಂತಾಗುವುದು ನಿನಗೆ ದೇವರು ಒಳ್ಳೆಯದನ್ನು ಮಾಡಲಿ. ಹೋಗಿ ಬರುತ್ತೇನೆ

20ನೇ ಆಗಸ್ಟ್ (1672) ರಮಾನಾಥ"

ಈ ಪತ್ರದಿಂದ ಕುಮುದಚಂದ್ರಬಾಬುವಿನ ನಿರ್ದೋಷಿತ್ವವೂ ಟ್ಯೂಲಿಪ್ ಪುಷ್ಪದ ಮೇಲಿನ ಅಧಿಕಾರವೂ ವ್ಯಕ್ತವಾದುವು

ಪುಷ್ಪಲತೆಯೂ ವಿನಯಸಿಂಹನೂ ಒಬ್ಬರನ್ನೊಬ್ಬರು ಒಂದು ಬಾರಿ ನೋಡಿದರು ಪುಷ್ಪಲತೆಯ ನೋಟವು, "ನೋಡಿದಿರಾ. ಈಗೆಲ್ಲವೂ ತಮಗೇ ತಿಳಿಯಿತು" ಎನ್ನುವಂತಿತ್ತು. ಅವನ ನೋಟವು, "ಸುಮ್ಮನಿರು. ಕಾದುನೋಡು" ಎನ್ನುವಂತಿತ್ತು

ರಾಜಕುಮಾರನು ತನ್ನ ಹಣೆಯ ಮೇಲೆ ಹರಿದುಹೋಗುತ್ತಿದ್ದ ಸ್ವೇದಕಣಗಳನ್ನು ಒರೆಸಿಕೊಂಡು ನಿಧಾನವಾಗಿ ಪತ್ರವನ್ನು ಮಡಿಸಿ ತನ್ನ ಕಿಸೆಯಲ್ಲಿ ಭದ್ರವಾಗಿಟ್ಟುಕೊಂಡನು ಅವನ ಯೋಚನೆಗಳು ಎಲ್ಲೆಲ್ಲಿಯೋ ಓಡುತ್ತಿದ್ದುವು. ಪಶ್ಚಾತ್ತಾಪದಿಂದಲೂ ಲಜ್ಜೆಯಿಂದಲೂ ಅವನು ಬಹಳವಾಗಿ ಪೀಡಿತನಾಗತೊಡಗಿದ್ದನು.

ಸ್ವಲ್ಪ ಹೊತ್ತಿನಲ್ಲಿಯೇ ರಾಜಕುಮಾರನು ಚೇತರಿಸಿಕೊಂಡು ಪ್ರಯತ್ನಪೂರ್ವಕವಾಗಿ ತಲೆಯೆತ್ತಿ ನೋಡಿ, ಎಂದಿನಂತೆಯೇ ಇದ್ದ ಧ್ವನಿಯಲ್ಲಿ, "ಹೋಗಿ, ವಿಷಕಂಠಶರ್ಮರೆ! ನಿಮಗೆ ನ್ಯಾಯವು ದೊರ ಕುವುದು ಅದರ ಭರವಸೆಯನ್ನಾಗಲೇ ಕೊಟ್ಟಿದ್ದೇನೆ" ಎಂದನು ಬಳಿಕ

ಅಧ್ಯಕ್ಷ ರವಿವರ್ಮನ ಕಡೆಗೆ ತಿರುಗಿ, "ರವಿವರ್ಮಮಹಾಶಯರೆ! ತಾವು ಈಕೆಯನ್ನೂ ಈ ಪುಷ್ಪವನ್ನೂ ಕಾಪಾಡುತ್ತಿರಿ. ನಾನು ಹೋಗಿಬರುತ್ತೇನೆ" ಎಂದನು.

ಎಲ್ಲರೂ ನಮಸ್ಕರಿಸಿದರು. ರಾಜಕುಮಾರನು ಹೊರಟುಹೋದನು. ಹೊರಗಡೆ ಇದ್ದ ಪುರಜನರು ಕರ್ಣವು ಭೇದಿಸಿಹೋಗುವಂತೆ ಜಯಕಾರ ಮಾಡುತ್ತಿದ್ದರು.

ವಿಷಕಂಠನು ಯೋಚನಾಪರನಾಗಿ ಹೋಟಲಿಗೆ ಹಿಂತಿರುಗಿದನು. ವಿನಯಸಿಂಹನು ಪುಷ್ಪಲತೆಯಿಂದ ತೆಗೆದುಕೊಂಡಾ ರಹಸ್ಯಪತ್ರವೇನೆಂದರಿಯದೆ ಅವನು ತಲ್ಲಣಿಸುತ್ತಿದ್ದನು. ರಾಜಕುಮಾರನು ಅದನ್ನು ಓದಿ ಅಷ್ಟು ಜಾಗರೂಕತೆಯಿಂದ ಕಿಸೆಯಲ್ಲಿಟ್ಟುಕೊಂಡುದೇಕೆ? ಇದರರ್ಥವೇನು? ಇದಾವುದೂ ವಿಷಕಂಠನಿಗೆ ತಿಳಿಯಲಿಲ್ಲ.

ಪುಷ್ಪಲತೆಯು ಪುಷ್ಪದ ಬಳಿಗೆ ಹೋಗಿ ಪ್ರೀತಿಪುರಸ್ಸರವಾಗಿ ಅದನ್ನು ಚುಂಬಿಸಿದಳು ಅವಳ ಮನಸ್ಸು ಹಗುರವಾಗತೊಡಗಿತ್ತು. ಅವಳು ದೇವದೇವನನ್ನು ಮನಸ್ಸಿನಲ್ಲಿಯೇ ವಂದಿಸುತ್ತ, "ದೇವದೇವ! ನನ್ನ ಕುಮುದಚಂದ್ರರು ನನಗೆ ಓದುಬರಹವನ್ನು ಕಲಿಸಬೇಕೆಂದು ಯಾವ ಕಾರಣದಿಂದ ಆಜ್ಞೆ ಮಾಡಿದೆಯೋ ಅದೀಗ ವ್ಯಕ್ತವಾಗುತ್ತಿದೆ! ನಿನಗೆ ಅನಂತಾನಂತ ಪ್ರಣಾಮಗಳಿರಲಿ!" ಎಂದಳು.

# ಅಷ್ಟವಿಂಶತಿ ಪರಿಚ್ಛೇದ

## ಕುಮುದನ ಸಂಗೀತ

ಪೂರ್ವಪರಿಚ್ಛೇದದಲ್ಲಿ ವರ್ಣಿತವಾದ ಘಟನೆಗಳು ನಡೆಯುತ್ತಿದ್ದ ಸಮಯದಲ್ಲಿ ಕುಮುದಚಂದ್ರನು ತನ್ನ ಕಾರಾಗಾರದಲ್ಲಿ ಕಾಳೀಚರಣನ ಹಿಂಸೆಯನ್ನನುಭವಿಸುತ್ತಿದ್ದನು. ಜ್ವಲರನು ಗಲ್ಲಿಗೇರಿಸುವವನ ಪಾತ್ರವನ್ನು ಧರಿಸಿ ತನ್ನ ಬಂದಿಗೆ ಅನೇಕ ವಿಧಗಳಲ್ಲಿ ಕಿರುಕುಳ ಕೊಡುತ್ತಿದ್ದನು.

ಕಾಳೀಚರಣನಿಗೆ ಪುಷ್ಪಲತೆಯ ಸಮಾಚಾರವಾಗಲಿ, ನಿರಂಜನನ ವಿಷಯವಾಗಲಿ ತಿಳಿದುಬರಲಿಲ್ಲವಾಗಿ ಇದೆಲ್ಲವೂ ಸೈತಾನನ ಕೃತ್ಯವಾಗಿರ

ಬೇಕೆಂದೂ, ಕುಮುದಚಂದ್ರನು ಸೈತಾನನ ಸೇವಕನಾಗಿದ್ದು ಪ್ರಪಂಚಕ್ಕೆ ಕಳುಹಲ್ಪಟ್ಟಿರಬೇಕೆಂದೂ, ಅವನು ನಿಶ್ಚಯಿಸಿಬಿಟ್ಟನು.

ಹೀಗಾಗಿ ಪುಷ್ಪಲತೆಯು ಅದೃಶ್ಯಳಾದಮೇಲೆ ಮೂರನೆಯ ದಿನ ಕಾಳೀಚರಣನು ಎಂದಿಗಿಂತಲೂ ಹೆಚ್ಚು ಕೋಪವುಳ್ಳವನಾಗಿ ಕುಮುದ ಚಂದ್ರನ ಕಾರಾಗೃಹಕ್ಕೆ ಹೋದನು.

ಕುಮುದಚಂದ್ರನು ಕಿಟಕಿಯ ಬಳಿ ನಿಂತು ಮೊಣಕೈಗಳನ್ನು ಕಿಟಕಿಯ ಕಟ್ಟೆನಮೇಲಿರಿಸಿಕೊಂಡು ಕೈಗಳಿಂದ ತಲೆಗೆ ಆಧಾರವನ್ನಿೀಯುತ್ತ ಆಕಾಶದ ಕಡೆಗೆ ಕಣ್ಣುಗಳನ್ನು ಹರಡುತ್ತ ಕಾಲಕಳೆಯುತ್ತಿದ್ದನು. ಕಿಟಕಿಯ ಮೂಲಕ ಬರುತ್ತಿದ್ದ ಸ್ವಚ್ಛವಾದ ಗಾಳಿಯನ್ನು ಸೇವಿಸುತ್ತ ತನ್ನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುದಂತೆ ಮಾಡುತ್ತಿದ್ದನು. ತನ್ನ ವೇದಾಂತಭಾವವನ್ನು ಅನುಸರಿಸಲು ಸರ್ವಪ್ರಯತ್ನ ಮಾಡುತ್ತಿದ್ದನು ಹಾಗೆಯೇ ರತ್ನಗಿರಿಯ ಕಡೆಗೆ ನೋಡುತ್ತಿದ್ದನು ಅಲ್ಲಿ ಪಾರಿವಾಳಗಳೇನೋ ಇದ್ದುವು ಆದರೆ ಅವನಲ್ಲಿ ಆಶಾಭಾವನೆಯೇನೋ ಇರಲಿಲ್ಲ. ಭವಿಷ್ಯವು ಕಾರ್ಮೋಡಗಳಿಂದ ಆವೃತವಾಗಿದ್ದಿತು.

ಅವನಿಗೆ ಪುಷ್ಪಲತೆಯು ಅದೃಶ್ಯಳಾಗಿದ್ದುದು ತಿಳಿತಿರಲಿಲ್ಲವಾಗಿ, ಅವಳನ್ನಾವಾಗಲೂ ಕಾಳೀಚರಣನು ಕಾಯುತ್ತಿದ್ದುದರಿಂದ ಅವಳು ಬರುತ್ತಿರಲಿಲ್ಲವೆಂದವನು ಭಾವಿಸಿಕೊಂಡನು. ಅವಳು ಬರೆಯಕೂಡದೇಕೆ? ತನ್ನ ಪತ್ರಗಳನ್ನು ಅವನಿಗೆ ತಲಪಿಸಲು ಅವಳಿಗೆ ಸಾಧ್ಯವಿಲ್ಲವೆ? ಇವೇ ಮುಂತಾದ ಪ್ರಶ್ನೆಗಳನ್ನವನು ಹಾಕಿಕೊಳ್ಳುತ್ತ ಅವುಗಳಿಗೆ ತಾನೇ ಉತ್ತರವನ್ನು ಹೇಳಿಕೊಳ್ಳುತ್ತಿದ್ದನು.

ಕೆಲವು ದಿನಗಳಿಂದ ಕಾಳೀಚರಣನ ಕಣ್ಣುಗಳಲ್ಲಿ ಕೆಂಡಗಳನ್ನು ಕಂಡು ಕುಮುದಚಂದ್ರನ ಮನಸ್ಸೂ ಕುದಿಯುತ್ತಿದ್ದಿತು. ಜೈಲರನು ಸ್ವಲ್ಪವೂ ತನ್ನ ಜಾಗರೂಕತೆಯನ್ನು ಸಡಿಲಿಸುವುದಿಲ್ಲವೆಂದವನಿಗೆ ಧೃಡವಾಗಿದ್ದಿತು. ಪಾಪ! ಪುಷ್ಪಲತೆಗೆ ತನಗಿಂತಲೂ ಹೆಚ್ಚು ಕಷ್ಟವಲ್ಲವೆ? ಈ ಕುಡುಕ ಕೊರಮನು ಮಗಳಮೇಲೆ ಸೇಡು ತೀರಿಸಿಕೊಳ್ಳುವ ಸಲುವಾಗಿ ಅವಳಿಗೆ ಅದಾವ ಶಿಕ್ಷೆಗಳನ್ನು ವಿಧಿಸುತ್ತಿರುವನೋ ಕಂಡವರಾರು? ಈ ಯೋಚನೆಯುಂಟಾಗುತ್ತಲೇ ಕುಮುದನಿಗೆ ಹುಚ್ಚು ಹಿಡಿದಂತಾಯಿತು.

ಆದರೆ ಅವನು ಏನನ್ನು ತಾನೆ ಮಾಡಲಾಪನು? ಸರಳರಾದ ನಿಷ್ಕಪಟಿಗಳಾದ ಎರಡು ವ್ಯಕ್ತಿಗಳಮೇಲೆ ದೇವದೇವನು ಹೀಗೆ ಕಷ್ಟಪರಂಪರೆಗಳನ್ನು ಸುರಿಯುತ್ತಿದ್ದುದು ನ್ಯಾಯವೆ? ವಿಧಿಯ ಬುದ್ಧಿಯ ವಿಷಯವಾಗಿ ಕುಮುದನಿಗೆ ಸಂಶಯವುಂಟಾಗತೊಡಗಿತು. ಅತೀವಕಷ್ಟಾನುಭವದಿಂದ ಮಾನವನಿಗೆ ಸಂದೇಹಗಳುತ್ಪನ್ನವಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲವಲ್ಲವೆ?

ಕುಮುದನು ಪುಷ್ಪಲತೆಗೆ ಪತ್ರವನ್ನು ಬರೆಯುವ ಯೋಚನೆ ಮಾಡಿದನು—ಆದರೆ ಅವಳು ಇರುವುದೆಲ್ಲಿ?

ಅವನು ಕಾಳೀಚರಣನಿಗಿಂತ ಮೊದಲೇ ಎಲ್ಲ ವಿಷಯಗಳನ್ನೂ ತಿಳಿಸಿ ಸುರನಗರಿಗೆ ಕಾಗದವನ್ನು ಕಳುಹುವ ಯೋಚನೆ ಮಾಡಿದನು ಕಾಳೀಚರಣನು ಇಲ್ಲದ ವಿಚಾರಗಳನ್ನು ಬರೆದು ತನ್ನನ್ನು ಕಷ್ಟಕ್ಕೆ ಗುರಿಮಾಡುವುವಾಗಿ ಅವನು ನಂಬಿದ್ದನು ಆದರೆ ಬರೆಯುವುದು ಹೇಗೆ? ತನ್ನಿಂದ ಕಾಳೀಚರಣನು ಕಾಗದವನ್ನೂ ಸೀಸದಕಡ್ಡಿಯನ್ನೂ ತೆಗೆದು ಕೊಂಡು ಹೋದನಷ್ಟೆ! ಅವು ಇದ್ದರೂ ತನ್ನ ಪತ್ರವನ್ನು ಕಾಳೀಚರಣನು ಕಳುಹಿಸುವನೆ? ಹೀಗೆಯೇ ಕುಮುದಚಂದ್ರನು ಅದೃಷ್ಟಹೀನರಾದ ಬಂದಿಗಳು ಹೂಡುವ ಉಪಾಯಗಳೆಲ್ಲವನ್ನೂ ಯೋಚಿಸುತ್ತಿದ್ದನು

ಅವನೊಂದು ಬಾರಿ ಕಾರಾಗಾರದಿಂದ ತಪ್ಪಿಸಿಕೊಂಡು ಹೋಗುವ ಯೋಚನೆಮಾಡಿದನು. ಪುಷ್ಪಲತೆಯು ಎದುರಿಗಿರುವವರೆಗೂ ಅವನು ಅಂತಹ ಯೋಚನೆಯನ್ನೇ ಮಾಡಿರಲಿಲ್ಲ. ಆದರೆ ಆ ವಿಷಯವನ್ನು ಯೋಚಿಸಿದಷ್ಟೂ ಅದೆಂತಹ ಅಸಾಧ್ಯಕಾರ್ಯವೆಂಬುದು ಅವನಿಗೆ ಅರಿವಾಗ ತೊಡಗಿದುದು ಅವನು ತನ್ನಲ್ಲಿಯೇ ಯೋಚಿಸತೊಡಗಿದನು–"ಮಣಿಪುರದ ಕಾರಾಗೃಹದಿಂದ ಪಾರಾಗಿಹೋಗುವುದು ಹೇಗೆ? ಹಿಂದಿದ್ದ ಬಂದಿಯು ಓಡಿಹೋದಾಗಿನಿಂದ ಜೈಲಿನವರು ಹೆಚ್ಚು ಜಾಗರೂಕರಾಗಿರುವರಲ್ಲವೆ? ಕಿಟಕಿಗಳಿಗೆ ಸಲಾಕಿಗಳಿರುವುವು ಬಾಗಿಲುಗಳು ಮೊದಲಿಗಿಂತಲೂ ಹೆಚ್ಚು ಭದ್ರವಾಗಿ ಮಾಡಲ್ಪಟ್ಟಿರುವುವು ಕಾವಲುಗಾರರು ಮೊದಲಿಗಿಂತಲೂ ಹೆಚ್ಚಾಗಿ ಜಾಗರೂಕತೆಯಿಂದ ಕಾಯುತ್ತಿರುವರು. ಪುಷ್ಪಲತೆಯೂ ನನ್ನ ಪುಷ್ಪವೂ ಮಾಯವಾದಂದಿನಿಂದ ನಾನು ಸಹನೆಯನ್ನೇ ಕಳೆದು

ಕೊಳ್ಳುತ್ತಿರುವೆನು. ಇದರಿಂದ ಕಾಳೀಚರಣನೊಂದುದಿನ ನನ್ನನ್ನು ನಿಂದಿಸಿ ಹೊಡೆಯಲು ಬರುವನು. ನಾನೂ ಕೋಪದ ಭರದಲ್ಲಿ ಆ ಕೊರಮನ ಕೊರಳನ್ನು ಹಿಂಡುವೆನು."

ಹಾಗೆ ಯೋಚಿಸುತ್ತೆ ಕುಮುದಚಂದ್ರನು ತುಟಿಗಳನ್ನು ಕಚ್ಚುತ್ತೆ ದುರದುರನೆ ಎದುರಿಗಿದ್ದ ಆಕಾಶವನ್ನು ನೋಡತೊಡಗಿದನು. ಕಾಳೀಚರಣನನ್ನು ಮುಗಿಸುವ ಯೋಚನೆಯನ್ನೇ ಚಿಂತಿಸುತ್ತೆ ಅವನು ಪುನಃ ತನ್ನಲ್ಲಿಯೇ ಹೇಳಿಕೊಳ್ಳತೊಡಗಿದನು—"ಸರಿ. ಅವನ ಕತೆಯನ್ನು ಮುಗಿಸಿ ಅವನಲ್ಲಿರುವ ಬಿಯಗದ ಕೈಗಳನ್ನು ಏಕೆ ತೆಗೆದುಕೊಳ್ಳಬಾರದು? ಬಳಿಕ ಅತ್ಯುತ್ತಮಕಾರ್ಯವನ್ನು ಮಾಡಿದವನಂತೆ ಮೆಟ್ಟಿಲುಗಳನ್ನಿಳಿದು ಏಕೆ ಹೋಗಬಾರದು? ಪುಷ್ಪಲತೆಯ ಕೊಟಡಿಗೆ ಹೋಗಿ ಅವಳನ್ನು ಬಂಧನದಿಂದ ಬಿಡಿಸಕೂಡದೇಕೆ? ಅವಳಿಗೆ ಎಲ್ಲವನ್ನೂ ತಿಳಿಸಿ ಅವಳೊಡನೆ ನದಿಗೆ ಹಾರಬಾರದೇಕೆ? ನನಗೆ ಚೆನ್ನಾಗಿ ಈಜುವುದಕ್ಕೆ ಬರುವುದರಿಂದ ಅವಳನ್ನೂ ಉಳಿಸಿ ಬದುಕಬಲ್ಲೆನು—ಪುಷ್ಪಲತೆ! ಆದರೆ ಅಯ್ಯೋ! ದೇವರೆ! ಕಾಳೀಚರಣನು ಅವಳ ತಂದೆಯಲ್ಲವೆ? ಅವಳಿಗೆ ನನ್ನ ಮೇಲೆ ಎಷ್ಟು ಪ್ರೀತಿಯಿದ್ದರೂ ಅವಳ ತಂದೆಯ ಕೊರಳನ್ನು ಮುರಿದುದನ್ನೆಂದಿಗೂ ಕ್ಷಮಿಸಲಾರಳು. ಅವನೆಷ್ಟೇ ಕೆಟ್ಟವನಾದರೂ ಎಂತಹ ಪಿಶಾಚನಾದರೂ ಅವಳ ತಂದೆಯಲ್ಲವೆ?-ಕುಮುದಚಂದ್ರಬಾಬು! ಈ ಯೋಚನೆಯನ್ನು ಬಿಡು - ಇದು ಕೆಟ್ಟಯೋಚನೆ - ಆದರೆ ನನ್ನಗತಿಯೇನು? ಪುನಃ ಪುಷ್ಪಲತೆಯನ್ನು ಪಡೆಯುವ ಮಾರ್ಗವಾವುದು?"

ಹೀಗೆ ಕುಮುದಚಂದ್ರನು ಯೋಚಿಸುತ್ತೆ ಕಿಟಕಿಯ ಬಳಿ ನಿಂತಿದ್ದನು. ಅದೇ ಸಮಯದಲ್ಲಿಯೇ - ಪುಷ್ಪಲತೆಯು ಅದೃಶ್ಯಳಾದಮೇಲೆ ಮೂರನೆಯ ದಿನದಲ್ಲಿ - ಕಾಳೀಚರಣನು ಕುಮುದನ ಕಾರಾಗೃಹವನ್ನು ಪ್ರವೇಶಿಸಿದನು.

ಕಾಳೀಚರಣನ ಕೈಯಲ್ಲಿ ಕೋಲೊಂದಿದ್ದಿತು. ಅವನ ಕಣ್ಣುಗಳು ಕೆಟ್ಟಯೋಚನೆಗಳಿಂದ ಹೊಳೆಯುತ್ತಿದ್ದುವು. ಅವನ ತುಟಿಗಳಮೇಲೆ ಕಿರುನಗೆಯು ಹರಿದಾಡುತ್ತಿತ್ತು. ಅವನ ನಡಿಗೆಯೂ, ಭಾವವೂ ಅವನ ಕೆಟ್ಟಯೋಚನೆಗಳನ್ನು ವ್ಯಕ್ತಪಡಿಸುತ್ತಿದ್ದುವು

ಅವನು ಒಳಕ್ಕೆ ಬಂದುದು ಕುಮುದಚಂದ್ರನಿಗೆ ತಿಳಿಯಿತು ಆದರೆ

ಜೈಲರನ ಹಿಂದೆ ಪುಷ್ಪಲತೆಯು ಬರುವುದಿಲ್ಲವೆಂದು ಬಂದಿಗೆ ತಿಳಿದಿದ್ದಿತಾಗಿ ಅವನು ಹಿಂತಿರುಗಿ ಕೂಡ ನೋಡಲಿಲ್ಲ.

ಕೋಪಾವಿಷ್ಟರಾಗಿರುವವರು ಯಾರ ಮೇಲೆ ಕ್ರೋಧವನ್ನು ತೀರಿಸಲು ಇಷ್ಟಪಡುವರೋ ಅಂತಹವರು ಭೀತಿಪ್ರದರ್ಶನ ಮಾಡಿದರೆ ತಾವೂ ಸಂತೋಷಗೊಳ್ಳುವರು ಆದರೆ ಅವರು ಶಾಂತರಾಗಿದ್ದುಬಿಟ್ಟರೆ ಕ್ರೋಧವುಳ್ಳವರಿಗೆ ಮತ್ತಷ್ಟು ಕ್ರೋಧವುಂಟಾಗುವುದು. ಕಷ್ಟಪಟ್ಟುಕೊಂಡು ಕ್ರೋಧಾವಿಷ್ಟರಾಗಿರುವವರು ತಮ್ಮ ಕ್ರೋಧವನ್ನು ನಷ್ಟಗೊಳಿಸಲಾರರು. ಸ್ವಲ್ಪಮಟ್ಟಿಗಾದರೂ ಗಲಾಟೆಯಾಗದಿದ್ದರೆ ಅವರಿಗೆ ಸುಖವುಂಟಾಗದು. ಕುಮುದಚಂದ್ರನು ಅಲುಗಾಡದೆ ನಿಂತಿರುವುದನ್ನು ಕಂಡು ಕಾಳೀಚರಣನು ಅವನ ಗಮನವನ್ನೆಳೆಯುವುದಕ್ಕಾಗಿ, ಎರಡು ಬಾರಿ, "ಹುಂ, ಹುಂ" ಎಂದು ಶಬ್ದಮಾಡಿದನು

ಕುಮುದನು ತನ್ನಲ್ಲಿಯೇ ಮೆಲ್ಲನೆ ದುಃಖಕರವಾದ ವೇದಾಂತಯುಕ್ತವಾದ ಹಾಡನ್ನು ಹೇಳಿಕೊಳ್ಳುತ್ತಿದ್ದನು—

"ವ್ಯಾಕುಲವೇಕೋ ಮನವೆ।
ಸಾಕುವ ದಾತ ಶ್ರೀಕಾಂತನಿಲ್ಲವೆ॥"

ಈ ಹಾಡನ್ನು ಕೇಳಿದ ಕಾಳೀಚರಣನಿಗೆ ಮತ್ತಷ್ಟು ಕ್ರೋಧವುಂಟಾಯಿತು ಅವನು ನೆಲದ ಮೇಲೆ ಕೋಲನ್ನು ಬಲವಾಗಿ ಕುಟ್ಟಿ "ಓಹೋ! ಮಹಾಶಯರೆ! ನಾನು ಬಂದಿರುವುದು ತಿಳಿದುಬರಲಿಲ್ಲವೋ?" ಎಂದನು

ಕುಮುದಚಂದ್ರನು ತಿರುಗಿ ನೋಡಿ, "ನಮಸ್ಕಾರ" ಎಂದು ಮಾತ್ರ ಹೇಳಿ ಪುನಃ ಹಾಡತೊಡಗಿದನು—

"ನೆಂಟರಿಷ್ಟರು ಬಂಧುಬಳಗವು ಬಯ್ಯಲಿ।
ಗಂಟಿನಾಸೆಗೆ ಸಾಲಗಾರರು ಎಳೆಯಲಿ॥"

ಕಾಳೀಚರಣನು ಗರ್ಜಿಸುತ್ತ, "ಎಲವೋ! ಸೈತಾನಭಕ್ತ! ನನ್ನನ್ನಾಟವಾಡಿಸಬೇಕೆಂದಿರುವೆಯೋ?" ಎಂದು ಕೂಗಿದನು.

ಕುಮುದಚಂದ್ರನು ನಿಶ್ಚಿಂತನಾಗಿ ಹಾಡುತ್ತಿದ್ದನು—

"ತಪ್ಪದೆ ನಾರಸಿಂಹ ಪೊರೆವ ಸಂದೇಹ ಬೇಡ।
ವ್ಯಾಕುಲವೇಕೋ ಮನವೆ॥"

ಕಾಳೀಚರಣನು ಬಂದಿಯ ಸಮೀಪಕ್ಕೆ ಹೋಗಿ, "ಏನು? ಮಹಾಶಯ! ನಿನ್ನ ತಪ್ಪುಗಳನ್ನೊಪ್ಪಿಕೊಳ್ಳುವಂತೆ ಮಾಡುವ ಶಕ್ತಿಯು ನನ್ನಲ್ಲಿಲ್ಲವೆಂದುಕೊಂಡಿರುವೆಯೋ? ನಿನ್ನನ್ನು ಬಲಿಹಾಕಿಬಿಡುತ್ತೇನೆ" ಎಂದನು.

ಕುಮುದನು ತಿರುಗಿ ನೋಡಿ, "ಪ್ರಿಯ ಕಾಳೀಚರಣಬಾಬುಗಳೆ! ತಮಗೆ ಹುಚ್ಚು ಹಿಡಿದಿದೆಯೇನು?" ಎಂದನು

ಕುಮುದಚಂದ್ರನು ಜೈಲರನ ಮುಖವನ್ನು ಸರಿಯಾಗಿ ನೋಡಿದನು. ಅವನ ವಿಕೃತ ಮುಖವನ್ನೂ, ಹೊಳೆಯುತ್ತಿದ್ದ ಕಣ್ಣುಗಳನ್ನೂ, ಬುರುಗಿನಿಂದ ಕೂಡಿದ ಬಾಯನ್ನೂ ನೋಡಿ, "ಇದೇನು! ಇವನು ಹುಚ್ಚನಾಗಿಲ್ಲ. ಕ್ರೋಧಾವೇಶದಿಂದ ಪ್ರಜ್ಞೆಯಿಲ್ಲದವನಂತಾಗಿದ್ದಾನೆ" ಎಂದನು.

ಕಾಳೀಚರಣನು ತನ್ನ ಕೋಲನ್ನು ತಲೆಯಮೇಲೆ ಎತ್ತಿ ಹಿಡಿದು ಆಡಂಬರದಿಂದ ಝುಳಪಿಸತೊಡಗಿದನು. ಆದರೆ ಕುಮುದಚಂದ್ರನು ಅಲುಗಾಡದೆ ಕೈಗಳನ್ನು ಸೊಂಟದಮೇಲಿಟ್ಟುಕೊಂಡು ನಿಂತು, "ಕಾಳೀಚರಣಬಾಬುಗಳೆ! ನನ್ನನ್ನು ಹೆದರಿಸಬೇಕೆಂದು ತಮ್ಮ ಅಭಿಪ್ರಾಯವಿರುವಂತಿದೆ" ಎಂದನು.

"ನಿಜ ನಿನ್ನನ್ನು ಹೆದರಿಸುತ್ತೇನೆ"

"ಯಾವ ಆಯುಧವನ್ನು ಪ್ರಯೋಗಿಸುವಿರಿ?"

"ನನ್ನ ಕೈಯ್ಯಲ್ಲೇನಿದೆ ಮೊದಲು ನೋಡು."

ಕುಮುದನು ಶಾಂತಭಾವದಿಂದ, "ಅದೊಂದು ಕೋಲೆಂದು ತೋರುವುದು. ಈ ಆಯುಧಪ್ರಯೋಗಮಾಡುವುದಾಗಿ ಹೆದರಿಸುವಿರಾ? ನಾನೇನೋ ನಂಬಲಾರೆ" ಎಂದನು

"ಓಹೋ! ನಂಬುವುದಿಲ್ಲವೆ? ಅದೇಕೆ ನಂಬುವುದಿಲ್ಲ?"

"ಏಕೆಂದರೆ, ಯಾವ ಜೈಲರನೇ ಆಗಲಿ ಬಂದಿಯನ್ನು ಹೊಡೆದರೆ ಅವನಿಗೆ ಎರಡು ವಿಧಗಳಲ್ಲಿ ಶಿಕ್ಷೆಯಾಗುವುದು. ಶಿಕ್ಷೆಯನ್ನು ಜೈಲು ಕಾನೂನುಗಳಲ್ಲಿ ಒಂಭತ್ತನೆಯದರಲ್ಲಿ ವಿಶದವಾಗಿ ವಿವರಿಸಿರುವರು–ಅದೇನೆಂದರೆ–'ಯಾವ ಜೈಲರನೇ ಆಗಲಿ, ಇನ್ಸ್‌ಪೆಕ್ಟರನೇ ಆಗಲಿ,

ಕಾವಲುಗಾರನೇ ಆಗಲಿ ಬಂದಿಯಮೇಲೆ ಕೈಮಾಡಿದರೆ ಅವನನ್ನು ಒಡನೆಯೇ ಕೆಲಸದಿಂದ ನಿವೃತ್ತಿಮಾಡಲಾಗುವುದು ' "

"ಸರಿ. ಕೈಮಾಡಿದರೆ ತಾನೆ? ಆ ಕಾನೂನಿನಲ್ಲಿ ಕೋಲಿನ ವಿಷಯ ವನ್ನೇ ಹೇಳಿಲ್ಲ"

"ಎರಡನೆಯ ಶಿಕ್ಷೆಯ ವಿಷಯವು ಕಾನೂನಿನಲ್ಲಿ ಹೇಳಿಲ್ಲ. ಅದನ್ನು ಬೇರೆ ಎಲ್ಲಿಯೋ ವಿವರಿಸಲಾಗಿದೆ–ಅದೇನೆಂದರೆ–'ಯಾವನು ಕೋಲಿನಿಂದ ಹೊಡೆಯುವನೋ ಅವನನ್ನು ಕೋಲಿನಿಂದಲೇ ಹೊಡೆಯಲಾಗುವುದು ' "

ಕಾಳೀಚರಣನಿಗೆ ಕುಮುದನ ಶಾಂತಭಾವವನ್ನು ಕಂಡು ಕಡು ಕೋಪವುಂಟಾಯಿತು. ಅವನು ಕೋಲನ್ನು ಕತ್ತಿಯಂತೆ ಝಳಪಿಸುತ್ತ ಮುಂದೆ ಬಂದನು ಆ ಸಮಯದಲ್ಲಿ ಕುಮುದನು ಮುಂದೆ ನುಗ್ಗಿ ಕೋಲನ್ನು ಕಾಳೀಚರಣನ ಕೈಯಿಂದ ಕಿತ್ತುಕೊಂಡು ತನ್ನ ಕಂಕುಳಲ್ಲಿಟ್ಟುಕೊಂಡನು

ಕಾಳೀಚರಣನು ಕೋಪದಿಂದ ಮೇಲುಸಿರುಬಿಡುತ್ತ ನಿಂತನು.

ಕುಮುದನು ಅವನನ್ನು ಅಣಕಿಸುತ್ತ, "ಛೀ! ಛೀ! ಕೆಲಸದಿಂದ ನಿವೃತ್ತಿ ಹೊಂದುವಂತಹ ಕಾರ್ಯವನ್ನು ಮಾಡಬಹುದೆ?" ಎಂದನು

ಕಾಳೀಚರಣನು, "ಇರಲಿ, ಬೇರೆ ವಿಧದಲ್ಲಿ ನಿನಗೆ ಶಿಕ್ಷೆಮಾಡು ತ್ತೇನೆ" ಎಂದನು.

"ಅಗತ್ಯವಾಗಿ ಆಗಬಹುದು."

"ನನ್ನ ಕೈಗಳು ಬರಿದಾಗಿರುವುದು ಕಾಣುವುದೆ?"

"ನೋಡುತ್ತಿದ್ದೇನೆ. ನೋಡಿ ಆನಂದಪಡುತ್ತಿದ್ದೇನೆ."

"ಸಾಮಾನ್ಯವಾಗಿ ಪ್ರಾತಃಕಾಲದಲ್ಲಿ ಅವು ಹಾಗೆ ಬರಿದಾಗಿರುವುದಿಲ್ಲ ವೆಂಬುದನ್ನು ಬಲ್ಲೆಯಷ್ಟೆ?"

"ಬಲ್ಲೆ. ಆ ಸಮಯದಲ್ಲಿ ಕರಿಯ ಕಲ್ಲನ್ನು ಹೋಲುವ ರೊಟ್ಟಿಯ ಚೂರನ್ನು ತರುವಿರಿ. ಹುಳಿಯೆಂದು ಕರೆಯಲ್ಪಡುವ ನೀರನ್ನೂ ತರುವಿರಿ. ಆದರೆ ಆ ಆಹಾರದಿಂದ ನನಗೆ ಶಿಕ್ಷೆವಿಧಿಸಿದಂತೇನೂ ಆಗುವುದಿಲ್ಲ. ನಾನೇನು ಮಾಡುವೆ ಬಲ್ಲಿರಾ? ಆ ರೊಟ್ಟಿಯನ್ನು ಮಾತ್ರ ತಿನ್ನುತ್ತೇನೆ. ಆ ರೊಟ್ಟಿಯು ನಿಮಗೆಷ್ಟು ಅಸಹ್ಯಕರವಾಗಿರುವುದೋ ನನಗಷ್ಟು ರುಚಿಕರ ವಾಗಿರುವುದು"

"ಅದು ಹೇಗೆ?"

"ಸರಿ ಅದೇನು ದೊಡ್ಡ ವಿಷಯವೆ?"

"ಅದು ಹೇಗೆಂದು ಹೇಳುವೆಯಾ?"

"ಆನಂದದಿಂದ ಹೇಳುತ್ತೇನೆ. ನನಗೆ ಕೆಟ್ಟ ರೊಟ್ಟಿಯನ್ನು ಕೊಟ್ಟು ನನಗೆ ತೊಂದರೆಯನ್ನುಂಟುಮಾಡುತ್ತಿರುವುದಾಗಿ ನೀವು ಭಾವಿಸುವಿರಿ ಅಲ್ಲವೆ?"

"ಮತ್ತೇನು? ಕೊರಮ! ನಿನಗೆ ಸಂತೋಷವಾಗಲೆಂದು ಕೊಡುವೆನೆ?"

"ಸರಿ. ನಾನು ಮಂತ್ರವಾದಿಯಲ್ಲವೆ? ಸೈತಾನನ ಭಕ್ತನಲ್ಲವೆ? ನಿಮ್ಮ ಕೆಟ್ಟ ರೊಟ್ಟಿಯನ್ನು ಉತ್ತಮ ರೊಟ್ಟಿಯಂತೆ ಪರಿವರ್ತನೆ ಮಾಡಿಬಿಡುತ್ತೇನೆ ಅಂತಹ ಆಹಾರವನ್ನು ಯಾರೂ ತಿಂದಿರಲಾರರು ಹೀಗೆ ಮಾಡುವುದರಿಂದ ನನಗೆ ರುಚಿಕರವಾದ ಆಹಾರವು ದೊರಕಿದಂತಾಗುವುದು. ಅಲ್ಲದೆ ನಿಮಗೆ ಕೋಪಬರುವ ಕಾರ್ಯವನ್ನೂ ಮಾಡಿದಂತಾಗುವುದು. ಹೀಗಾಗಿ ನನಗೆ ಎರಡು ವಿಧಗಳಲ್ಲಿ ಸಂತೋಷವುಂಟಾಗುವುದು"

ಕಾಳೀಚರಣನು ಗುರುಗುಟ್ಟುತ್ತ, "ಓಹೋ! ಹಾಗಾದರೆ ನೀನು ಮಂತ್ರವಾದಿಯೆಂದು ಒಪ್ಪಿಕೊಳ್ಳುವೆಯೋ?" ಎಂದು ಕೇಳಿದನು

"ನಿಜ ನಾನು ಮಂತ್ರವಾದಿಯೇ! ಆದರೆ ನಾನು ಈ ವಿಷಯವನ್ನು ಪ್ರಪಂಚಕ್ಕೆಲ್ಲಾ ತಿಳಿಸುವುದಿಲ್ಲ ಏಕೆಂದರೆ ಜನರು ನನ್ನನ್ನು ಜೀವಸಹಿತವಾಗಿ ಸುಟ್ಟುಬಿಡುವರು. ಆದರೆ ಈಗ ನಾವಿಬ್ಬರೇ ಇರುವುದರಿಂದ ನಿಮಗೆ ತಿಳಿಸಲು ಅಭ್ಯಂತರವಿಲ್ಲ"

"ಸರಿ, ಸರಿ ಮಂತ್ರವಾದಿಯು ಕೆಟ್ಟ ರೊಟ್ಟಿಯನ್ನು ಉತ್ತಮ ರೊಟ್ಟಿಯಾಗಿ ಮಾಡಬಲ್ಲನಾದರೆ– ಅವನಿಗೆ ರೊಟ್ಟಿಯನ್ನೇ ಕೊಡದಿದ್ದರೆ ಹಸಿವಿನಿಂದ ಸಾಯುವನಲ್ಲವೆ?"

"ಅದೇನು ಹೇಳಿದಿರಿ?"

"ಸರಿ. ನಿನಗೆ ರೊಟ್ಟಿಯನ್ನು ಕೊಡುವುದೇ ಇಲ್ಲ ಎಂಟು ದಿನಗಳ ಬಳಿಕ ಹೇಗಿರುವೆಯೆಂಬುದನ್ನು ನೋಡಿದರಾಯಿತು"

ಕುಮುದಚಂದ್ರನು ವಿವರ್ಣವದನನಾದನು.

ಕಾಳೀಚರಣನು ಮುಂದೆ ಹೇಳತೊಡಗಿದನು—"ಈ ಕಾರ್ಯವನ್ನು ಈ ದಿನವೇ ಪ್ರಾರಂಭಿಸೋಣ. ನೀನು ದೊಡ್ಡ ಮಂತ್ರವಾದಿ ಈ ಕಾರಾಗೃಹದಲ್ಲಿರುವ ಮರದ ಸಾಮಾನುಗಳನ್ನೇ ರೊಟ್ಟಿಯಂತೆ ಪರಿವರ್ತಿಸಿ ಕೊಂಡು ತಿನ್ನು ನಿನ್ನ ರೊಟ್ಟಿಗಾಗಿ ಕೊಡುವ ಹಣವನ್ನೆಲ್ಲಾ ನನ್ನ ಕಿಸೆಗೆ ಸೇರಿಸಿಬಿಡುತ್ತೇನೆ."

ಕುದುಮನಿಗೆ ಈಗಲೀಗ ಸ್ವಲ್ಪ ಗಾಬರಿಯಾಗಿ, ಭೀಕರ ರೀತಿಯಲ್ಲಿ ಮರಣಹೊಂದಬೇಕಾದೀತೆಂದು ನಡುಗಿದವನಾಗಿ, "ಹಾಗೆ ಮಾಡಿದರೆ ಖೂಸಿಮಾಡಿದಂತಾಗುವುದು" ಎಂದನು.

ಕಾಳೀಚರಣನು ಹಾಸ್ಯವದನನಾಗಿ, "ಚಿಂತಿಸಬೇಡ. ನೀನು ಮಂತ್ರವಾದಿಯಾದುದರಿಂದ ನೀನು ಆಹಾರವಿಲ್ಲದೆಯೇ ಬದುಕಿರಬಲ್ಲೆ" ಎಂದನು

ಕುಮುದನು ಪುನಃ ನಗುತ್ತ, "ಕಾಳೀಚರಣಬಾಬುಗಳೆ! ರತ್ನಗಿರಿ ಯಿಂದ ಪಾರಿವಾಳಗಳನ್ನು ಕರೆಸುತ್ತಿದ್ದೆನೆಂದು ತಾವು ಬಲ್ಲಿರಷ್ಟೆ?" ಎಂದನು.

"ಆದರೇನು?"

"ಪಾರಿವಾಳಗಳು ಆಹಾರವಾಗಬಲ್ಲುವು. ಪ್ರತಿದಿನವೂ ಆ ಆಹಾರ ವನ್ನು ಸೇವಿಸುವವನು ಸಾಯಲಾರನು"

"ಬೆಂಕಿಯೆಲ್ಲಿದೆ?"

"ಬೆಂಕಿಯೆ! ನಾನು ಸೈತಾನನೊಡನೆ ಸಂಬಂಧವಿಟ್ಟುಕೊಂಡಿರುವೆ ನಲ್ಲವೆ! ಸೈತಾನನು ನನಗೆ ಬೆಂಕಿಯನ್ನು ಕೊಟ್ಟು ಸಹಾಯಮಾಡದೆ ಹೋಗುವನೆ? ಅದೇಕೆ? ಬೆಂಕಿಯೇ ಸೈತಾನನ ಮುಖ್ಯವಸ್ತು."

"ಮನುಷ್ಯನು ಎಷ್ಟು ಆರೋಗ್ಯವಂತನಾದರೂ ಪ್ರತಿದಿನವೂ ಪಾರಿ ವಾಳಗಳನ್ನು ಭಕ್ಷಿಸಲಾಗುವುದೆ? ಎಷ್ಟೋ ಮಂದಿ ಪಂಥಗಳನ್ನು ಕಟ್ಟಿ ಕೊಂಡು ಈ ವಿಷಯವಲ್ಲಿ ಸೋಲನ್ನೊಪ್ಪಿಕೊಂಡಿರುವರು."

"ಸರಿ ಪಾರಿವಾಳಗಳ ಭಕ್ಷಣವು ಬೇಸರವಾದರೆ ನದಿಯಲ್ಲಿರುವ ಮೀನುಗಳನ್ನು ಬರಮಾಡುತ್ತೇನೆ."

ಕಾಳೀಚರಣನು ಅಪ್ರತಿಭನಾಗಿ ಕಣ್ಣುಗಳನ್ನು ದೊಡ್ಡದಾಗಿ ತೆರೆದು ನೋಡತೊಡಗಿದನು. ಕುಮುದನು ಮುಂದುವರಿಸುತ್ತ, "ನನಗೆ ಮೀನು

ಗಳೆಂದರೆ ಪ್ರಾಣ. ನೀವು ನನಗೆ ಅವನ್ನು ಕೊಡುವುದೇ ಇಲ್ಲ. ಸಂ. ನೀವು ನನಗೆ ಉಪವಾಸ ಮಾಡಿಸುವಿರಿ. ನಾನು ಅದರಿಂದೊಂದು ಪ್ರಯೋಜನವನ್ನುಂಟುಮಾಡಿಕೊಳ್ಳುತ್ತೇನೆ. ಮೀನುಗಳ ಭಕ್ಷಣದಿಂದ ಸ್ವಲ್ಪ ಶರೀರ ಸ್ಥಿತಿಯನ್ನು ಉತ್ತಮಗೊಳಿಸಿಬಿಡುತ್ತೇನೆ" ಎಂದು ಹೇಳಿದನು.

ಕಾಳೀಚರಣನು ಕೋಪದಿಂದಲೂ ಭೀತಿಯಿಂದಲೂ ಮೂರ್ಛೆ ಬೀಳುವುದರಲ್ಲಿದ್ದನು. ಆದರೆ ಅವನು ಬೇಗನೆ ಚೇತರಿಸಿಕೊಂಡು, ಕಿಸೆಯಲ್ಲಿ ಕೈಯನ್ನಿಟ್ಟುಕೊಂಡು, "ನೀನು ಬಲವಂತಪಡಿಸುವೆಯಾದುದರಿಂದ ಬೇರೆ ಉಪಾಯವಿಲ್ಲ" ಎಂದನು ಒಡನೆಯೇ ಕಿಸಯಿಂದ ಕೈಯನ್ನು ಹೊರಕ್ಕೆ ತೆಗೆದನು. ಅವನ ಕೈಯಲ್ಲಿ ಚೂರಿಯೊಂದಿದ್ದಿತು. ಕುಮುದನು, "ಓಹೋ! ಚೂರಿಯೆ!" ಎನ್ನುತ್ತ ಕೋಲಿನಿಂದ ಆತ್ಮರಕ್ಷಣೆ ಮಾಡಿಕೊಳ್ಳಲು ಸಿದ್ಧನಾಗಿ ನಿಂತನು.

## ಏಕೋನತ್ರಿಂಶತಿ ಪರಿಚ್ಛೇದ

### ಕುಮುದನು ಕಾಳೀಚರಣನ ಸಾಲವನ್ನು ತೀರಿಸಿದುದು

ಇಬ್ಬರೂ ಕ್ಷಣಕಾಲ ಮೌನವಾಗಿ ನಿಂತರು – ಕಾಳೀಚರಣನು ಚೂರಿಯಿಂದ ಚುಚ್ಚಲು ಸಿದ್ಧನಾಗುತ್ತಿದ್ದನು – ಕುಮುದನು ಆತ್ಮರಕ್ಷಣೆಯಲ್ಲಿ ನಿರತನಾಗಿದ್ದನು. ಹೀಗೆಯೇ ಕಾಲಕಳೆದರೆ ಈ ಯುದ್ಧವು ಬಹಳ ಹೊತ್ತು ಹಿಡಿಯಬಹುದೆಂದೂಹಿಸಿ ಕುಮುದಚಂದ್ರನು ಜೈಲರನ ಕೋಪ ಕಾರಣಗಳನ್ನರಿಯಲು ಹೆಚ್ಚು ಕುತೂಹಲಾವಿಷ್ಟನಾಗಿ ಮೊದಲು ಮಾತನಾಡಿದನು—"ನಿಮಗೆ ನಿಜವಾಗಿ ಬೇಕಾದುದೇನು?"

"ನನಗೆ ಬೇಕಾದುದನ್ನು ಹೇಳುತ್ತೇನೆ ಕೇಳು. ನನ್ನ ಮಗಳು ಪುಷ್ಪಲತೆಯನ್ನು ಪುನಃ ನನ್ನ ಬಳಿಗೆ ಕಳುಹಿಸು."

"ನಿಮ್ಮ ಮಗಳೆ?"

"ಅಹುದು. ನನ್ನ ಮಗಳು – ಪುಷ್ಪಲತೆ. ನಿನ್ನ ಸೈತಾನನ ಮಂತ್ರ

ಗಳನ್ನುಪಯೋಗಿಸಿ ಅವಳನ್ನು ಅಪಹರಿಸಿರುವೆ. ಅವಳೆಲ್ಲಿರುವಳೆಂದು ಈಗಲಾದರೂ ಹೇಳುವೆಯೋ?''

ಕಾಳೀಚರಣನು ಹೆಚ್ಚುಹೆಚ್ಚಾಗಿ ಕೋಪಪ್ರದರ್ಶನಮಾಡ ತೊಡಗಿದನು.

ಕುಮುದನು ಗಾಬರಿಯಿಂದ, ''ಪುಷ್ಪಲತೆಯು ಮಣಿಪುರದಲ್ಲಿಲ್ಲ ವೇನು?'' ಎಂದನು.

''ಅವಳಿಲ್ಲವೆಂಬುದನ್ನು ನೀನೇ ಚೆನ್ನಾಗಿ ಬಲ್ಲೆ. ಮತ್ತೊಂದು ಬಾರಿ ಹೇಳುತ್ತೇನೆ ಕೇಳು. ಅವಳನ್ನು ಪುನಃ ಕರೆತರುವೆಯೋ ಇಲ್ಲವೋ?''

''ಅರ್ಥವಾಯಿತು. ನನ್ನನ್ನು ಮೋಸಗೊಳಿಸಲು ಇದೊಂದುಪಾಯ ವನ್ನು ಹೂಡಿರುವಿರಿ.''

''ಕಡೆಯ ಬಾರಿ ಕೇಳಿನೋಡುತ್ತೇನೆ. ನನ್ನ ಮಗಳೆಲ್ಲಿ ಹೇಳು ವೆಯೋ ಇಲ್ಲವೋ?''

''ಕ್ರೂರಮ! ನಿನಗೆ ತಿಳಿಯದಿದ್ದರೆ ಊಹಿಸಿಕೊ''

ಕಾಳೀಚರಣನು ಕೋಪಾತಿಶಯದಿಂದ ಕೆಂಪೇರಿದ ಮುಖವುಳ್ಳವ ನಾಗಿ, ''ನಿಲ್ಲು, ನಿಲ್ಲು'' ಎನ್ನುತ್ತ ಮುಂದರಿದು ಬಂದು, ''ಆಹಾ! ನೀನು ಏನನ್ನೂ ಹೇಳಲಾರೆಯಲ್ಲವೆ? ಇರಲಿ. ಹಲ್ಲುಗಳನ್ನು ಮುರಿದು ಹಾಕುತ್ತೇನೆ'' ಎಂದನು.

ಕಾಳೀಚರಣನು ಮತ್ತೊಂದು ಹೆಜ್ಜೆಯಷ್ಟು ಮುಂದೆ ಬಂದು, ತನ್ನ ಕೈಯ್ಯಲ್ಲಿದ್ದ ಆಯುಧವನ್ನು ಕುಮುದನಿಗೆ ತೋರಿಸುತ್ತ, ''ಈ ಚೂರಿ ಯನ್ನು ನೋಡಿದೆಯಾ? ಇದರಿಂದ ಎಷ್ಟೋ ಹುಂಜಗಳನ್ನು ತೀರಿಸಿ ಬಿಟ್ಟಿದ್ದೇನೆ ಅವುಗಳ ಒಡೆಯನಾದ ಸೈತಾನನನ್ನೂ ಇದರಿಂದಲೇ ತೀರಿಸಿ ಬಿಡುತ್ತೇನೆ" ಎಂದು ಕೂಗಿಕೊಂಡನು.

"ಅಯ್ಯೋ! ಮಡೆಯ! ಇದೇನು! ನಿಜವಾಗಿ ನನ್ನನ್ನು ಕೊಲ್ಲ ಬೇಕೆಂದಿರುವೆಯಾ?"

"ನಿನ್ನ ಹೃದಯವನ್ನು ಸೀಳಿ ನನ್ನ ಮಗಳನ್ನು ಎಲ್ಲಿ ಬಚ್ಚಿಟ್ಟಿರುವೆ ಯೆಂಬುದನ್ನು ಕಂಡುಹಿಡಿಯುತ್ತೇನೆ."

ಕಾಳೀಚರಣನು ಹಾಗೆ ಹೇಳುತ್ತ ಕುಮುದನ ಕಡೆಗೆ ನುಗ್ಗಿದನು. ಆ ಹುಚ್ಚನ ಕೈಯಲ್ಲಿ ಚೂರಿಯಿರುವವರೆಗೆ ತನಗೆ ನಿಸ್ತಾರವಿಲ್ಲವೆಂದರಿತು ಕುಮುದನು ತಡೆಮಾಡದೆ ಕೋಲಿನಿಂದ ಕಾಳೀಚರಣನ ಕೈಮೇಲೆ ಬಲವಾಗಿ ಹೊಡೆದನು. ಆ ಕೈಯಲ್ಲಿಯೇ ಚೂರಿಯಿದ್ದಿತು. ಪೆಟ್ಟಿನಿಂದ ಕೈಯಲ್ಲಿದ್ದ ಚೂರಿಯು ನೆಲದಮೇಲೆ ಬಿದ್ದಿತು. ಕುಮುದನು ಅದರ ಮೇಲೆ ತನ್ನ ಕಾಲನ್ನಿಟ್ಟುಕೊಂಡು ನಿಂತನು.

ಕಾಳೀಚರಣನಿಗೆ ಪೆಟ್ಟಿನ ನೋವಿನಿಂದಲೂ ನಿರಾಯುಧನಾದುದರಿಂದುಂಟಾದ ಲಜ್ಜೆಯಿಂದಲೂ ಹುಚ್ಚುಹಿಡಿಯತೊಡಗಿತು. ಅವನು ಮುಂದೇನು ಮಾಡುವುದೆಂದು ಯೋಚಿಸುವಷ್ಟರಲ್ಲಿ ಕುಮುದನು ಅವನನ್ನು ಕೋಲಿನಿಂದ ಬಡಿಯತೊಡಗಿದನು.

ಸ್ವಲ್ಪ ಹೊತ್ತಿನಲ್ಲಿಯೇ ಕಾಳೀಚರಣನು ಕ್ಷಮಾಪಣೆಯನ್ನು ಕೇಳುವ ಪರಿಸ್ಥಿತಿಯೊದಗಿದುದು. ಆದರೆ ಆ ವೇಳೆಗೆ ಕಾರಾಗೃಹವೆಲ್ಲವೂ ನಡುಗಿಹೋಗುವಂತೆ ಗಟ್ಟಿಯಾಗಿ ಅವನು ಕೂಗಿಕೊಂಡು ಗಲಾಟೆಮಾಡಿದ್ದನಾಗಿ, ಇನ್ಸ್‌ಪೆಕ್ಟರನೊಬ್ಬನೂ, ನಾಲ್ಕಾರು ಮಂದಿ ಕಾವಲುಗಾರರೂ ಬೇಗನೆ ಆ ಸ್ಥಳಕ್ಕೆ ಓಡಿಬಂದರು. ಅವರು ನೋಡಲಾಗಿ ಕುಮುದಚಂದ್ರನು ಕಾಲಕೆಳಗೆ ಚೂರಿಯನ್ನು ತುಳಿದಿಟ್ಟುಕೊಂಡು ನಿಂತು ಕಾಳೀಚರಣನನ್ನು ಕೋಲಿನಿಂದ ಹೊಡೆಯುತ್ತಿದ್ದನು! ಈ ಸಾಕ್ಷಿಗಳನ್ನು ನೋಡುತ್ತಲೇ ತನ್ನ ಪರಿಣಾಮವು ಮುಗಿಯಿತೆಂದು ಕುಮುದನು ಭಾವಿಸಿಕೊಂಡನು. ಮೊದಲಿನಿಂದ ನಿಂತು ಎಲ್ಲವನ್ನೂ ಅವರು ನೋಡಿದ್ದರೆ ಅವನ ಪರಿಸ್ಥಿತಿಗಾಗಿ ಪರಿತಾಪ ಪಡುತ್ತಿದ್ದರೋ ಏನೋ? ಆದರೆ ವಾಸ್ತವವಾಗಿ ಪ್ರಕೃತ ವಿದ್ಯಮಾನಗಳು ಕುಮುದನ ಹಿತಕ್ಕೆ ವಿರೋಧವಾಗಿದ್ದುವು.

ಒಂದು ನಿಮಿಷದಲ್ಲಿ ಕುಮುದನು ನಿರಾಯುಧನಾಗಬೇಕಾಯಿತು ಕಾಳೀಚರಣನನ್ನು ಕಾವಲುಗಾರರು ಎಬ್ಬಿಸಿ ನಿಲ್ಲಿಸಿದರು. ಅವನು ಕೋಪದಿಂದಲೂ ನೋವಿನಿಂದಲೂ ಬುಸುಗುಟ್ಟುತ್ತಿದ್ದನು. ಪರ್ವತದ ಅಂಚಿನಲ್ಲಿ ಕಂಡುಬರುವ ಸಣ್ಣ ಗುಡ್ಡಗಳಂತೆ ಅವನ ಬೆನ್ನಿನಮೇಲೆಯೂ ಭುಜಗಳಮೇಲೆಯೂ ಈವೇಳೆಗಾಗಲೇ ಬಾಸುಂಡೆಗಳು ಮೇಲೆದ್ದು ಕಾಣಬರುತ್ತಿದ್ದುವು.

ಕುಮುದನು ಕಾಳೀಚರಣನಮೇಲೆ ಕೈಮಾಡಿದ ವಿಚಾರವನ್ನು ಕಾರಕೂನನೊಬ್ಬನು ಬರೆದುಕೊಳ್ಳುತ್ತೆ ಕರಡುಪ್ರತಿಯೊಂದನ್ನು ಸಿದ್ಧಪಡಿಸ ತೊಡಗಿದನು ಅದನ್ನು ಕಾಳೀಚರಣನ ಹೇಳಿಕೆಯಮೇಲೆ ತಯಾರಿಸಿದ ರಾದುದರಿಂದ ಅದು ಸ್ವಲ್ಪ ಭೀಕರವಾಗಿಯೇ ಇತ್ತೆಂದು ಹೇಳಬೇಕಾಗಿಲ್ಲ ಕುಮುದನು ಬಹುಕಾಲದಿಂದ ಸಂಧಾನ ಮಾಡಿಕೊಂಡಿದ್ದು ಅನೇಕ ದಿನಗಳವರೆಗೆ ಈ ಭೀಕರಕೃತ್ಯವನ್ನೆಸಗಲು ಆಲೋಚಿಸಿಕೊಂಡಿದ್ದು ಈಗ ಕಾಳೀಚರಣನನ್ನು ಖೂನಿಮಾಡಲೆತ್ನಿಸಿದನೆಂದು ಆ ಕರಡುಪ್ರತಿಯಲ್ಲಿ ಉಲ್ಲೇಖಿಸಲ್ಪಟ್ಟಿದ್ದಿತು

ಆ ಪ್ರತಿಯಲ್ಲಿ ಉಕ್ತವಾದ ಆಪಾದನೆಯನ್ನು ಮಾಡಿದಮೇಲೆ ಕಾಳೀಚರಣನು ಕಾವಲುಗಾರರೊಡನೆ ಗೊಣಗುತ್ತೆ ಹೊರಟನು. ಈವೇಳೆಗೆ ಅವನ ದೇಹವೆಲ್ಲವೂ ಬಾಸುಂಡೆಗಳಿಂದ ತುಂಬಿಹೋಗಿತ್ತು

ಈ ಸಮಯದಲ್ಲಿ ಕುಮುದನನ್ನು ಹಿಡಿದಿದ್ದ ಕಾವಲುಗಾರರು ಮಣಿಪುರದ ಕಾರಾಗಾರದ ನಿಯಮಗಳನ್ನೂ ಕಟ್ಟಳೆಗಳನ್ನೂ ಕುಮುದನಿಗೆ ವಿವರಿಸಿ ಹೇಳತೊಡಗಿದರು. ಆದರೆ ಅವನು ಕಾರಾಗೃಹಕ್ಕೆ ಬಂದಾಗ ಅವನಿಗೆ ನಿಯಮಗಳೆಲ್ಲವನ್ನೂ ಓದಿ ಹೇಳಿದ್ದರಾಗಿ ಪುನಃ ಯಾವುದನ್ನೂ ಅವನಿಗಾಗಿ ಹೇಳಬೇಕಾಗಿರಲಿಲ್ಲ ಸುಮಾರು ಐದುವರ್ಷ ಗಳಹಿಂದೆ ಮಾತ್ರ ಮನೋಹರನೆಂಬೊಬ್ಬ ಬಂದಿಯ ವಿಷಯದಲ್ಲಿ ಈ ನಿಯಮಗಳು ಪೂರ್ತಿಯಾಗಿ ಅನುಸರಿಸಲ್ಪಟ್ಟಿದ್ದುವೆಂದು ಕುಮುದನಿಗೆ ಕಾವಲುಗಾರರ ಮೂಲಕ ತಿಳಿಯಿತು. ಆ ವಿಷಯವನ್ನು ಕಾವಲುಗಾರರು ಒತ್ತಿಯೊತ್ತಿ ಹೇಳತೊಡಗಿದರು ಮನೋಹರನು ಕುಮುದನಷ್ಟು ಅಪರಾಧವನ್ನು ಕೂಡ ಮಾಡಿರಲಿಲ್ಲ. ಅವನು ತನ್ನ ಗಂಜಿಯನ್ನು ಮುಟ್ಟಿ ನೋಡಿ ಬಹಳ ಬಿಸಿಯೆಂದು ಕೋಪಗೊಂಡು ಅದನ್ನು ಜೈಲರನ ಮುಖದ ಮೇಲೆಸೆದಿದ್ದನು. ಈ ಸ್ನಾನದ ಫಲವಾಗಿ ಜೈಲರನು ಮುಖವನ್ನು ಒರೆಸಿಕೊಂಡಾಗ ಅವನ ಮುಖದ ಮೇಲಿನ ಚರ್ಮವೇ ಎದ್ದುಬಂದಿತು ಹೀಗೆ ಜೈಲರನಿಗುಂಟುಮಾಡಿದ ಅನಾನುಕೂಲಕ್ಕಾಗಿ ಮನೋಹರನಿಗೆ ಮರಣದಂಡನೆಯಾಯಿತು. ಹನ್ನೆರಡು ಗಂಟೆಗಳು ಕಳೆಯುವಷ್ಟರಲ್ಲಿ ಮನೋಹರನನ್ನು ಕಾರಾಗಾರದಿಂದ ಕರೆದುಕೊಂಡು ಹೋದರು. ಅಲ್ಲಿ

ಅವನ ಹೆಸರನ್ನು ಹೊಡೆದುಹಾಕಲಾಯಿತು. ಅಲ್ಲಿಂದ ಅವನನ್ನು ವೈದಾನವೊಂದಕ್ಕೆ ಕರೆದುಕೊಂಡು ಹೋದರು. ಅಲ್ಲಿ ಮೊಣಕಾಲೂರಿ ಕುಳಿತುಕೊಳ್ಳುವಂತೆ ಅವನನ್ನು ಬಲವಂತಪಡಿಸಿದರು. ಆಗ ಕಾರಾಗಾರದ ಹನ್ನೆರಡು ಮಂದಿ ಕಾವಲುಗಾರರಲ್ಲಿ ಪ್ರತಿಯೊಬ್ಬನೂ ಸಾರ್ಜೆಂಟನ ಸಂಕೇತವ ಪ್ರಕಾರ ಬಹಳ ಬುದ್ಧಿ ವ್ಯಯಮಾಡಿ ಒಂದೊಂದು ಗುಂಡನ್ನು ಮನೋಹರನ ದೇಹದಲ್ಲಿ ಕೂಡಿಸಿದನು ಇದರ ಫಲವಾಗಿ ಅಲ್ಲಿಯೇ ಕ್ಷಣಮಾತ್ರದಲ್ಲಿ ಮನೋಹರನು ಮಡಿದನು.

ಈ ಆಹ್ಲಾದಕರಸಂಗತಿಯನ್ನು ಆಸಕ್ತಿಯಿಂದ ಕೇಳಿ ಕುಮುದಚಂದ್ರನು, "ಆಹಾ! ಹನ್ನೆರಡುಗಂಟೆಗಳೊಳಗಾಗಿಯೇ ಇಷ್ಟೆಲ್ಲವನ್ನೂ ಮಾಡಿಬಿಟ್ಟರೆ?" ಎಂದನು.

ಈ ಕತೆಯನ್ನು ವಿವರಿಸಿದ್ದ ಕಾವಲುಗಾರನು, "ಅಹುದು. ಸರಿಯಾಗಿ ನನಗೆ ಜ್ಞಾಪಕವಿದೆ ಅವನಿಗೆ ಮರಣದಂಡನೆಯು ವಿಧಿಸಲ್ಪಟ್ಟು ಹನ್ನೆರಡುಗಂಟೆಗಳು ಕೂಡ ಪೂರ್ತಿಯಾಗಿ ಕಳೆದಿರಲಿಲ್ಲ" ಎಂದನು

ಕುಮುದಚಂದ್ರನು, "ಈ ವಿಷಯುವನ್ನು ಹೇಳಿದ್ದಕ್ಕಾಗಿ ಅನೇಕ ವಂದನೆಗಳು" ಎಂದನು.

'ಈ ವಿಷಯುಗಳನ್ನು' ವಿವರಿಸಿದ ಕಾವಲುಗಾರನ ಮುಖದಮೇಲೆ ಕಿರುನಗೆಯು ಮೂಡಿತ್ತು. ಅವನು ತನ್ನ ವರ್ಣನೆಗಾಗಿ ತಾನೇ ಆಹ್ಲಾದಪಡುತ್ತಿದ್ದನು. ಆ ಕಿರುನಗೆಯು ಆರಿಹೋಗುವಷ್ಟರಲ್ಲಿ ಕಾರಾಗಾರದ ಹೊರಗಡೆ ಅದಾರೋ ನಡೆದುಬರುತ್ತಿದ್ದ ಶಬ್ದವು ಕೇಳಿಬಂದುದು

ಸರದಾರನೊಬ್ಬನು ಕಾರಾಗಾರದೊಳಕ್ಕೆ ಬಂದನು ಕಾವಲುಗಾರರು ಮರ್ಯಾದಾಪೂರ್ವಕವಾಗಿ ಹಿಂದಕ್ಕೆ ಸರಿದು ನಿಂತರು. ಆ ಸಮಯದಲ್ಲಿ ಕಾರಕೂನನು ತನ್ನ ಕರಡುಪ್ರತಿಯನ್ನು ಪೂರ್ತಿಗೊಳಿಸುವ ಪ್ರಯತ್ನದಲ್ಲಿದ್ದನು.

ಸರದಾರನು, "ಇದು ಹನ್ನೊಂದನೆಯ ನಂಬರಿನ ಕಾರಾಗೃಹವೆ?" ಎಂದನು.

ಕಾವಲುಗಾರನೊಬ್ಬನು, "ಅಹುದು ಸ್ವಾಮಿ!" ಎಂದು ಹೇಳಿದನು.

"ಹಾಗಾದರೆ ಇದು ಬಂದಿಯಾದ ಕುಮುದಚಂದ್ರನ ಕಾರಾಗೃಹವೆ?"

"ಅಹುದು ಸ್ವಾಮಿ!"

"ಬಂದಿಯೆಲ್ಲಿ?"

ಕುಮುದನು ಎಷ್ಟು ಧೈರ್ಯ ತಂದುಕೊಂಡರೂ ವಿವರ್ಣನಾಗದಿರಲು ಸಾಧ್ಯವಾಗಲಿಲ್ಲ. ಅವನು, "ಇಲ್ಲಿದ್ದೇನೆ" ಎಂದು ಪ್ರಶ್ನೆಗೆ ಉತ್ತರವಿತ್ತನು.

ಸರದಾರನು ಬಂದಿಯ ಕಡೆಗೆ ತಿರುಗಿ, "ನೀನು ಡಾಕ್ಟರ್ ಕುಮುದ ಚಂದ್ರನೆ?" ಎಂದು ಕೇಳಿದನು.

"ಅಹುದು."

"ಹಾಗಾದರೆ ನನ್ನೊಡನೆ ನಡೆ."

ಕುಮುದಚಂದ್ರನಿಗೆ ಮರಣದ ಪ್ರಥಮಸೋಪಾನವನ್ನು ಹತ್ತಿದಂತೆ ಭಾವನೆಯಾಗಿ, "ಓಹೋ! ಈ ಮಣಿಪುರದ ಕಾರಾಗೃಹದಲ್ಲಿ ಎಷ್ಟು ಬೇಗನೆ ಕಾರ್ಯಮಾಡುತ್ತಾರೆ! ಆ ಕ್ರೂರನುನು ಹನ್ನೆರಡುಗಂಟೆಗಳ ಅವಧಿಯನ್ನು ಹೇಳಿದ್ದನಲ್ಲಾ!'' ಎಂದು ಹೇಳಿಕೊಂಡನು

ಅವಧಿಯನ್ನು ಹೇಳಿದ್ದ ಕಾವಲುಗಾರನು, ''ಆಹಾ! ನಾನು ಹೇಳಿದುದೇನು ನೋಡಿದೆಯಾ?'' ಎಂದು ಮೆಲ್ಲನೆ ಬಂದಿಯ ಕಿವಿಯಲ್ಲಿ ಹೇಳಿದನು.

''ನೀನು ಹೇಳಿದುದೆಲ್ಲವೂ ಸುಳ್ಳು.''

''ಅದು ಹೇಗೆ?''

''ನೀನು ಹನ್ನೆರಡುಗಂಟೆಗಳ ಅವಧಿಯಿರುವುದಾಗಿ ಹೇಳಲಿಲ್ಲವೆ?"

''ಅಹುದು. ನಿಜ. ಆದರೆ ನೋಡು. ರಾಜಾವಿನಯಸಿಂಹನ ಸ್ವಂತ ಸರದಾರನೂ ಅವನ ಪರಮಮಿತ್ರನೂ ಆದ ಅರುಣಸಿಂಹನೇ ನಿನ್ನನ್ನು ಕರೆದುಕೊಂಡು ಹೋಗುತ್ತಿದ್ದಾನೆ. ಇಂತಹ ಗೌರವವನ್ನು ಬಡ ಮನೋಹರನಿಗೆ ಯಾರೂ ತೋರಿಸಲಿಲ್ಲ."

ಕುಮುದಚಂದ್ರನು ದೀರ್ಘವಾಗಿ ಉಸಿರನ್ನೆಳೆದುಕೊಳ್ಳುತ್ತ, ''ಇರಲಿರಲಿ. ರಮಾನಾಥಬಾಬುವಿನ ಸಾಕುಮಗನೂ, ಪ್ರಾಮಾಣಿಕನೂ ಆಗಿರುವವನು ಆ ಮನೋಹರನಷ್ಟೇ ಗುಂಡ-ಗಳನ್ನು ಸ್ವೀಕರಿಸಬಲ್ಲನೆಂಬುದನ್ನು ತೋರಿಸುತ್ತೇನೆ'' ಎಂದನು.

ಹಾಗೆ ಹೇಳುತ್ತ ಅವನು ದರ್ಪದಿಂದ ಕಾರಕೂನನ ಮುಂದೆಯೇ ಹೋದನು. ಕಾರಕೂನನು ಸರದಾರನನ್ನು ನೋಡಿ, "ಸ್ವಾಮಿ! ಅರುಣಸಿಂಹರೆ! ಕರಡುಪ್ರತಿಯು ಇನ್ನೂ ಪೂರ್ತಿಯಾಗಿ ಸಿದ್ಧವಾಗಿಲ್ಲ" ಎಂದನು.

ಅರುಣಸಿಂಹನು, "ಅದು ಪೂರ್ತಿಯಾಗಬೇಕಾದ ಆವಶ್ಯಕತೆಯಿಲ್ಲ" ಎಂದನು.

ಕಾರಕೂನನು ಸರಿಯೆನ್ನುತ್ತ ತನ್ನ ಲೇಖಣಿಯನ್ನೂ ಕಾಗದವನ್ನೂ ತೆಗೆದಿಟ್ಟನು

ಕುಮುದನು ತನ್ನಲ್ಲಿಯೇ ಯೋಚಿಸಿಕೊಳ್ಳುತ್ತ, "ಮಾನವನ ಹೆಸರು ಶಾಶ್ವತವಾಗಿ ನಿಲ್ಲಬೇಕಾದರೆ ಅವನು ತನ್ನ ಹೆಸರನ್ನು ಮಗುವಿಗಾಗಲಿ, ಪುಷ್ಪಕ್ಕಾಗಲಿ, ಪುಸ್ತಕಕ್ಕಾಗಲಿ ಕೊಡಬೇಕು. ನನಗೆ ಅಂತಹ ಭಾಗ್ಯವಾವುದೂ ಇಲ್ಲವೆಂದು ತೋರುವುದು" ಎಂದುಕೊಂಡನು.

ಆದರೂ ತನ್ನ ದುಃಖಪೂರಿತಯೋಚನೆಗಳನ್ನು ಅಡಗಿಸುವ ಯತ್ನ ಮಾಡುತ್ತ ಆ ನಿರ್ಭಾಗ್ಯನು ಅವಿಚಲಿತ ಹೃದಯದಿಂದಲೂ ಗರ್ವದಿಂದಲೂ ಸರದಾರನ ಹಿಂದೆಯೇ ನಡೆದನು.

ಮೈದಾನಕ್ಕೆ ಎಷ್ಟು ದೂರವಿದೆಯೆಂದು ದಯಾಪೂರಿತನಾದ ಕಾವಲುಗಾರನನ್ನು ಪ್ರಶ್ನಿಸಬೇಕೆಂದು ಕುಮುದನಿಗೆ ಆಶೆಯಾಗಿದ್ದಿತು. ಆದರೆ ಅವನು ಸಮೀಪದಲ್ಲಿರಲಿಲ್ಲ ಆ ದಯಾಪೂರಿತನು ಆ ವಿಷಯವೆಲ್ಲವನ್ನೂ ನಿರ್ವಂಚನೆಯಿಂದ ವಿಶದಪಡಿಸುತ್ತಿದ್ದನೆಂಬುದರಲ್ಲಿ ಕುಮುದನಿಗಾವ ಸಂದೇಹವೂ ಇರಲಿಲ್ಲ! ಕುಮುದನಿಗೆ ಒಂದು ವಿಷಯದಲ್ಲಿ ಮಾತ್ರ ಬಹಳ ಭೀತಿಯಿದ್ದಿತು ಜೀವನಪಥದ ಅಂತ್ಯಭಾಗದಲ್ಲಿ ಪುಷ್ಪಲತೆಯನ್ನು ಕಾಣದೆ ಕಾಳೀಚರಣನನ್ನು ಕಾಣಬೇಕಾಗುವುದಾದರೆ ಗತಿಯೇನು? ತಂದೆಯ ಕಣ್ಣಿನಲ್ಲಿ ಎಂತಹ ಸಂತೋಷವಿರುವುದು! ಮಗಳು ಒಂದು ವೇಳೆ ಕಂಡುಬಂದರೆ ಅವಳ ನಯನಗಳಲ್ಲಿ ಎಷ್ಟು ದುಃಖವಿರುವುದು! ನಿಜವಾಗಿ ಆ ಬಡಪಾಯಿಯು ಪುಷ್ಪಲತೆಯ ಯೋಚನೆಯನ್ನೂ ಅವಳ ಸಾಕುಮಗುವಾದ ಕೃಷ್ಣಪುಷ್ಪವನ್ನೂ ನೆನೆನೆನೆದು ಅಳದೇ ಇದ್ದುದು ಆಶ್ಚರ್ಯಕರವೆನ್ನಬೇಕು!

ಕುಮುದನು ಎಡಕ್ಕೂ ಬಲಕ್ಕೂ ನೋಡಿದನು. ಕಾಳೀಚರಣನಾಗಲಿ ಪುಷ್ಪಲತೆಯಾಗಲಿ ಕಾಣಬರಲಿಲ್ಲ. ಮೈದಾನವನ್ನು ಸೇರುತ್ತಲೇ ಅವನು ಸೈನಿಕರಿರುವರೇನೆಂದು ಸುತ್ತಲೂ ನೋಡಿದನು. ಕೆಲವರು ಸೈನಿಕರೇನೋ ಅಲ್ಲಿ ಸೇರಿದ್ದರು. ಆದರೆ ಅವರು ಸಾಲಾಗಿ ನಿಂತು ಬಂದೂಕುಗಳನ್ನು ಹಿಡಿದಿರಲಿಲ್ಲ. ಒಬ್ಬರಿಗೊಬ್ಬರು ಆನಂದದಿಂದ ಮಾತನಾಡಿಕೊಳ್ಳುತ್ತಿದ್ದರು. ನೋಡಿ ಕುಮುದನಿಗೆ ಆಶ್ಚರ್ಯವಾಗತೊಡಗಿತು.

ಆ ಸಮಯದಲ್ಲಿ ಕುಂಟುತ್ತ ಎಡವುತ್ತ ಕಾಳೀಚರಣನು ಕೋಲೊಂದರ ಮೇಲೆ ಕೈಯೂರಿಕೊಂಡು ಜೈಲರನ ಭವನದಿಂದ ಬಂದನು. ಅವನ ಕಣ್ಣುಗಳಲ್ಲಿ ದ್ವೇಷವು ತುಂಬಿದ್ದಿತು. ಅವನು ಕುಮುದನ ಬಳಿಗೆ ಬಂದು ಅನರ್ಗಳವಾಗಿ ಬೈಗಳ ಮಳೆಯನ್ನು ಕರೆಯತೊಡಗಿದನು. ಕುಮುದನು ಅಸಹ್ಯಪಟ್ಟುಕೊಳ್ಳುತ್ತ, ಸರದಾರನ ಕಡೆಗೆ ತಿರುಗಿ, "ಸ್ವಾಮಿ! ಇಂತಹ ಸಮಯದಲ್ಲಿ ಈ ಮನುಷ್ಯನು ನನ್ನನ್ನು ಅವಮಾನಪಡಿಸಲು ಪ್ರಯತ್ನಿಸುವುದನ್ನು ತಾವು ನೋಡುತ್ತ ನಿಲ್ಲಬಾರದು" ಎಂದನು.

ಸರದಾರನು ನಗುತ್ತ, "ಕೇಳಿ ಕುಮುದಚಂದ್ರರೆ! ಈ ದೊಡ್ಡ ಮನುಷ್ಯನು ತಮ್ಮನ್ನು ದ್ವೇಷಿಸುತ್ತಿರುವುದು ಸಹಜವೇ ಅಲ್ಲವೆ? ತಾವು ಅವನಿಗೆ ಬಹಳ ಹೆಚ್ಚು ಶಿಕ್ಷೆಯನ್ನು ವಿಧಿಸಿದಂತಿದೆ" ಎಂದನು.

"ಆದರೆ ಆತ್ಮರಕ್ಷಣೆಗಾಗಿ ನಾನು ಹಾಗೆ ಮಾಡಬೇಕಾಯಿತಲ್ಲವೆ?"

ಸರದಾರನು ವೇದಾಂತಪ್ರವಚನಮಾಡಿದವನಂತೆ, "ಇರಲಿ. ಅವನು ಮಾತನಾಡಿಕೊಳ್ಳಲಿ, ಬಿಡಿ. ಈ ಸಮಯದಲ್ಲಿ ತಮಗೆ ಅದರಿಂದ ಬಾಧಕವೇನು?" ಎಂದನು.

ಎಂತಹ ಉತ್ತರ! ಎಂತಹ ಕಟುಕತನ! ಕುಮುದನು ಈ ಉತ್ತರವನ್ನು ಕೇಳಿ ಚಕಿತನಾದನು. ಅವನ ಶರೀರದಿಂದ ಸ್ವೇದವಾಹಿನಿಗಳು ಸುರಿದುವು. ರಾಜಾವಿನಯಸಿಂಹನ ಆಪ್ತಮಿತ್ರರ ಗುಂಪಿಗೆ ಸೇರಿದವನು ಹೀಗೆ ಹೇಳಬಹುದೆ? ತನಗಾವ ಸ್ನೇಹಿತರೂ ಇಲ್ಲವೆಂದೂ ತಾನು ತಪ್ಪಿಸಿಕೊಳ್ಳಲಾವ ಉಪಾಯವೂ ಇಲ್ಲವೆಂದೂ ಕುಮುದನಿಗೆ ಅರಿವಾಗತೊಡಗಿ, ದೇವರು ನಡೆಸಿದಂತಾಗಲೆಂದು ಅವನು ವಿಧಿವಶಕ್ಕೆ ತನ್ನ ಅದೃಷ್ಟವನ್ನೊಪ್ಪಿಸಿದನು. ಸರದಾರನು ಕುಮುದನ ಯೋಚನಾತರಂಗಗಳು ಮುಗಿಯುವ

ವರೆಗೆ ಮೌನವಾಗಿಯೇ ಇದ್ದನು. ಕಡೆಗೆ ಕುಮುದನು ಅವನನ್ನು ನೋಡಿ, "ಸ್ವಾಮಿ! ಹೇಳೋಣಾಗಲಿ. ಈಗ ನಾನೆಲ್ಲಿಗೆ ಹೋಗಬೇಕು?" ಎಂದನು.

ಸರದಾರನು ನಾಲ್ಕು ಕುದುರೆಗಳ ಗಾಡಿಯೊಂದನ್ನು ತೋರಿಸಿ, "ಅದರಲ್ಲಿ ಕುಳಿತುಕೊಳ್ಳಿ" ಎಂದನು. ಇಂತಹ ಮರ್ಯಾದೆಗಳನ್ನು ಸುರನಗರಿಯ ಕಾರಾಗೃಹದಲ್ಲಿ– ಕುಮುದನು ಅನುಭವಿಸಿದ್ದನು. ಅವನು ತನ್ನಲ್ಲಿಯೇ, "ಇರಲಿ. ಈ ಮೈದಾನದಲ್ಲಿಯೇ ನನಗೆ ಮರ್ಯಾದೆ ಮಾಡುವಂತೆ ತೋರುತ್ತಿಲ್ಲ" ಎಂದು ಹೇಳಿಕೊಂಡನು. ಈ ಮಾತುಗಳನ್ನು ಸ್ವಲ್ಪ ಗಟ್ಟಿಯಾಗಿಯೇ ಹೇಳಿಕೊಂಡನಾಗಿ ಸಮೀಪದಲ್ಲಿದ್ದ ವಾಚಾಳಿ ಕಾವಲುಗಾರನು ಅವನ್ನು ಕೇಳಿದನು. ಆ ದಯಾಪೂರಿತನು ಕುಮುದನಿಗೆ ಹೊಸ ವಿಷಯವೊಂದನ್ನು ತಿಳಿಸಬೇಕೆಂದು ಯೋಚಿಸಿಕೊಂಡನು. ಸರದಾರನು ಆ ಸಮಯದಲ್ಲಿ ಗಾಡಿಯಮೇಲೆ ಕಾಲೊಂದನ್ನಿಟ್ಟುಕೊಂಡು ಗಾಡಿಯವನಿಗೆ ಅದೇನನ್ನೋ ಆಜ್ಞೆಮಾಡುವುದರಲ್ಲಿ ನಿರತನಾಗಿದ್ದನು. ಕಾವಲುಗಾರನು ಗಾಡಿಯ ಬಾಗಿಲಬಳಿ ಬಂದು ಮೆಲ್ಲನೆ ಪಿಸುಮಾತಿನಲ್ಲಿ ಕುಮುದನಿಗೆ ಹೇಳತೊಡಗಿದನು—"ಕೆಲವು ಸಮಯಗಳಲ್ಲಿ ಬಂದಿಯನ್ನು ಸುಟ್ಟು ಬೂದಿಮಾಡುವುದಕ್ಕೆ ಮೊದಲು ಅವನನ್ನು ಅವನ ಸ್ವಂತಪಟ್ಟಣಕ್ಕೆ ಕರೆದುಕೊಂಡು ಹೋಗುವುದುಂಟು. ಅಲ್ಲಿ ಬಂದಿಯ ಸ್ವಂತಮನೆಯ ಮುಂದೆ ಅವನನ್ನು ಗಲ್ಲಿಗೇರಿಸಿಬಿಡುವರು. ಅದರಿಂದ ಜನರಿಗೆ ಪಾಠವೊಂದನ್ನು ಕಲಿಸಿದಂತಾಗುವುದು. ಎಲ್ಲವನ್ನೂ ಸಂದರ್ಭಾನುಸಾರ ಮಾಡುವರು."

ಕುಮುದನು ಇಂತಹ ಅಮೂಲ್ಯ ವಿಷಯವನ್ನು ತಿಳಿಸಿದ ಕಾವಲುಗಾರನನ್ನು ಸನ್ನೆಯಿಂದಲೇ ವಂದಿಸಿ ತನ್ನಲ್ಲಿಯೇ ಹೇಳಿಕೊಳ್ಳತೊಡಗಿದನು—"ಆಪ್ಯಾಯಮಾನವಾದ ಸಂಗತಿಯನ್ನು ತಿಳಿಸುವ ಸಂದರ್ಭವೊದಗಿದಾಗಲೆಲ್ಲಾ ಈ ಮಹಾತ್ಮನು ತಪ್ಪದೆ ಅಂತಹ ಸಂದರ್ಭವನ್ನುಪಯೋಗಿಸಿಕೊಳ್ಳುವನು. ಇವನಿಗೆ ನಿಜವಾಗಿ ಕೃತಜ್ಞನಾಗಿರಬೇಕಾಗಿದೆ."

ಗಾಡಿಯು ಹೊರಟುಹೋಯಿತು. ಕಾಳೀಚರಣನು ತನ್ನ ಹಿಡಿತದಿಂದ ತಪ್ಪಿಸಿಕೊಂಡು ಪರಾರಿಯಾಗುವ ವೈರಿಯನ್ನು ನೋಡಿದನು. ಅವನು ಮುಷ್ಟಿಗಳನ್ನು ಶತ್ರುವಿನ ಕಡೆಗೆ ತೋರಿಸುತ್ತ, "ಆಹಾ!

ಕೊರಮ! ದಗಾಖೋರ! ಇವನು ನನ್ನ ಮಗಳನ್ನು ಹಿಂದಿರುಗಿಸಿ ನನ್ನಲ್ಲಿಗೆ ಕಳುಹದೆ ಓಡಿಹೋಗುತ್ತಿದ್ದಾನೆ. ಎಂತಹ ನಾಚಿಕೆಗೇಡು" ಎಂದು ಗರ್ಜಿಸಿದನು.

ಕುಮುದನು ಗಾಡಿಯಲ್ಲಿ ಕುಳಿತು, "ನನ್ನನ್ನು ರತ್ನಗಿರಿಗೆ ಕರೆದು ಕೊಂಡು ಹೋಗುತ್ತಾರೆಯೆ! ಹಾಗೆ ಮಾಡಿದರೆ ನನ್ನ ಸಸ್ಯಭೂಮಿಗಳು ಬಹಳ ಕೆಟ್ಟುಹೋಗಿವೆಯೆ ಇಲ್ಲವೆ ನೋಡಲನುಕೂಲವಾಗುವುದು" ಎಂದುಕೊಂಡನು.

## ತ್ರಿಂಶತಿ ಪರಿಚ್ಛೇದ

### ಕುಮುದನಿಗೆ ಸಿದ್ಧವಾಗಿದ್ದ ವಧೆ ಎಂತಹುದು?

ಪ್ರಾತಃಕಾಲದಲ್ಲಿಯೂ ಮಧ್ಯಾಹ್ನದಲ್ಲಿಯೂ ಗಾಡಿಯು ಎಲ್ಲಿಯೂ ನಿಲ್ಲಲಿಲ್ಲ. ಸುಮಾರು ಐದುಗಂಟೆಯ ವೇಳೆಗೆ ಮೂವತ್ತು ನಲವತ್ತು ಮೈಲಿಗಳ ದೂರ ಪ್ರಯಾಣವು ಸಾಗಿದ್ದಿತು. ರತ್ನಗಿರಿಯ ಪಕ್ಕದಲ್ಲಿಯೇ ಗಾಡಿಯು ಹೋಯಿತಾದರೂ ಅಲ್ಲಿ ನಿಲ್ಲಲಿಲ್ಲ. ಕುಮುದನು ಸರದಾರನಿಗೆ ಅನೇಕ ಪ್ರಶ್ನೆಗಳನ್ನು ಹಾಕಿದನು. ಅವನಿಗೆ ಉತ್ತರವಾವುದೂ ದೊರಕ ಲಿಲ್ಲ. ವಾಚಾಳಿಯಾದ ಕಾವಲುಗಾರನು ಇಂತಹ ಸಮಯದಲ್ಲಿ ಪಕ್ಕದಲ್ಲಿದ್ದಿದ್ದರೆ ಬಹಳ ಅನುಕೂಲವಾಗುತ್ತಿತ್ತೆಂದು ಕುಮುದನು ಯೋಚಿಸಿಕೊಂಡನು. ಅವನಿದ್ದಿದ್ದರೆ ಕೇಳುವುದಕ್ಕೆ ಮುಂಚೆಯೇ ಸರ್ವ ವಿಷಯಗಳನ್ನೂ ತಿಳಿಯಬಹುದಾಗಿದ್ದಿತು.

ಪ್ರಯಾಣಿಕರಿಬ್ಬರೂ ಗಾಡಿಯಲ್ಲಿಯೇ ರಾತ್ರಿಯನ್ನು ಕಳೆದರು ಮರುದಿನ ಪ್ರಾತಃಕಾಲವಾದಮೇಲೆ ಮೂರುಗಂಟೆಗಳು ಕಳೆದ ಬಳಿಕ ಅವರು ಕಲ್ಯಾಣನಗರಿಯನ್ನು ಸೇರಿದರು.

ಕಲ್ಯಾಣನಗರಿಯಲ್ಲೇನು ನಡೆಯಿತೆಂಬುದನ್ನು ಕುಮುದನು ಬಲ್ಲವ ನಾಗಿರಲಿಲ್ಲ. ಘಟನೆಗಳು ತಾವಾಗಿ ಅವನಿಗೆ ತಿಳಿದುಬರುವವರೆಗೆ ನಾವು ಅವನನ್ನು ಅಂಧಕಾರದಲ್ಲಿಯೇ ಬಿಟ್ಟಿರುವೆವು. ಆದರೆ ನಮ್ಮ ಕಥಾ ನಾಯಕನಿಗಿಂತಲೂ ಮೊದಲು ವಾಚಕರು ಎಲ್ಲ ವಿಷಯಗಳನ್ನೂ ತಿಳಿಯ ಬೇಕಾಗಿರುವುದರಿಂದ ಅವರಿಗೆಲ್ಲವನ್ನೂ ವಿಶದಪಡಿಸುವೆವು.

ಪುಷ್ಪಲತೆಯೂ ಕೃಷ್ಣಪುಷ್ಪವೂ ಅವಳಿಜವಳಿ ಸೋದರಿಯರಂತೆ ಅಧ್ಯಕ್ಷ ರವಿವರ್ಮನ ಬಳಿ ನಿಂತರೆಂಬುದು ವಾಚಕರಿಗೆ ತಿಳಿದಿದೆಯಷ್ಟೆ. ರಾಜಕುಮಾರನು ಪುನಃ ಹೇಳಿಕಳುಹಿಸುವವರೆಗೆ ಪುಷ್ಪಲತೆಗೆ ಅವನ ಭೇಟಿಗವಕಾಶವಾಗಲಿಲ್ಲ. ಯಾವ ದಿನ ಮೊದಲು ಅವಳು ವಿನಯಸಿಂಹ ನನ್ನು ನೋಡಿದ್ದಳೋ ಆ ದಿನ ಸಾಯಂಕಾಲ ಅಧಿಕಾರಿಯೊಬ್ಬನು ರವಿವರ್ಮನ ಮನೆಗೆ ಬಂದನು. ವಿನಯಸಿಂಹನ ಆಜ್ಞೆಯಂತೆ ಅವನು ಬಂದನೆಂದೂ, ಪುಷ್ಪಲತೆಯು ಪೌರಭವನಕ್ಕೆ ಬರಬೇಕೆಂದು ರಾಜ ಕುಮಾರನು ಅಪ್ಪಣೆ ಮಾಡಿದ್ದನೆಂದೂ ಆ ಅಧಿಕಾರಿಯು ಹೇಳಿದನು.

ಪುರಭವನದಲ್ಲಿ ರಾಜಕುಮಾರನು ಪುಷ್ಪಲತೆಗಾಗಿ ಕಾದಿದ್ದನು. ಅವಳು ಅಲ್ಲಿಗೆ ಬಂದಾಗ ಅವನೊಡನೆ ಯಾರೂ ಇರಲಿಲ್ಲ. ಒಂದು ದೊಡ್ಡ ನಾಯಿಯು ಮಾತ್ರ ಅವನನ್ನೇ ದೃಷ್ಟಿಸಿ ನೋಡುತ್ತ ಕುಳಿತಿದ್ದಿತು. ತನ್ನ ಯಜಮಾನನ ಮನಸ್ಸಿನಲ್ಲಿದ್ದ ಯೋಚನೆಗಳನ್ನು ಮುಖಾವಲೋಕನ ದಿಂದ ಕಂಡುಹಿಡಿಯುವುದು ಮಾನವಮಾತ್ರನಿಗೆ ಅಸಾಧ್ಯವಾಗಿದ್ದರೂ ತಾನು ಮಾತ್ರ ಕಂಡುಹಿಡಿಯಬಲ್ಲೆನೆಂಬ ಹೆಮ್ಮೆಯಿಂದಿದ್ದಂತೆ ನಾಯಿಯು ವಿನಯಸಿಂಹನ ಮುಖವನ್ನೇ ನಟ್ಟ ದೃಷ್ಟಿಯಿಂದ ನೋಡುತ್ತಿದ್ದಿತು.

ವಿನಯಸಿಂಹನು ಕೆಲವು ನಿಮಿಷಗಳವರೆಗೆ ಬರೆಯುತ್ತಿದ್ದನು. ಬಳಿಕ ಕಣ್ಣೆತ್ತಿ ನೋಡಿ, ಪುಷ್ಪಲತೆಯು ಬಾಗಿಲಬಳಿಯೇ ನಿಂತಿದ್ದುದನ್ನು ಕಂಡು, ಲೇಖಣಿಯನ್ನು ಕೆಳಗಿಡದೆ, "ಮಗು! ಇಲ್ಲಿ ಬಾ" ಎಂದನು.

ಪುಷ್ಪಲತೆಯು ಕೆಲವು ಹೆಜ್ಜೆಗಳಷ್ಟು ದೂರ ಮುಂದೆ ಬಂದಳು.

ವಿನಯಸಿಂಹನು, ಕುಳಿತುಕೊಳ್ಳೆಂದು ಹೇಳಿದನು.

ರಾಜಕುಮಾರನು ಅವಳನ್ನೇ ನೋಡುತ್ತಿದ್ದನಾಗಿ ಅವಳು ಕುಳಿತು ಕೊಂಡಳು. ಅವನು ಪುನಃ ತಾನು ಬರೆಯುತ್ತಿದ್ದ ಕಾಗದದ ಕಡೆಗೆ ತಿರುಗುತ್ತಲೇ ಪುಷ್ಪಲತೆಯು ಲಜ್ಜೆಯಿಂದ ಬಾಗಿಲಬಳಿಗೆ ಹಿಂತಿರುಗಿ ಹೋದಳು.

ವಿನಯಸಿಂಹನು ಪತ್ರವನ್ನು ಮುಗಿಸಿದನು. ಈ ವೇಳೆಗೆ ನಾಯಿಯು ಪುಷ್ಪಲತೆಯ ಬಳಿಗೆ ಹೋಗಿ ಅವಳನ್ನು ಆದ್ಯಂತವೂ ಪರೀಕ್ಷಿಸಿ ಅವ ಳೊಡನೆ ಸ್ನೇಹಭಾವವನ್ನು ಪ್ರಕಟಿಸತೊಡಗಿತು. ವಿನಯಸಿಂಹನು

ಅದನ್ನು ನೋಡಿ, "ಓಹೋ! ಅವಳ ಗುಣಾವಗುಣಗಳನ್ನು ನೀನೂ ಅರಿತಿಯಾ?" ಎಂದನು. ಬಳಿಕ ಪುಷ್ಪಲತೆಯ ಕಡೆಗೇ ನಟ್ಟ ದೃಷ್ಟಿ ಯಿಂದ ನೋಡುತ್ತ, "ಮಗು! ಇಲ್ಲಿ ಬಾ" ಎಂದನು.

ರಾಜಕುಮಾರನಿಗೆ ಇಪ್ಪತ್ತುಮೂರು ವರ್ಷಗಳಾಗಿದ್ದುವು. ಪುಷ್ಪ ಲತೆಗೆ ಹದಿನೆಂಟು ಅಥವಾ ಇಪ್ಪತ್ತು ವರ್ಷಗಳಾಗಿದ್ದುವು. ಆದುದರಿಂದ ಅವನು "ತಂಗಿ"ಯೆಂದು ಸಂಬೋಧಿಸಬಹುದಾಗಿದ್ದಿತು. ಆದರೆ ಅವನು "ಮಗು!" ಎಂದು ಸಂಬೋಧಿಸಿ ಹೇಳತೊಡಗಿದನು—"ಮಗು! ಈಗ ನಾವಿಬ್ಬರೇ ಇಲ್ಲಿದ್ದೇವೆ. ಎಲ್ಲ ವಿಷಯಗಳನ್ನೂ ವಿವರವಾಗಿ ಚರ್ಚಿ ಸೋಣ."

ಪುಷ್ಪಲತೆಯು ನಡುಗಿದಳು. ಆದರೆ ರಾಜಕುಮಾರನ ಮುಖದಲ್ಲಿ ದಯೆಯೇ ಕಂಡುಬರುತ್ತಿದ್ದಿತಾಗಿ ಅವಳು ತೊದಲುತ್ತ, "ಮಹಾಪ್ರಭು ಗಳೆ!" ಎಂದು ಮಾತ್ರ ಹೇಳಿ ಮುಂದೆ ಹೇಳಲಾರದವಳಾಗಿ ನಿಂತಳು.

"ಮಣಿಪುರದಲ್ಲಿ ನಿನ್ನ ತಂದೆಯಿರುವನಲ್ಲವೆ?"

"ಅಹುದು, ಮಹಾಪ್ರಭುಗಳೆ!"

"ಅವನ ಮೇಲೆ ನಿನಗೆ ಪ್ರೀತಿಯಿಲ್ಲವೆ?"

"ಇಲ್ಲ ಮಹಾಪ್ರಭುಗಳೆ!—ಅಂದರೆ ತಂದೆಯನ್ನು ಮಗಳು ಎಷ್ಟು ಪ್ರೀತಿಸಿ ಗೌರವಿಸಬೇಕೋ ಅಷ್ಟು ಪ್ರೀತಿಗೌರವಗಳು ಅವನಮೇಲಿಲ್ಲ ವೆನ್ನುವುದು ನಿಜ."

"ತಂದೆಯನ್ನು ಪ್ರೀತಿಸಿ ಗೌರವಿಸದಿರುವುದು ಕೆಟ್ಟುದು - ಆದರೆ ಸುಳ್ಳು ಹೇಳದಿರುವುದು ಒಳ್ಳೆಯದು"

ಪುಷ್ಪಲತೆಯು ಅಧೋವದನಳಾಗಿ ನೆಲದಕಡೆಯೇ ನೋಡುತ್ತ ನಿಂತಳು.

"ನಿನ್ನ ತಂದೆಯನ್ನೇಕೆ ಪ್ರೀತಿಸುವುದಿಲ್ಲ?"

"ಅವನು ಕೆಟ್ಟವನು."

"ಕೆಟ್ಟತನವನ್ನು ಹೇಗೆ ತೋರಿಸಿದ್ದಾನೆ?"

"ಅವನು ಬಂದಿಗಳನ್ನು ಪೀಡಿಸಿ ಕಾಡಿಸಿ ಹಿಂಸೆಪಡಿಸುವನು."

"ಎಲ್ಲರನ್ನೂ ಹಿಂಸಿಸುವನೆ?"

"ಎಲ್ಲರನ್ನೂ"

"ಒಬ್ಬನನ್ನು ಮಾತ್ರ ಅವನು ಹೆಚ್ಚಾಗಿ ಹಿಂಸೆಪಡಿಸಿದನೆಂದು ಅವನ ಮೇಲೆ ನಿನಗೆ ಕೋಪವಿರುವುದಲ್ಲವೆ?"

"ತಂದೆಯು ಕುಮುದಚಂದ್ರಬಾಬುಗಳನ್ನು ಮಾತ್ರ ಅತಿಯಾಗಿ ಹಿಂಸಿಸಿದನು. ಆತನು "

"ಆತನು ನಿನ್ನನ್ನು ಪ್ರೀತಿಸುವನಲ್ಲವೆ?"

ಪುಷ್ಪಲತೆಯು ಚಕಿತಳಾಗಿ ಒಂದು ಹೆಜ್ಜೆಯಷ್ಟು ಹಿಂದಕ್ಕೆ ಸರಿದು ನಿಂತಳು. ಒಡನೆಯೇ ದರ್ಪದಿಂದ, "ಮಹಾಪ್ರಭುಗಳೆ! ಆತನನ್ನು ನಾನು ಪ್ರೀತಿಸುತ್ತೇನೆ - ಆತನು ನನ್ನ ಸ್ವಾಮಿ" ಎಂದಳು.

"ಎಷ್ಟು ದಿನಗಳಿಂದ ಪ್ರೀತಿಸುವೆ?"

"ಆತನನ್ನು ನೋಡಿದ ದಿನದಿಂದ"

"ಮೊದಲು ಅವನನ್ನು ನೋಡಿದುದಾವಾಗ?"

"ಯಾವ ದಿನ ನಿಷ್ಠುರಹೃದಯರಾದ ಪುರಜನರು ರಮಾನಾಥ ಬಾಬುವನ್ನೂ ಆತನ ಸಹೋದರ ಉಮಾನಾಥಬಾಬುವನ್ನೂ ನಿರ್ಲಜ್ಜರಾಗಿ ಖೂನಿಮಾಡಿದರೋ ಆ ದಿನವು ಕಳೆದ ಮರುದಿನ ಕುಮುದಚಂದ್ರ ಬಾಬುವನ್ನು ಮೊದಲು ನೋಡಿದೆನು"

ಆ ಮಾತುಗಳನ್ನು ಅವಳು ಹೇಳುವಾಗ ವಿನಯಸಿಂಹನು ತುಟಿಯನ್ನು ಕಚ್ಚುತ್ತ ಹುಬ್ಬುಗಂಟಿಕ್ಕುತ್ತ ಕ್ಷಣಮಾತ್ರ ಕುಳಿತನು. ಅವನು ನೆಲವನ್ನು ನೋಡುತ್ತ ಒಂದು ನಿಮಿಷಮಾತ್ರ ಕಣ್ಣುಮುಚ್ಚಿಕೊಂಡನು. ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ಬಳಿಕ ವಿನಯಸಿಂಹನು ಹೇಳತೊಡಗಿದನು—"ಅವನು ಕಾರಾಗೃಹದಲ್ಲಿಯೇ ಇದ್ದು ಅಲ್ಲಿಯೇ ಸಾಯುವವನಲ್ಲವೆ? ಅಂತಹವನನ್ನು ಪ್ರೀತಿಸಿದುದರಿಂದಾಗುವ ಫಲವೇನು?"

"ಆತನು ಕಾರಾಗೃಹದಲ್ಲಿಯೇ ಜೀವಿಸಿ, ಅಲ್ಲಿಯೇ ಸಾಯುವನಾದರೆ, ನಾನಾತನನ್ನು ಬದುಕಿರುವವರೆಗೂ ಸಂತೈಸುವೆನು. ಸಾಯುವ ಸಮಯದಲ್ಲಿ ಆತನಿಗೆ ಸಹಾಯಮಾಡುವೆನು"

"ನೀನು ಬಂದಿಯ ಪತ್ನಿಯಾಗಿರಲು ಒಪ್ಪುವೆಯಾ?"

"ಕುಮುದಚಂದ್ರಬಾಬುಗಳ ಪತ್ನಿಯಾಗಿರಬಲ್ಲೆನಾದರೆ ಎಂತಹ ಸಂದರ್ಭಗಳಲ್ಲೂ ಸಂತೋಷದಿಂದಿರುವೆನು. ಗೌರವದಿಂದಿರುವೆನು. ಆದರೆ . "

"ಆದರೆ - ಏನು ?"

"ಹೇಳಬಹುದೆ ಮಹಾಪ್ರಭುಗಳೆ!"

"ನಿನ್ನ ದನಿಯು ಯಾವುದೋ ಆಶೆಯನ್ನು ಸೂಚಿಸುವುದು - ಅದಾವ ಆಶೆ?"

ಅವಳು ತನ್ನ ಅಶ್ರುಪೂರಿತವಾದ ಸುಂದರ ನಯನಗಳಿಂದ ವಿನಯ ಸಿಂಹನ ಕಡೆಗೆ ನೋಡಿದಳು. ರಾಜಕುಮಾರನ ಅಂತರ್ಯದಲ್ಲಿ ಉತ್ಪನ್ನ ವಾಗುತ್ತಿದ್ದ ದಯಾರಸವು ಆ ನೋಟದಿಂದ ವೃದ್ಧಿಯಾಯಿತು. ಅವನು, "ಆಹಾ! ನಾನೆಲ್ಲವನ್ನೂ ಬಲ್ಲೆ" ಎಂದನು.

ಪುಷ್ಪಲತೆಯು ಕಿರುನಗೆಯಿಂದ ಕೈಜೋಡಿಸಿ ನಿಂತಳು

ರಾಜಕುಮಾರನು, " ನನ್ನ ಮೇಲೆ ಭರವಸೆಯನ್ನಿಟ್ಟಿರುವೆ ಯಲ್ಲವೆ?" ಎಂದು ಕೇಳಿದನು.

"ಅಹುದು ಮಹಾಪ್ರಭುಗಳೆ "

"ಆಹಾ!"

ರಾಜಕುಮಾರನು ತನ್ನ ಪತ್ರಕ್ಕೆ ಮೊಹರುಮಾಡಿ ಅಧಿಕಾರಿಯೊಬ್ಬ ನನ್ನು ಕರೆದು ಅವನನ್ನು ನೋಡಿ ಹೇಳತೊಡಗಿದನು—"ಅರುಣಸಿಂಹ! ಈ ಪತ್ರವನ್ನು ಮಣಿಪುರಕ್ಕೆ ತೆಗೆದುಕೊಂಡು ಹೋಗು ಅಲ್ಲಿನ ಅಧಿ ಕಾರಿಗೆ ಅದರಲ್ಲಿರುವ ಅಪ್ಪಣೆಯನ್ನು ಓದಿಹೇಳು. ನಿನ್ನ ಕರ್ತವ್ಯ ವೇನೆಂಬುದೂ ಅದರಲ್ಲಿಯೇ ಹೇಳಲ್ಪಟ್ಟಿದೆ. ಅದರಂತೆ ನಡೆದುಕೊ."

ಅಧಿಕಾರಿಯು ನಮಸ್ಕರಿಸಿ ಹೊರಟುಹೋದನು. ಸ್ವಲ್ಪಹೊತ್ತಿ ನಲ್ಲಿಯೇ ವೇಗದಿಂದ ಹೊರಟುಹೋಗುತ್ತಿದ್ದ ಕುದುರೆಯ ಖುರಪುಟ ಧ್ವನಿಯು ರಾಜಕುಮಾರನಿಗೆ ಕೇಳಿಬಂದುದು.

ವಿನಯಸಿಂಹನು ಪುಷ್ಪಲತೆಯ ಕಡೆಗೆ ತಿರುಗಿ ಹೇಳತೊಡಗಿದನು - "ಮಗು! ಟ್ಯೂಲಿಪ್‌ ಪುಷ್ಪಗಳ ಹಬ್ಬವು ಭಾನುವಾರದ ದಿನ ನಡೆಯುವುದು - ಅಂದರೆ ನಾಡಿದ್ದು ನಡೆಯುವುದು. ಇಲ್ಲಿ ಐನೂರು ರೂಪಾಯಿಗಳಿವೆ.

ಈ ಹಣವನ್ನು ತೆಗೆದುಕೊ. ಆ ದಿನವು ನಿನಗೆ ಅತ್ಯುತ್ತಮದಿನವಾಗಿ ಪರಿಣಮಿಸಬೇಕೆಂದು ನನ್ನಭಿಪ್ರಾಯವಾಗಿರುವುದರಿಂದ ಅತ್ಯುತ್ತಮವಾದ ಉಡುಪನ್ನು ಈ ಹಣದಿಂದ ತೆಗೆದುಕೊಂಡು ಧರಿಸಿಕೊ."

ಪುಷ್ಪಲತೆಯು ತೊದಲುತ್ತ್ತೆ, "ನಾನು ಎಂತಹ ಉಡುಪನ್ನುಡಬೇಕೆಂದು ಮಹಾಪ್ರಭುಗಳ ಅಭಿಪ್ರಾಯವಿದೆ?" ಎಂದು ಕೇಳಿದಳು.

ವಿನಯಸಿಂಹನು, "ಮಗು! ವಿವಾಹಸಮಯದಲ್ಲಿ ವಧುವು ಹಾಕಿಕೊಳ್ಳುವ ಉಡುಪನ್ನು ಧರಿಸು. ಅದೇ ನಿನಗೆ ಯೋಗ್ಯವಾದುದು" ಎಂದನು.

# ಏಕತ್ರಿಂಶತಿ ಪರಿಚ್ಛೇದ

## ಕಲ್ಯಾಣನಗರಿ

ಕಲ್ಯಾಣನಗರಿಯಲ್ಲಿ 1673ನೇ ಇಸವಿ ಮೇ ತಿಂಗಳಿನ ಹದಿನೈದನೆಯ ತಾರೀಖಿನ ದಿನ ದೊಡ್ಡ ಉತ್ಸವವು ನಡೆಯಲು ಏರ್ಪಾಡಾಗಿತ್ತು. ಕೃಷ್ಣಪುಷ್ಪವು ಕಂಡುಹಿಡಿಯಲ್ಪಟ್ಟಿತ್ತು-ಅದಕ್ಕೂ ಅದರ ಜನ್ಮದಾತನಿಗೂ ಮರ್ಯಾದೆ ಮಾಡುವ ಕೆಲಸವನ್ನು ತಾನೇ ಮಾಡುವುದಾಗಿ ರಾಜಾ ವಿನಯಸಿಂಹನು ಹೇಳಿದ್ದನು—ಈ ಕಾರಣಗಳಿಂದ ಜನರ ಉತ್ಸಾಹವು ಮತ್ತಷ್ಟು ಹೆಚ್ಚಾಗಿದ್ದಿತು.

ಕಲ್ಯಾಣನಗರಿಯ ಟ್ಯೂಲಿಪ್‌ಸಂಘದವರು ತಮ್ಮ ಕೀರ್ತಿಗನುಗುಣವಾಗಿ ಲಕ್ಷ ರೂಪಾಯಿಗಳನ್ನು ಕರಿಯಪುಷ್ಪಕ್ಕಾಗಿ ಕೊಟ್ಟಿದ್ದರು. ಪುರಜನರು ತಮ್ಮ ಕೀರ್ತಿಯು ಕಡಮೆಯಾಗಬಾರದೆಂದು ತಾವೂ ಒಂದು ಲಕ್ಷ ರೂಪಾಯಿಗಳನ್ನು ಶೇಖರಿಸಿ ಆ ಹಣವನ್ನು ಉತ್ಸವದ ದಿನ ವ್ಯಯ ಮಾಡಬೇಕೆಂದು ಅಧ್ಯಕ್ಷನಿಗೆ ಸೂಚಿಸಿದರು. ಹೀಗಾಗಿ ಭಾನುವಾರದ ದಿನ- ಅಂದರೆ ಕೃಷ್ಣಪುಷ್ಪದ ಪ್ರಥಮಸಂದರ್ಶನದ ದಿನ- ಪುರಜನರೆಲ್ಲರೂ ಅತ್ಯುತ್ಸಾಹದಿಂದಿದ್ದರು. ಎಲ್ಲರಿಗಿಂತಲೂ ಉತ್ಸಾಹಿಯಾಗಿ ಸಂಘದ ಕಮಿಟಿಯ ಮುಂದೆ ಅಧ್ಯಕ್ಷ ರವಿವರ್ಮನು ತನ್ನ ಉತ್ತಮವಾದ ಉಡುಪನ್ನು ಉಟ್ಟುಕೊಂಡು ಪುಷ್ಪವಿದ್ದ ಕಡೆಗೆ ಹೊರಡಲನುವಾಗಿದ್ದನು.

ಉತ್ಸವವನ್ನು ನಡೆಸಲು ದೊಡ್ಡ ಸ್ಥಳವು ಸಿದ್ಧಪಡಿಸಲ್ಪಟ್ಟಿದ್ದಿತು. ಅಲ್ಲಿಗೆ ರಾಜಾವಿನಯಸಿಂಹನೇ ಬಂದು ಪುಷ್ಪವನ್ನು ಬೆಳೆಸಿದವನಿಗೆ ಬಹುಮಾನ ಮಾಡುವುದಾಗಿ ನಿಶ್ಚಯವಾಗಿತ್ತು.

ಅಧ್ಯಕ್ಷ ರವಿವರ್ಮನು ಉತ್ಸವ ಸ್ಥಳಕ್ಕೆ ಹೊರಟನು. ಅವನ ಕೈಯಲ್ಲಿ ಅನೇಕ ಪುಷ್ಪಗಳಿಂದ ರಂಜಿತವಾದ ತುರಾಯಿಯೊಂದಿತ್ತು. ಅವನ ಹಿಂದೆ ಪಟ್ಟಣದ ವಿದ್ವಾಂಸರೂ, ನ್ಯಾಯಾಧಿಕಾರಿಗಳೂ, ಸೈನ್ಯಾಧಿಕಾರಿಗಳೂ, ಇತರ ದೊಡ್ಡಮನುಷ್ಯರೂ ಹೊರಟರು. ಈ ಮೆರವಣಿಗೆಯನ್ನು ನೋಡಲು ಉತ್ಸುಕರಾಗಿ ಪುರಜನರು ಬೀದಿಗಳಲ್ಲಿ ಉಭಯ ಪಾರ್ಶ್ವಗಳಲ್ಲಿಯೂ ಕಿಕ್ಕಿರಿದು ತುಂಬಿದ್ದರು

ಮೆರವಣಿಗೆಯಲ್ಲಿ ಭಾಗವಹಿಸಿದ್ದವರ ಮಧ್ಯೆ ಕೃಷ್ಣಪುಷ್ಪವು ವಿರಾಜಿಸುತ್ತಿದ್ದಿತು. ಅದನ್ನು ಸಣ್ಣ ಮೇಜೊಂದರಮೇಲಿಟ್ಟಿದ್ದರು. ಮೇಜಿನ ಮೇಲೆ ಸುವರ್ಣದೆಳೆಗಳುಳ್ಳ ಮಕಮಲ್ಲಿನ ಬಟ್ಟೆಯೊಂದನ್ನು ಹಾಕಿ ಅದರ ಮೇಲೆ ಪುಷ್ಪವನ್ನಿಟ್ಟಿದ್ದರು ಮೇಜನ್ನು ಒಬ್ಬನು ಹೊತ್ತು ನಿಧಾನವಾಗಿ ನಡೆಯುತ್ತಿದ್ದನು.

ಬೀದಿಯಲ್ಲಿದ್ದ ಜನರು ಅಧ್ಯಕ್ಷನನ್ನು ನೋಡಿದೊಡನೆಯೇ ಚಪ್ಪಾಳೆ ತಟ್ಟತೊಡಗಿದರು. ಜನರು ಹೀಗೆ ಅಭಿನಂದಿಸತೊಡಗಿದರೆ ಅಂತಹ ಅಭಿನಂದನೆಗೆ ಕೊನೆಮೊದಲಿಲ್ಲವಾಗುವುದು. ಅವರು ಅಧ್ಯಕ್ಷನನ್ನು ಚಪ್ಪಾಳೆಗಳಿಂದ ಗೌರವಿಸಿದಮೇಲೆ ಅವನ ತುರಾಯಿಯನ್ನು ನೋಡಿ ಪುನಃ ಚಪ್ಪಾಳೆ ಹೊಡೆದರು. ಬಳಿಕ ಹಿಂದೆ ಬರುತ್ತಿದ್ದ ಅಧಿಕಾರಿಗಳನ್ನು ಅಭಿನಂದಿಸತೊಡಗಿದರು ಅದಾದಮೇಲೆ ಜನರಿಗಾಗಿ ಜಯಕಾರಮಾಡತೊಡಗಿದರು. ಮೆರವಣಿಗೆಯು ಅಲ್ಲಲ್ಲಿ ನಿಂತು ಮುಂದೆ ಹೊರಡುತ್ತಿದ್ದಿತು. ಆ ಸಮಯದಲ್ಲಿ ಉತ್ತಮವಾದ ಸಂಗೀತವು ನಡೆಯುತ್ತಿದ್ದಿತು. ಜನರು ಆ ಸಮಯದಲ್ಲಿಯೂ ಚಪ್ಪಾಳೆ ಹೊಡೆಯುತ್ತಿದ್ದರು.

ಎಲ್ಲರೂ ಉತ್ಸವದ ಮುಖ್ಯಸ್ಥನನ್ನೆದುರು ನೋಡುತ್ತಿದ್ದರು–ಅಂದರೆ ಕೃಷ್ಣಪುಷ್ಪವನ್ನು ಬೆಳೆಸಿದವನನ್ನು ನೋಡಲೆಳಸುತ್ತಿದ್ದರು. ಉತ್ಸವವು ಒಂದುಕಡೆ ನಿಂತಾಗ ರವಿವರ್ಮನು ತನ್ನ ರಿಪೋರ್ಟನ್ನೋದಿದನು. ಅದನ್ನೋದಿದುದು ಮುಗಿದಮೇಲೆ ಉತ್ಸವದ ಮುಖ್ಯಸ್ಥನು ಬಂದನು.

ಅವನನ್ನು ನೋಡಿ ಎಲ್ಲರೂ ಬಹಳವಾಗಿ ಪ್ರಶಂಸಿಸತೊಡಗಿದರು. ರಾಜಕುಮಾರ ವಿನಯಸಿಂಹನಿಗೆ ತೋರಿಸುವುದಕ್ಕಿಂತ ಹೆಚ್ಚಾಗಿ ಮರ್ಯಾದೆ ತೋರತೊಡಗಿದರು. ಅವನು ತನ್ನ ಉಡುಪಿನಲ್ಲಿ ಅಲ್ಲಲ್ಲಿ ಹೂವುಗಳನ್ನು ಧರಿಸಿಕೊಂಡು ಉತ್ಸವದೊಡನೆ ನಡೆಯತೊಡಗಿದನು.

ಅಧ್ಯಕ್ಷನನ್ನೂ ವಿನಯಸಿಂಹನನ್ನೂ ಮರೆಸಿದ ವೀರನು ವಿಷಕಂಠನಾಗಿದ್ದನು ಅವನ ಬಲಭಾಗದಲ್ಲಿ ಅವನ ಭಾವೀ ಪುತ್ರಿಯಂತಿದ್ದ ಕೃಷ್ಣ ಪುಷ್ಪವನ್ನು ಹೊತ್ತು ಸೇವಕರು ನಡೆಯುತ್ತಿದ್ದರು. ಅವನ ಎಡಭಾಗದಲ್ಲಿ ಲಕ್ಷ ರೂಪಾಯಿಗಳಿಂದ ತುಂಬಿದ್ದ ಚೀಲವೊಂದನ್ನು ಬೇರೆ ಕೆಲವರು ಸೈನಿಕರು ಹೊತ್ತು ನಡೆಯುತ್ತಿದ್ದರು. ವಿಷಕಂಠನು ಬಾರಿ ಬಾರಿಗೂ ಓರೆಗಣ್ಣಿನಿಂದ ಆ ಚೀಲದ ಕಡೆಗೆ ನೋಡುತ್ತಿದ್ದನು. ಒಂದು ನಿಮಿಷಕ್ಕೊಂದು ಬಾರಿ ಅದನ್ನು ನೋಡದಿದ್ದರೆ ಅದು ತಟ್ಟನೆ ಮಾಯವಾಗಿಬಿಡಬಹುದೆಂದು ಅವನಿಗೆ ಭೀತಿಯುಂಟಾಗಿದ್ದಿತು.

ಇನ್ನು ಕಾಲುಗಂಟೆಯು ಕಳೆಯುವಷ್ಟರಲ್ಲಿ ರಾಜಕುಮಾರ ವಿನಯಸಿಂಹನು ಬರುವನು. ಕೃಷ್ಣಪುಷ್ಪವನ್ನು ಅದರ ಸಿಂಹಾಸನವೊಂದರ ಮೇಲಿಡುವರು ತನಗೆ ಸರ್ವದಾ ಜನರಿಂದ ಸಲ್ಲುವ ಪ್ರಶಂಸೆಯನ್ನು ಕೃಷ್ಣಪುಷ್ಪಕ್ಕೆ ಸಲ್ಲುವಂತೆ ರಾಜಕುಮಾರನು ಮಾಡುವನು. ಆತನು ಪುಷ್ಪವನ್ನು ಕಂಡುಹಿಡಿದಿರುವವನ ಹೆಸರನ್ನು ದೊಡ್ಡ ಪತ್ರವೊಂದರಲ್ಲಿ ಬರೆಸಿ ಆ ಹೆಸರನ್ನು ಗಟ್ಟಿಯಾಗಿ ಓದುವನು. ಪುಷ್ಪಕ್ಕೆ ವಿಷಕಂಠಶರ್ಮನ ಪುಷ್ಪವೆಂದು ಹೆಸರಾಗುವುದು—ಇವೇ ಮುಂತಾದ ಯೋಚನೆಗಳಲ್ಲಿ ವಿಷಕಂಠನು ಮಗ್ನನಾಗಿದ್ದನು.

ಆಗಾಗ ವಿಷಕಂಠನು ಯೋಚನೆಯನ್ನು ಸ್ವಲ್ಪ ತ್ಯಜಿಸಿ, ಹೂವಿನ ಮೇಲೆಯೂ ಹಣದಮೇಲೆಯೂ ಇದ್ದ ಕಣ್ಣನ್ನು ಹೊರಳಿಸಿ ಹುಡುಗಿಯೊಬ್ಬಳನ್ನು ಭೀತಿಯಿಂದ ಹುಡುಕುತ್ತಿದ್ದುದು. ಅವಳನ್ನು ನೋಡಿಬಿಟ್ಟಿದ್ದರೆ ಅವನು ಸೈತಾನನನ್ನು ಕಂಡಂತೆ ಭೀತನಾಗಿಬಿಡುತ್ತಿದ್ದನು ಆದರೆ ಅವಳೆಲ್ಲಿಯೂ ಅವನಿಗೆ ಕಾಣಬರಲಿಲ್ಲ.

ವಾಸ್ತವವಾಗಿ ಹೇಳಬೇಕೆಂದರೆ ಈ ಪಾಪಿಯು ಪುಷ್ಪವನ್ನು ಅಪಹರಿಸಿದ ಚೋರನೇ ತಾನೆಂದು ಭಾವಿಸಿರಲಿಲ್ಲ ಅವನು ಪುಷ್ಪವನ್ನು ಅನವರತವೂ

ನೋಡುತ್ತಿರಲಿಲ್ಲವೆ? ಕುಮುದನ ಡ್ರಾಯರಲ್ಲಿ ಅದಿದ್ದಾಗಲಿಂದ ಅದು ಸುರನಗರಿಯ ವಧ್ಯಸ್ಥಾನಕ್ಕೆ ಸೇರುವವರೆಗೂ ಅದನ್ನು ಹಿಂಬಾಲಿಸಿರಲಿಲ್ಲವೆ? ವಧ್ಯಸ್ಥಾನದಿಂದ ಮಣಿಪುರಕ್ಕೂ ಹಿಂಬಾಲಿಸಿ ಹೋಗಲಿಲ್ಲವೆ? ಅದು ಮೊಳಕೆ ಬಿಟ್ಟು ಪುಷ್ಪಲತೆಯ ಕಿಟಕಿಯಲ್ಲಿ ಬೆಳೆದುದನ್ನು ನೋಡಲಿಲ್ಲವೆ? ಅದರ ಮೇಲೆ ಅವನು ಬಿಸಿಯಾದ ಉಸುರನ್ನು ಬಿಟ್ಟು ಅದಕ್ಕೆ ಶಾಖವನ್ನುಂಟುಮಾಡಿರಲಿಲ್ಲವೆ? ಇಷ್ಟು ಮಾಡಿದವನು ಅದನ್ನು ಕದ್ದಂತಾಯಿತೆ? ಎಂದಿಗೂ ಇಲ್ಲ. ಅದನ್ನೀಗ ಅವನಿಂದ ತೆಗೆದುಕೊಂಡು ಹೋಗುವವರಾರಾದರೂ ಇದ್ದರೆ ಅವರೇ ಕಳ್ಳರಾಗುವರು!

ಉತ್ತಮ ವೃಕ್ಷಗಳ ನಡುವೆ ಉತ್ಸವವನ್ನು ನಡೆಸಲು ಎಲ್ಲ ಸಿದ್ಧತೆಗಳೂ ಆಗಿದ್ದುವು. ಆ ಸ್ಥಳವನ್ನು ಹೂಮಾಲೆಗಳಿಂದಲೂ ವಿವಿಧ ವಸ್ತ್ರಗಳಿಂದಲೂ ಮನೋಹರವಾಗಿ ಅಲಂಕರಿಸಿದ್ದರು. ಮೆರವಣಿಗೆಯು ಆ ಸ್ಥಳಕ್ಕೆ ಬಂದು ಸೇರಿದುದು. ಸಂಗೀತವು ಅನರ್ಗಳವಾಗಿ ಮುಂದೆ ಸಾಗಿತ್ತು. ಕಲ್ಯಾಣನಗರಿಯ ಸುಂದರಯುವತಿಯರು ಟ್ಯೂಲಿಪದ ಹಿಂದೆಯೇ ನಡೆದು ಬಂದು ಅದನ್ನು ಎತ್ತರವಾದ ಸ್ಥಳವೊಂದರಲ್ಲಿ ಇರಿಸಿದರು. ಆ ಸ್ಥಳದ ಪಕ್ಕದಲ್ಲಿಯೇ ರಾಜಕುಮಾರ ವಿನಯಸಿಂಹನು ಕುಳಿತುಕೊಳ್ಳುವ ಸಿಂಹಾಸನವಿದ್ದಿತು.

ಕೃಷ್ಣಪುಷ್ಪವನ್ನು ಎತ್ತರದ ಸ್ಥಳದಲ್ಲಿ ಕಾಣುತ್ತಲೇ ಜನರೆಲ್ಲರೂ ಚಪ್ಪಾಳೆ ಹೊಡೆದರು. ಅವರ ಅಭಿನಂದನೆಯು ಪುರದಲ್ಲೆಲ್ಲಾ ಪ್ರತಿಧ್ವನಿತವಾಯಿತು.

# ದ್ವಾತ್ರಿಂಶತಿ ಪರಿಚ್ಛೇದ

## ಕಡೆಯ ಬೇಡಿಕೆ

ಕಲ್ಯಾಣನಗರಿಯಲ್ಲಿ ಹರ್ಷಧ್ವನಿಗಳು ಪ್ರತಿಧ್ವನಿತವಾಗುತ್ತಿದ್ದ ಸಮಯದಲ್ಲಿ ಉತ್ಸವವು ನಡೆಯುತ್ತಿದ್ದ ವೃಕ್ಷಶ್ರೇಣಿಗಳ ಪಕ್ಕದಲ್ಲಿ ಗಾಡಿಯೊಂದು ಮೆಲ್ಲನೆ ಮುಂದರಿಯುತ್ತಿದ್ದಿತು. ಉತ್ಸವದಲ್ಲಿ ಭಾಗವಹಿಸಿದ್ದ ಸ್ತ್ರೀಪುರುಷರು ತಮ್ಮ ಮಕ್ಕಳ ವಿಚಾರವನ್ನು ಅಷ್ಟು ಹೆಚ್ಚಾಗಿ ಮನಸ್ಸಿಗೆ

ಹಚ್ಚಿಕೊಂಡಿರಲಿಲ್ಲವಾಗಿ ಆ ಶಿಶುಗಳು ಗಾಡಿಯು ಹೋಗುತ್ತಿದ್ದ ದಾರಿ ಗಡ್ಡವಾಗಿ ಹರಿದಾಡುತ್ತಿದ್ದುವು ಆ ಕಾರಣದಿಂದ ಗಾಡಿಯು ಮೆಲ್ಲನೆ ಮುಂದರಿಯುತ್ತಿತ್ತು. ಗಾಡಿಯು ಧೂಳಿನಿಂದ ಧೂಸರವಾಗಿತ್ತು. ಅದರ ಭಾಗಗಳು ಕರಕರನೆ ಶಬ್ದಮಾಡುತ್ತಿದ್ದುವು. ಅದು ಬಹು ದೂರ ಪ್ರಯಾಣ ಬೆಳೆಸಿಬಂದಿದ್ದಂತೆ ಅದನ್ನು ನೋಡಿದೊಡನೆಯೆ ತಿಳಿಯುತ್ತಿತ್ತು ಅದರಲ್ಲಿ ಕುಮುದಚಂದ್ರನು ಕುಳಿತಿದ್ದನು. ಅವನು ಸಮೀಪದಲ್ಲಿ ನಡೆಯುತ್ತಿದ್ದ ಉತ್ಸವವನ್ನೂ ಊರಿನ ಜನರ ಉತ್ಸಾಹವನ್ನೂ ನೋಡಿ ಆಶ್ಚರ್ಯಾನ್ವಿತ ನಾಗಿದ್ದನು.

ಕುಮುದನೊಡನಿದ್ದ ಅಧಿಕಾರಿಯು ಅವನ ಪ್ರಶ್ನೆಗಳಾವುದಕ್ಕೂ ಉತ್ತರಕೊಡುತ್ತಿರಲಿಲ್ಲವಾದರೂ ಕಡೆಯ ಬಾರಿ ಪ್ರಯತ್ನಮಾಡಿ ನೋಡೋಣವೆಂದು ಆ ನಿರ್ಭಾಗ್ಯನು, "ಸ್ವಾಮಿ! ಇಲ್ಲಿ ನಡೆಯುತ್ತಿರುವು ದೇನು?" ಎಂದನು.

ಅಧಿಕಾರಿಯು ತನ್ನ ಮನಸ್ಸನ್ನು ಬದಲಾಯಿಸಿ, "ನೋಡಿದರೆ ಗೊತ್ತಾಗುವುದಿಲ್ಲವೆ? ಅಲ್ಲಿ ಉತ್ಸವವು ನಡೆಯುತ್ತಿದೆ" ಎಂದನು.

ಕುಮುದನು, "ಆಹಾ! ಉತ್ಸವವೆ?" ಎಂದು ದುಃಖಪೂರಿತನಾಗಿ ಹೇಳಿದನು ಅವನ ದನಿಯಲ್ಲಿ ಅವನಿಗಾವ ಆಶೆಯಾಗಲಿ ಸಂತೋಷ ವಾಗಲಿ ಇದ್ದಂತೆ ತೋರಿಬರುತ್ತಿರಲಿಲ್ಲ ಅವನು ಸ್ವಲ್ಪ ಹೊತ್ತು ಮೌನ ವಾಗಿದ್ದು, "ಸ್ವಾಮಿ! ಕಲ್ಯಾಣನಗರಿಯಲ್ಲಿ ದೇವರ ಉತ್ಸವವೆ? ಎಲ್ಲೆಲ್ಲಿಯೂ ಅನೇಕ ಹೂವುಗಳು ಕಂಡುಬರುತ್ತಿವೆ" ಎಂದನು.

"ಈ ಉತ್ಸವದಲ್ಲಿ ಹೂವಿಗೇ ಮುಖ್ಯಪಾತ್ರವಿರುವುದು"

"ಆಹಾ! ಎಂತಹ ಸುವಾಸನೆ! ಎಂತಹ ಉತ್ತಮ ಬಣ್ಣಗಳು!"

ಆಫೀಸರನಿಗೆ ಈ ವೇಳೆಗೆ ದಯೆಯು ಉತ್ಪನ್ನವಾಯಿತು. ಅವನು ಗಾಡಿಯವನನ್ನು ನೋಡಿ, "ಸ್ವಲ್ಪ ನಿಲ್ಲಿಸು. ಈತನು ಉತ್ಸವವನ್ನು ನೋಡಲಿ" ಎಂದನು.

ಕುಮುದನು ದುಃಖಪೂರಿತವಾದ ಕಂಠದಿಂದ, "ಸ್ವಾಮಿ! ತಮಗೆ ಅನೇಕ ವಂದನೆಗಳು. ತಾವು ದಯಾವಂತರು. ಆದರೆ ಇತರರ ಸಂತೋಷ

ದಿಂದ ನನಗೆ ದುಃಖವಾಗುವುದು. ಈ ದುಃಖದಿಂದೆನ್ನನ್ನು ಪಾರುಮಾಡಿಂ. ಗಾಡಿಯು ಮುಂದೆ ಹೋಗಲಿ" ಎಂದನು.

"ನಿನ್ನ ಇಷ್ಟವಿದ್ದಂತೆ ಮಾಡಬಹುದು. ಗಾಡಿಯು ಮುಂದೆ ಹೋಗಬಹುದೆ? ನೀನು ಹೂವುಗಳನ್ನು ಬಹಳ ಪ್ರೀತಿಸುವೆಯೆಂದೂ– ಅದರಲ್ಲಿಯೂ ಈ ದಿನದ ಉತ್ಸವಕ್ಕೆ ಕಾರಣವಾದ ಪುಷ್ಪವನ್ನು ಬಹಳ ಪ್ರೀತಿಸುವೆಯೆಂದೂ ತಿಳಿದು ಗಾಡಿಯನ್ನು ನಿಲ್ಲಿಸಲಪ್ಪಣೆಮಾಡಿದೆನು."

"ಅದಾವ ಪುಷ್ಪ?"

"ಟ್ಯೂಲಿಪ್ ಪುಷ್ಪ"

"ಟ್ಯೂಲಿಪ್ ಪುಷ್ಪವೆ! ಈ ದಿನ ಟ್ಯೂಲಿಪ್ ಪುಷ್ಪದ ಉತ್ಸವವೇನು?"

"ಅಹುದು, ಆದರೆ ಈ ದೃಶ್ಯವು ನಿನಗೆ ಅಸಹ್ಯವಾಗಿರುವುದರಿಂದ ಮುಂದೆ ಹೊರಟುಹೋಗೋಣ."

ಅಧಿಕಾರಿಯು ಗಾಡಿಯನ್ನು ಮುಂದಕ್ಕೆ ಹೊಡೆಯೆಂದು ಆಜ್ಞಾಪಿಸುವುದರಲ್ಲಿದ್ದನು. ಅಷ್ಟರಲ್ಲಿ ಕುಮುದನಿಗೆ ಅದಾವುದೋ ಹೃದಯಭೇದಕವಾದ ಯೋಚನೆಯು ಹೊಳೆದು ಮೆಲ್ಲನೆ ತೊದಲುಧ್ವನಿಯಿಂದ ಕೇಳಿದನು –"ಸ್ವಾಮಿ! ಈ ದಿನ ಟ್ಯೂಲಿಪ್ ಪುಷ್ಪಕ್ಕೆ ಬಹುಮಾನಕೊಡುವ ದಿನವೆ?"

"ಅಹುದು. ಕೃಷ್ಣವರ್ಣದ ಟ್ಯೂಲಿಪ್ ಪುಷ್ಪಕ್ಕೆ ಈ ದಿನ ಬಹುಮಾನವನ್ನು ಕೊಡಲಾಗುವುದು"

"ಅಯ್ಯೋ! ಪಾಪ! ಈ ಜನರೆಲ್ಲರೂ ಬಹಳವಾಗಿ ನನ್ನಂತೆಯೇ ನೊಂದುಕೊಳ್ಳಬೇಕಾಗುವುದು. ಯಾವ ಉತ್ತಮ ವಸ್ತುವನ್ನು ನೋಡುವ ಸಲುವಾಗಿ ಇವರೆಲ್ಲರೂ ಸೇರಿರುವರೋ ಅದನ್ನು ನೋಡಲಾಗುವುದೇ ಇಲ್ಲ. ಈ ಉತ್ಸವವು ಅರ್ಧದಲ್ಲಿಯೇ ಮುಗಿದುಹೋಗುವುದು."

"ಅದೇನು ನೀನು ಹೇಳುತ್ತಿರುವುದು?"

"ನಾನೇನು ಹೇಳುವೆನೆಂದರೆ—ಕರಿಯ ಕುಸುಮವು ಕಂಡುಹಿಡಿಯಲ್ಪಡುವುದಿಲ್ಲ—ಅದನ್ನಾರು ಕಂಡುಹಿಡಿಯುವರೆನ್ನುವುದನ್ನು ನಾನು ಮಾತ್ರ ಬಲ್ಲೆ."

ಹಾಗೆ ಹೇಳುತ್ತ ಕುಮುದನು ನಿಶ್ಚಿಂತನಾಗಿದ್ದವನಂತೆ ಗಾಡಿಯಲ್ಲಿ ಹಿಂದಕ್ಕೊರಗಿಕೊಂಡು ಕುಳಿತನು. ಅಧಿಕಾರಿಯು ಹೇಳತೊಡಗಿದನು–

"ಈ ಸಂದರ್ಭದಲ್ಲಿ ನಾನು ಹೇಳುವುದನ್ನು ಸ್ವಲ್ಪ ಕೇಳು. ಪುಷ್ಪವನ್ನಾರು ಕಂಡುಹಿಡಿಯುವರೆಂದು ನೀನು ಭಾವಿಸಿರುವೆಯೋ ಅವರಾಗಲೇ ಅದನ್ನು ಕಂಡುಹಿಡಿದಿರುವರು. ಏಕೆಂದರೆ ಕಲ್ಯಾಣನಗರಿಯೆಲ್ಲಾ ಈ ಸಮಯದಲ್ಲಿ ನೋಡುತ್ತಿರುವುದು ಆ ಕರಿಯ ಕುಸುಮವನ್ನೇ!"

ಕುಮುದನು ಆಶ್ಚರ್ಯಾನ್ವಿತನಾಗಿ ತನ್ನ ಅರ್ಧ ಶರೀರವು ಗಾಡಿಯಿಂದ ಹೊರಕ್ಕೆ ಬರುವಂತೆ ಬಗ್ಗಿ ನೋಡುತ್ತ, "ಕರಿಯ ಕುಸುಮವೆ! ಕರಿಯ ಟ್ಯೂಲಿಪ್ ಪುಷ್ಪವೆ! ಅದೆಲ್ಲಿದೆ? ಅದೆಲ್ಲಿದೆ?" ಎಂದು ಕೂಗಿಕೊಂಡನು.

"ಅಲ್ಲಿ ಸಿಂಹಾಸನದ ಮೇಲಿದೆ. ನಿನಗೆ ಕಾಣುತ್ತಿಲ್ಲವೆ?"

"ನಿಜ. ಕಾಣುತ್ತಿದೆ."

"ನಡೆ. ನಡೆ. ನಾವು ಬೇಗ ಹೊರಟುಹೋಗಬೇಕು, ಸುಮ್ಮನೆ ಕಾಲವಿಳಂಬವಾಗುತ್ತಿದೆ."

"ಸ್ವಾಮಿ! ನನ್ನನ್ನು ಕರೆದುಕೊಂಡು ಹೋಗಬೇಡಿ. ನನ್ನ ಮೇಲೆ ಸ್ವಲ್ಪ ದಯೆತೋರಿಸಿ. ಆ ಹೂವನ್ನು ಮತ್ತೊಂದು ಬಾರಿ ನೋಡಲು ಅವಕಾಶಕೊಡಿ ಅಲ್ಲಿರುವುದು ಕರಿಯ ಟ್ಯೂಲಿಪ್ ಕುಸುಮವೆ? ಅದು ಪೂರ್ಣವಾಗಿ ಕಪ್ಪುಬಣ್ಣದಿಂದಲೇ ಇರುವುದೆ? ಇದು ಸಾಧ್ಯವೆ? ಸ್ವಾಮಿ! ತಾವದನ್ನು ನೋಡಿರುವಿರಾ? ಅದರಲ್ಲಿ ಬೇರೆ ಬಣ್ಣಗಳ ಚುಕ್ಕಿಗಳಿರಬೇಕು. ಅದರಲ್ಲಿ ಕುಂದುಗಳಿರಲೇಬೇಕು. ಅದಕ್ಕೆಲ್ಲಿಯೋ ಕಪ್ಪುಬಣ್ಣವನ್ನು ಬಳಿದಿರಬೇಕು. ಆಹಾ! ನಾನಲ್ಲಿದ್ದಿದ್ದರೆ ಎಷ್ಟು ಚೆನ್ನಾಗಿತ್ತು! ತತ್‌ಕ್ಷಣವೇ ನನಗೆಲ್ಲವೂ ತಿಳಿದುಹೋಗುತ್ತಿತ್ತು. ನಾನು ತಿಳಿಯಲು ಅವಕಾಶಕೊಡಿ. ಅದನ್ನು ಹತ್ತಿರದಲ್ಲಿ ನೋಡುತ್ತೇನೆ–ತಮ್ಮನ್ನು ಬೇಡಿಕೊಳ್ಳುತ್ತೇನೆ–ಅಷ್ಟು ಮಾತ್ರ ಮಾಡೋಣಾಗಲಿ."

"ನಿನಗೇನು ಹುಚ್ಚುಹಿಡಿದಿದೆಯೆ? ಅಂತಹುದನ್ನು ನಾನು ಹೇಗೆ ಮಾಡಲಿ?"

"ಬೇಡಿಕೊಳ್ಳುತ್ತೇನೆ ಸ್ವಾಮಿ!"

"ನೀನು ಬಂದಿಯೆನ್ನುವುದನ್ನು ಮರೆತೆಯಾ?"

"ನಿಜ ಸ್ವಾಮಿ! ನಾನು ಬಂದಿ. ಆದರೆ ನಾನು ಪ್ರಾಮಾಣಿಕನು.

ಗೌರವಸ್ಥನು. ನಾನು ಭಾಷೆಕೊಟ್ಟು ಹೇಳುತ್ತೇನೆ– ನಾನು ಓಡಿಹೋಗುವು ದಿಲ್ಲ. ನಾನು ಪಲಾಯನ ಮಾಡಲೆತ್ನಿಸುವುದಿಲ್ಲ. ಹೂವನ್ನು ನೋಡಲು ಮಾತ್ರ ಅವಕಾಶಕೊಡಿ."

"ಆದರೆ ನನಗೆ ಕೊಡಲ್ಪಟ್ಟಿರುವ ಅಪ್ಪಣೆಯನ್ನು ಮೀರಿನಡೆಯಲೆ?"

ಅಧಿಕಾರಿಯು ಗಾಡಿಯನ್ನು ಮುಂದಕ್ಕೆ ಹೊಡೆಯಲು ಅಪ್ಪಣೆ ಮಾಡಿದನು. ಕುಮುದನು ಮತ್ತೊಂದು ಬಾರಿ ತಡೆದು ಹೇಳತೊಡಗಿದನು —"ಸ್ವಲ್ಪ ತಡೆಯಿರಿ ಸ್ವಾಮಿ! ಸ್ವಲ್ಪ ಉದಾರಭಾವವನ್ನು ತೋರಿಸಿ. ನನ್ನ ಪ್ರಾಣವು ನಿಮ್ಮ ದಯೆಯನ್ನವಲಂಬಿಸಿದೆ. ಅಯ್ಯೋ! ನಾನು ಇನ್ನೇನು ಹೆಚ್ಚುಕಾಲ ಬದುಕುವಂತಿಲ್ಲ! ಸ್ವಾಮಿ! ತಾವು ನನ್ನ ಸಂಕಟ ವನ್ನರಿಯಲಾರಿರಿ ನನ್ನ ಹೃದಯಕ್ಕೂ ಮನಸ್ಸಿಗೂ ನಡೆಯುತ್ತಿರುವ ಯುದ್ಧವನ್ನರಿಯಲಾರಿರಿ. ಈ ಕೃಷ್ಣವರ್ಣದ ಟ್ಯೂಲಿಪವು ನನ್ನದೇ ಇರಬಹುದೆ? ಪುಷ್ಪಲತೆಯ ಕಿರುಮನೆಯಿಂದ ಅಪಹೃತವಾದ ಟ್ಯೂಲಿಪವು ಇದೇ ಇರಬಹುದೆ? ಸ್ವಾಮಿ! ನಾನು ಇಳಿದುಬಿಡುತ್ತೇನೆ! ಆ ಹೂವನ್ನು ನಾನು ಸರಿಯಾಗಿ ನೋಡಲೇಬೇಕು! ನಾನು ನೋಡಿಬಂದಮೇಲೆ ಬೇಕಾ ದರೆ ನೀವು ನನ್ನನ್ನು ಕೊಂದುಬಿಡಿ. ಆದರೆ ನಾನದನ್ನು ನೋಡುತ್ತೇನೆ– ನಾನದನ್ನು ನೋಡಲೇಬೇಕು"

"ನಿರ್ಭಾಗ್ಯ! ಸುಮ್ಮನಿರು. ಗಾಡಿಯಲ್ಲಿ ಸರಿಯಾಗಿ ಕುಳಿತುಕೊ. ಅಲ್ಲಿ ನೋಡು. ರಾಜಾವಿನಯಸಿಂಹರ ಪರಿವಾರವೂ ಅವರೊಡನೆ ಆತನೂ ಬರುತ್ತಿರುವರು. ಮಹಾಪ್ರಭುಗಳು ಈ ಗಲಾಟೆಯನ್ನಾಗಲಿ– ಶಬ್ದ ವನ್ನಾಗಲಿ ಕೇಳಿದರೆ ನಿನ್ನ ಸರ್ವನಾಶದ ಜತೆಗೆ ನನ್ನ ಸರ್ವನಾಶವೂ ಆಗಿ ಬಿಡುವುದು"

ಕುಮುದನು ತನ್ನ ಪ್ರಾಣರಕ್ಷಣೆಗಿಂತ ಅಧಿಕಾರಿಯ ಪ್ರಾಣರಕ್ಷಣೆ ಗಾಗಿ ಹೆಚ್ಚು ಭೀತನಾಗಿ ಗಾಡಿಯಲ್ಲಿ ಹಿಂದಕ್ಕೆ ಕುಳಿತನು. ವಿನಯ ಸಿಂಹನ ಪರಿವಾರದ ಸೈನಿಕರು ಕೆಲವರು ಮುಂದೆ ಹೋಗುವಷ್ಟರಲ್ಲಿ ಕುಮುದನು ಪುನಃ ಗಾಡಿಯಿಂದ ಹೊರಕ್ಕೆ ಬಗ್ಗಿ ನೋಡುತ್ತ ದೈನ್ಯದಿಂದ ಬೇಡಿಕೊಳ್ಳತೊಡಗಿದನು.

ವಿನಯಸಿಂಹನು ಅಂದಿನ ಉತ್ಸವದ ಅಧ್ಯಕ್ಷಪದವಿಯನ್ನಲಂಕರಿಸಲು

ಮೌನವಾಗಿ ಗಂಭೀರವಾಗಿ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದನು. ಕುಮುದಚಂದ್ರನು ಬೇಡಿಕೊಳ್ಳುವಂತೆ ಕೈಜೋಡಿಸುತ್ತಿದ್ದುದನ್ನು ರಾಜಕುಮಾರನು ನೋಡಿದನು. ಹಾಗೆಯೇ ತನ್ನ ಅಧಿಕಾರಿಯನ್ನೂ ಅವನು ಗುರ್ತಿಸಿದನು. ಒಡನೆಯೇ ತನ್ನ ಗಾಡಿಯನ್ನು ನಿಲ್ಲಿಸಲಪ್ಪಣೆ ಮಾಡಿದನು. ಒಂದು ನಿಮಿಷಮಾತ್ರದಲ್ಲಿ ಅವನ ಕುದುರೆಗಳು ನಿಂತವು. ಅಲ್ಲಿಂದ ಕುಮುದನ ಗಾಡಿಗೆ ಸುಮಾರು ಆರುಗಜಗಳಷ್ಟು ದೂರವಿತ್ತು.

ವಿನಯಸಿಂಹನು ಅಧಿಕಾರಿಯನ್ನು ನೋಡಿ, ಇದೇನೆಂದು ಪ್ರಶ್ನಿಸಿದನು. ರಾಜಕುಮಾರನು ಗಾಡಿಯನ್ನು ನಿಲ್ಲಿಸಲು ಅಪ್ಪಣೆಮಾಡಿದೊಡನೆಯೇ ಅಧಿಕಾರಿಯು ತಟ್ಟನೆ ಗಾಡಿಯಿಂದಿಳಿದು ವಿನಯಸಿಂಹನ ಕಡೆಗೆ ವಿನಯದಿಂದ ಹೋಗುತ್ತಿದ್ದನು . ರಾಜಕುಮಾರನ ಗಾಡಿಯ ಬಳಿಗೆ ಹೋಗುತ್ತಲೇ ಸವಿನಯವಾಗಿ ಹೇಳತೊಡಗಿದನು—"ಮಹಾಪ್ರಭುಗಳೆ! ಮಣಿಪುರದಿಂದ ನಾನು ಕರೆತಂದ ಬಂದಿಯು ಇಲ್ಲಿದ್ದಾನೆ. ತಮ್ಮ ಅಪ್ಪಣೆಯಂತೆ ಅವನನ್ನು ಕಲ್ಯಾಣನಗರಿಗೆ ಕರೆತಂದಿದ್ದೇನೆ."

"ಅವನಿಗೇನು ಬೇಕಂತೆ?"

"ಇಲ್ಲಿ ಒಂದು ನಿಮಿಷ ನಿಲ್ಲಬೇಕೆಂದು ಕೇಳಿಕೊಳ್ಳುತ್ತಿದ್ದಾನೆ."

ಆ ಸಮಯದಲ್ಲಿ ಕುಮುದಚಂದ್ರನು ಕೈಜೋಡಿಸಿಕೊಂಡು ಗಟ್ಟಿಯಾಗಿ ಹೇಳತೊಡಗಿದನು—"ಮಹಾಪ್ರಭುಗಳೆ' ಕರಿಯಟ್ಯೂಲಿಪನ್ನು ನೋಡುವ ಸಲುವಾಗಿ ಅಪ್ಪಣೆ ಬೇಕೆನ್ನುತ್ತಿದ್ದೇನೆ. ಅದನ್ನು ನೋಡಿದ ಮೇಲೆ, – ನಾನರಿಯಬೇಕೆನ್ನುವುದನ್ನು ತಿಳಿದಮೇಲೆ, ಸಾಯುವುದಕ್ಕೆ ಬೇಕಾದರೂ ಸಿದ್ಧನಾಗಿದ್ದೇನೆ. ನಾನು ಸಾಯಲೇಬೇಕಾಗಿದ್ದರೆ ಅದಕ್ಕಾಗಿ ಚಿಂತಿಸುವುದಿಲ್ಲ ಆದರೆ – ನನ್ನ ಸ್ವಂತ ಕಾರ್ಯದಿಂದ ಉತ್ಪನ್ನವಾದಾ ಪುಷ್ಪವನ್ನು ನೋಡಲು ತಾವು ಅಪ್ಪಣೆ ಕೊಡುವಿರಾದರೆ ಸಾಯುವ ಸಮಯದಲ್ಲಿ ಕೂಡ ತಮ್ಮ ದಯಾಗುಣವನ್ನು ಸ್ಮರಿಸುತ್ತಿರುತ್ತೇನೆ"

ಈ ಇಬ್ಬರು ಪುರುಷರೂ ತಮ್ಮ ತಮ್ಮ ಗಾಡಿಗಳ ಕಿಟಕಿಗಳ ಬಳಿ ಇದ್ದುದನ್ನು ನೋಡಿದವರು ಇದೊಂದು ವಿಚಿತ್ರ ದೃಶ್ಯವೆಂದುಕೊಳ್ಳುತ್ತಿದ್ದರು. ಒಬ್ಬನು ತನ್ನ ಸೈನಿಕರಿಂದಲೂ ಅಧಿಕಾರವರ್ಗದಿಂದಲೂ ಪರಿವೃತನಾಗಿ ಬಹಳ ಬಲಶಾಲಿಯಾಗಿದ್ದನು. ಮತ್ತೊಬ್ಬನು ಬಂದಿಯಾಗಿ

ದೀನನಾಗಿದ್ದನು. ಒಬ್ಬನು ಸಿಂಹಾಸನವನ್ನು ಹತ್ತಲು ಮುಂದು ವರಿಯುತ್ತಿದ್ದನು. ಮತ್ತೊಬ್ಬನು ಗಲ್ಲನ್ನೇರಲು ಹೋಗುತ್ತಿರುವುದಾಗಿ ನಂಬಿದ್ದನು.

ವಿನಯಸಿಂಹನು ಯಾವ ಭಾವವನ್ನೂ ವ್ಯಕ್ತಪಡಿಸದೆ ಕುಮುದನ ಬೇಡಿಕೆಯನ್ನು ಕೇಳಿದನು. ಬಳಿಕ ಅಧಿಕಾರಿಯ ಕಡೆಗೆ ತಿರುಗಿ, "ಮಣಿಪುರದಲ್ಲಿ ಜೈಲರನನ್ನು ಕೊಲ್ಲಲು ಪ್ರಯತ್ನಿಸಿದ ಬಂದಿಯು ಇವನೇ ಅಲ್ಲವೆ?" ಎಂದನು.

ಕುಮುದನು ದೀರ್ಘವಾಗಿ ನಿಟ್ಟುಸಿರುಬಿಟ್ಟು ತಲೆ ತಗ್ಗಿಸಿದನು. ಅವನ ಮುಖವು ವಿಶುಷ್ಕವಾಯಿತು. ಮತ್ತಾರಿಗೂ ತಿಳಿಯದೇ ಇದ್ದ ವಿಚಾರಗಳನ್ನು ಸರ್ವಾಧಿಕಾರವುಳ್ಳ ರಾಜಕುಮಾರನು ಅದು ಹೇಗೋ ಅರಿತುಕೊಂಡಿದ್ದನು. ಆದರಿಂದ ತನಗೆ ಉಳಿಗಾಲವಿಲ್ಲವೆಂದೂ ತನ್ನ ಕಡೆಯ ಬೇಡಿಕೆಯು ಕೂಡ ನಿರಾಕರಿಸಲ್ಪಡುವುದೆಂದೂ ಕುಮುದನು ಭಾವಿಸಿಕೊಂಡನು. ಅವನು ಯಾವ ವಿಧದಲ್ಲಿಯೂ ಉತ್ತರವನ್ನು ಹೇಳ ಲೆತ್ನಿಸಲಿಲ್ಲ. ಮಗುವಿನಂತೆ ನಿರಪರಾಧಿಯ ಮುಖಭಾವವುಳ್ಳವನಾಗಿ ವಿನಯಸಿಂಹನನ್ನು ನೋಡತೊಡಗಿದನು ಅದನ್ನು ನೋಡಿದ ಉನ್ನತ ಹೃದಯಕ್ಕೂ ಪ್ರತ್ಯುತ್ಪನ್ನಮತಿಗೂ ಎಲ್ಲವೂ ಅರ್ಥವಾಯಿತು. ಆದುದ ರಿಂದ ಅಧಿಕಾರಿಗೆ ಈ ರೀತಿಯಾಗಿ ಅಪ್ಪಣೆಯಾಯಿತು—"ಅರುಣಸಿಂಹ! ಬಂದಿಯನ್ನು ಕೆಳಗಿಳಿಸು. ಅವನು ಕರಿಯಟ್ಯೂಲಿಪನ್ನು ನೋಡಲಿ. ಒಂದುಬಾರಿಯಾದರೂ ಮಾನವನು ನೋಡಬೇಕಾದಂತಹ ಪುಷ್ಪವೇ ಅದು."

ಕುಮುದಚಂದ್ರನು ಆ ಆಜ್ಞೆಯನ್ನು ಕೇಳಿ ಸಂತೋಷಾತಿಶಯ ದಿಂದ ಮೂರ್ಛೆಬೀಳುವುದರಲ್ಲಿದ್ದನು. ಅವನು ಗಾಡಿಯ ಮೆಟ್ಲುಗಳ ಮೇಲೆ ತಪ್ಪುಹೆಜ್ಜೆಗಳನ್ನಿಡುತ್ತ ಕೆಳಗಿಳಿದು, "ಮಹಾಪ್ರಭುಗಳೆ! ತಮಗೆ ಎಷ್ಟು ವಂದನೆಗಳನ್ನರ್ಪಿಸಿದರೂ ಸಾಲದು" ಎನ್ನುತ್ತಿದ್ದನು. ಅಧಿ ಕಾರಿಯು ಅವನನ್ನು ಸರಿಯಾಗಿ ಹಿಡಿದುಕೊಳ್ಳದೆ ಹೋಗಿದ್ದರೆ ಅವನು ಮೊಣಕಾಲೂರಿ ಕುಳಿತೋ, ನೆಲದಮೇಲೆ ಹಣೆಯನ್ನಿಟ್ಟುಕೊಂಡೋ ರಾಜಕುಮಾರನಿಗೆ ವಂದನೆಗಳನರ್ಪಿಸುತ್ತಿದ್ದನು.

ಅಪ್ಪಣೆಯನ್ನಿತ್ತ ಬಳಿಕ ವಿನಯಸಿಂಹನು ಮುಂದೆ ಹೊರಟನು. ಜನರು ಜಯಕಾರಮಾಡತೊಡಗಿದರು. ಅವನು ಶೀಘ್ರದಲ್ಲಿಯೇ ಎತ್ತರ ಪ್ರದೇಶದಲ್ಲಿದ್ದ ತನ್ನ ಸಿಂಹಾಸನದ ಬಳಿಗೆ ಬಂದನು. ಆ ಸಮಯದಲ್ಲಿ ಅವನ ಗೌರವಾರ್ಥವಾಗಿ ಹಾರಿಸಲ್ಪಟ್ಟ ತೋಫಿನ ನಿನಾದವು ಆಕಾಶವನ್ನೇ ಭೇದಿಸಿಕೊಂಡು ಹೊರಟಿತು.

# ತ್ರಯಸ್ತ್ರಿಂಶತಿ ಪರಿಚ್ಛೇದ

## ಉಪಸಂಹಾರ

ಕುಮುದಚಂದ್ರನೊಡನೆ ನಾಲ್ಕುಜನ ಕಾವಲುಗಾರರು ದಾರಿ ಬಿಡಿಸಿಕೊಳ್ಳುತ್ತ ಹೊರಟು ಕರಿಯಟ್ಯೂಲಿಪದ ಪಕ್ಕದಲ್ಲಿ ನಿಂತರು. ಕುಮುದನು ಅದರ ಸಮೀಪಕ್ಕೆ ಹೋದಂತೆಲ್ಲಾ ಅವನ ಕುತೂಹಲವು ವೃದ್ಧಿಹೊಂದುತ್ತಿದ್ದಿತು.

ಕುಮುದನು ಹೂವನ್ನು ನೋಡಿದನು. ಅವನದನ್ನು ಒಂದು ಬಾರಿ ಮಾತ್ರ ನೋಡುವನು - ಪುನಃ ಅದನ್ನು ನೋಡುವಂತಿಲ್ಲ. ಅದನ್ನು ಆರು ಹೆಜ್ಜೆಗಳಷ್ಟು ದೂರದಿಂದ ನೋಡಿದನು. ಅದರ ಕಾಂತಿಯನ್ನೂ ಅನುಪಮಸೌಂದರ್ಯವನ್ನೂ ನೋಡಿದನು. ಅದನ್ನು ಹುಷಾರಿನಿಂದ ಕಾಯುವಂತೆ ಅದರ ಸುತ್ತಲೂ ಸುಂದರಯುವತಿಯರು ನಿಂತಿದ್ದರು. ಅದನ್ನು ನೋಡುತ್ತಿದ್ದಂತೆಯೇ ಅವನಿಗೆ ಅದೇಕೋ ದುಃಖವುಂಟಾಗಲಾರಂಭವಾಯಿತು. ಅವನು ಸುತ್ತಲೂ ನೋಡುತ್ತ ಅದಾರನ್ನೋ ಹುಡುಕತೊಡಗಿದನು. ಆದರೆ ಅವನಿಗೆ ಕಂಡುಬಂದವರೆಲ್ಲರೂ ಅಪರಿಚಿತರಾಗಿಯೇ ಇದ್ದರು. ಎಲ್ಲರೂ ವಿನಯಸಿಂಹನು ಕುಳಿತಿದ್ದ ಕಡೆಗೇ ಉತ್ಸುಕತೆಯಿಂದ ನೋಡುತ್ತಿದ್ದರು.

ವಿನಯಸಿಂಹನು ಎದ್ದು ನಿಂತನು. ಅವನ ದೃಷ್ಟಿಯು ಎಲ್ಲ ಕಡೆಯೂ ಇದ್ದಿತಾದರೂ ಮೂರುಕಡೆ ಮಾತ್ರ ಅವನು ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದನು. ಒಂದು ಕಡೆ ವಿಷಕಂಠನು ಯೋಚನಾಪರನಾಗಿ ನಡುಗುತ್ತ, ರಾಜಕುಮಾರನನ್ನೂ, ರೂಪಾಯಿಗಳನ್ನೂ, ಕರಿಯ

ಪುಷ್ಪವನ್ನೂ, ಜನಸಂದಣಿಯನ್ನೂ ನೋಡುತ್ತಿದ್ದನು. ಮತ್ತೊಂದು ಕಡೆ ಕುಮುದಚಂದ್ರನು ಮೌನವಾಗಿ ನಿಂತು ತನ್ನ ಕಣ್ಣುಗಳನ್ನೂ ಪ್ರಾಣಗಳನ್ನೂ ಪ್ರೀತಿಯನ್ನೂ ಸರ್ವಸ್ವವನ್ನೂ ಪುಷ್ಪದಮೇಲಿಟ್ಟವನಂತೆ ಅದನ್ನೇ ನೋಡುತ್ತಿದ್ದನು.

ಮೂರನೆಯ ಕಡೆ ವಿವಾಹಯೋಗ್ಯವಾದ ಉತ್ತಮ ಉಡುಪನ್ನುಟ್ಟ ಪುಷ್ಪಲತೆಯು ರಾಜಕುಮಾರನ ಅಧಿಕಾರಿಯೊಬ್ಬನ ಸಮೀಪದಲ್ಲಿ ನಿಂತಿದ್ದಳು.

ರಾಜಾವಿನಯಸಿಂಹನು ನಿಧಾನವಾಗಿ ಎಲ್ಲರಿಗೂ ಕೇಳಿಸುವಂತೆ ಶಾಂತಭಾವದಿಂದ ಹೇಳತೊಡಗಿದನು—

"ನಾವು ಇಲ್ಲಿಗೇಕೆ ಬಂದಿರುವೆವೆಂಬುದನ್ನು ನೀವೆಲ್ಲರೂ ಬಲ್ಲಿರಿ

"ಕರಿಯಟ್ಯೂಲಿಪನ್ನು ಬೆಳೆಸಿದವರಿಗೆ ಒಂದು ಲಕ್ಷ ರೂಪಾಯಿಗಳನ್ನು ಕೊಡುವುದಾಗಿ ಟ್ಯೂಲಿಪ್‌ಸಂಘದವರು ಪ್ರಕಟಿಸಿರುವುದನ್ನೂ ಬಲ್ಲಿರಿ.

"ಕರಿಯ ಟ್ಯೂಲಿಪ್‌ಪುಷ್ಪವನ್ನು ಬೆಳೆದುದಾಗಿದೆ. ಅದು ನಿಮ್ಮೆಲ್ಲರ ಮುಂದೆಯೂ ಇದೆ. ಕಲ್ಯಾಣನಗರಿಯ ಟ್ಯೂಲಿಪ್‌ಸಂಘದವರು ವಿಧಿಸಿದ್ದ ನಿಯಮಗಳೆಲ್ಲಕ್ಕೂ ಅನುಸಾರವಾಗಿ ಅದು ಬೆಳೆಸಲ್ಪಟ್ಟಿದೆ.

"ಅದನ್ನು ಬೆಳೆಸಿದ ವಿಧಾನವೂ ಅದನ್ನು ಬೆಳೆಸಿದವರ ಹೆಸರೂ ಕಲ್ಯಾಣನಗರಿಯ ಪುಸ್ತಕವೊಂದರಲ್ಲಿ ಬರೆಯಲ್ಪಡುವುದು.

"ಕರಿಯಟ್ಯೂಲಿಪವು ಯಾರದೋ ಅವರು ಮುಂದೆ ಬನ್ನಿ."

ಈ ಮಾತುಗಳ ಪರಿಣಾಮವನ್ನು ತಿಳಿಯಲು ವಿನಯಸಿಂಹನು ತಾನು ಮೊದಲೇ ತೀಕ್ಷ್ಣದೃಷ್ಟಿಯಿಂದ ನೋಡಿದ್ದ ಮೂರು ಕಡೆಗೂ ಪುನಃ ನೋಡಿದನು. ಅವನಿಗೆ ವಿಷಕಂಠನು ಮುಂದೆ ನುಗ್ಗುತ್ತಿದ್ದುದೂ ಕಂಡುಬಂದಿತು. ಕುಮುದನು ತನಗರಿವಿಲ್ಲದೆ ಸ್ವಲ್ಪ ಮುಂದರಿದುದು ಕಂಡುಬಂದಿತು. ಪುಷ್ಪಲತೆಯು ತನ್ನ ಕಡೆಗೇ ಮುಂದರಿದುದೂ ಕಂಡುಬಂದಿತು.

ಪುಷ್ಪಲತೆಯು ಕಾಣಬರುತ್ತಲೇ ವಿನಯಸಿಂಹನ ಎಡಭಾಗದಲ್ಲಿಯೂ ಬಲಭಾಗದಲ್ಲಿಯೂ ಏಕಕಾಲದಲ್ಲಿ "ಪುಷ್ಪಲತಾ! ಪುಷ್ಪಲತಾ!" ಎಂಬ ಕೂಗೆದ್ದಿತು.

ವಿಷಕಂಠನು ಸಿಡಿಲು ಬಡಿದವನಂತೆ, "ಪುಷ್ಪಲತಾ!" ಎಂದು ಕೂಗಿಕೊಂಡಿದ್ದನು. ಕುಮುದನು ಸಂತೋಷದಿಂದಲೂ ಆಶ್ಚರ್ಯ ದಿಂದಲೂ "ಪುಷ್ಪಲತಾ!" ಎಂದು ಕೂಗಿದ್ದನು.

ವಿನಯಸಿಂಹನು ಅವಳ ಕಡೆಗೆ ತಿರುಗಿ, "ಮಗು! ಈ ಟ್ಯೂಲಿಪ್ ಪುಷ್ಪವು ನಿನ್ನದೇ ಅಲ್ಲವೆ?" ಎಂದು ಕೇಳಿದನು.

ಪುಷ್ಪಲತೆಯು ಮೆಲ್ಲನೆ, "ಅಹುದು, ಮಹಾಪ್ರಭುಗಳೆ!" ಎಂದು ತೊದಲುತ್ತ ಹೇಳಿದಳು ಅವಳ ಅನುಪಮ ಸೌಂದರ್ಯವನ್ನು ಕಂಡು ಎಲ್ಲರೂ ಅವಳನ್ನು ಪ್ರಶಂಸಿಸತೊಡಗಿದರು.

ಕುಮುದನು ತನ್ನಲ್ಲಿಯೇ, "ಓಹೋ! ಇವಳು ಹೇಳಿದುದೆಲ್ಲವೂ ಸುಳ್ಳು! ಪುಷ್ಪವನ್ನು ಕದ್ದಿರುವರೆಂದು ಸುಳ್ಳು ಹೇಳಿದ್ದಾಳೆ! ಇವಳು ಮಣಿಪುರದಿಂದ ಓಡಿಹೋದುದೇಕೆಂದು ಈಗ ತಿಳಿದುಬರುತ್ತಿದೆ. ಅಯ್ಯೋ! ನಾನಾರನ್ನು ಪ್ರಪಂಚದಲ್ಲಿ ಅತಿಹಿತವರೆಂದು ಭಾವಿಸಿದ್ದೆನೋ ಅವರೇ ನನಗೆ ಮೋಸಗೊಳಿಸಿದರೆ?" ಎಂದುಕೊಳ್ಳುತ್ತಿದ್ದನು.

ವಿಷಕಂಠನು, "ಓಹೋ! ನನ್ನ ಸರ್ವನಾಶವೊದಗಿದಂತಿದೆ" ಎಂದುಕೊಂಡನು.

ವಿನಯಸಿಂಹನು ಗಂಭೀರವಾದ ಧ್ವನಿಯಲ್ಲಿ ಹೇಳತೊಡಗಿದನು— "ಇಂದಿನಿಂದ ಈ ಪುಷ್ಪವು ಅದನ್ನು ಕಂಡುಹಿಡಿದವರ ಹೆಸರಿನಿಂದ ವಿರಾಜಿ ಸುವುದು. ಕಲ್ಯಾಣನಗರಿಯ ಪುಸ್ತಕದಲ್ಲಿ ಅದರ ಹೆಸರನ್ನು ಬರೆದಿಡ ಲಾಗುವುದು. ಇನ್ನುಮೇಲೆ ಅದನ್ನು, 'ಪುಷ್ಪಲತಾ ಮತ್ತು ಕುಮುದ ಚಂದ್ರರ ಪುಷ್ಪ'ವೆಂದು ಕರೆಯಲಾಗುವುದು."

ಅದೇ ಸಮಯದಲ್ಲಿಯೇ ವಿನಯಸಿಂಹನು ಪುಷ್ಪಲತೆಯ ಕೈಯನ್ನು ಮುಂದೆ ಬಂದಿದ್ದ ಕುಮುದನ ಕೈಯಲ್ಲಿಟ್ಟನು. ಆ ಯುವಕನು ಸಂತೋ ಷಾತಿಶಯದಿಂದ ಒಂದು ಬಾರಿ ವಿನಯಸಿಂಹನನ್ನೂ ಒಂದು ಬಾರಿ ಪುಷ್ಪ ಲತೆಯನ್ನೂ ನೋಡುತ್ತ, ಸಂತೋಷವನ್ನಿತ್ತ ದೇವದೇವನಿಗೆ ಮನಸ್ಸಿ ನಲ್ಲಿಯೇ ವಂದನೆಗಳನ್ನರ್ಪಿಸಿದನು.

ಅದೇ ಸಮಯದಲ್ಲಿಯೇ ಬೇರೆ ಭಾವಗಳಿಂದ ತಾಡಿತನಾಗಿ ವಿಷ ಕಂಠನು ರವಿವರ್ಮನ ಪಾದತಲದಲ್ಲಿ ಬಿದ್ದನು. ಆಶಾಭಂಗದಿಂದ ಜ್ಞಾನ

ಶೂನ್ಯನಾಗಿ ಅವನು ಕೆಳಗುರುಳಿದ್ದನು. ಅವನನ್ನೆತ್ತಿ ಪರೀಕ್ಷಿಸಿ ನೋಡುವ ವೇಳೆಗೆ ಅವನು ಮೃತನಾಗಿದ್ದನು. ಆದರೆ ಈ ಘಟನೆಯಿಂದ ಉತ್ಸವಕ್ಕೇನೂ ಕುಂದುಂಟಾಗಲಿಲ್ಲ. ರಾಜಕುಮಾರನಾಗಲಿ ರವಿವರ್ಮನಾಗಲಿ ಅದಕ್ಕೆ ಪ್ರಾಧಾನ್ಯವನ್ನು ಕೊಡಲಿಲ್ಲ. ಕುಮುದಚಂದ್ರನು ಮಾತ್ರ ನಿರಂಜನನೆಂದು ಹೇಳಿಕೊಳ್ಳುತ್ತಿದ್ದವನು ತನ್ನ ನೆರೆಮನೆಯ ವಿಷಕಂಠನೆಂಬುದನ್ನರಿತು ಚಕಿತನಾದನು. ನಿರ್ದುಷ್ಟಹೃದಯನಾಗಿದ್ದಾ ಯುವಕನು ನೆರೆಮನೆಯವನ ವಿಷಯದಲ್ಲಿ ಯಾವ ಸಂಶಯವನ್ನೂ ಉಳ್ಳವನಾಗಿರಲಿಲ್ಲ.

ವಿನಯಸಿಂಹನು ಲಕ್ಷ ರೂಪಾಯಿಗಳ ಗಂಟನ್ನು ತೋರಿಸುತ್ತ ಕುಮುದಚಂದ್ರನ ಕಡೆಗೆ ನೋಡಿ ಹೇಳತೊಡಗಿದನು—"ಈ ಹಣವನ್ನು ನೀನು ಸಂಪಾದಿಸಿರುವೆಯೋ ಅಥವಾ ಪುಷ್ಪಲತೆಯು ಸಂಪಾದಿಸಿರುವಳೋ ಹೇಳುವುದು ಕಷ್ಟವಾಗಿದೆ. ನೀನು ಕರಿಯ ಟ್ಯೂಲಿಪ್ ಪುಷ್ಪವನ್ನು ಕಂಡುಹಿಡಿದುದು ನಿಜವಾದರೂ ಅದನ್ನವಳು ಸಾಕಿ ಸಲಹಿ ಬೆಳೆಸಿದ್ದಾಳೆ. ಆದುದರಿಂದ ಈ ಹಣವು ಅವಳ ಸ್ವಂತ ಆಸ್ತಿಯೆಂದು ಹೇಳುವುದಕ್ಕಾಗದು. ಈ ಹಣವನ್ನು ಪುಷ್ಪಕ್ಕೋಸ್ಕರ ಕಲ್ಯಾಣನಗರಿಯವರು ಕೊಟ್ಟ ದಾನವಾಗಿರುವುದು."

ರಾಜಕುಮಾರನು ಅದಾವ ವಿಷಯವನ್ನು ವಿವರಿಸಲೆತ್ನಿಸುತ್ತಿದ್ದನೋ ಅದನ್ನು ತಿಳಿಯದೆ ಕುಮುದನು ಆಶ್ಚರ್ಯಪಡುತ್ತಿದ್ದನು. ವಿನಯಸಿಂಹನು ಮುಂದೆ ಹೇಳತೊಡಗಿದನು—

"ನಾನು ಈ ಲಕ್ಷ ರೂಪಾಯಿಗಳನ್ನು ಪುಷ್ಪಲತೆಗೆ ಕೊಡುತ್ತೇನೆ. ಅದನ್ನವಳು ಸಂಪಾದಿಸಿರುವುದು ನಿಜ. ಅದನ್ನವಳು ಬೇಕಾದರೆ ನಿನಗೆ ಕೊಡಬಹುದು. ಅವಳ ಪ್ರೇಮ, ಧೈರ್ಯ, ಸಾಹಸ, ಪ್ರಾಮಾಣಿಕತೆ ಇವುಗಳಿಗೆ ಸರಿಯಾದ ಬಹುಮಾನವನ್ನವಳಿಗೆ ಕೊಟ್ಟಂತಾಗುವುದು. ಕುಮುದಚಂದ್ರ! ನಿನ್ನ ವಿಷಯವನ್ನು ಹೇಳಬೇಕಾದರೆ – ನೀನು ಪುಷ್ಪಲತೆಗೆ ಕೃತಜ್ಞನಾಗಿರಬೇಕು. ಅವಳು ನಿನ್ನ ನಿರ್ದೋಷಿತ್ವದ ರುಜು ವಾತುಗಳನ್ನು ಒದಗಿಸಿದ್ದಾಳೆ."

ಹಾಗೆ ಹೇಳುತ್ತ ರಾಜಕುಮಾರನು ತನ್ನ ಕಿಸೆಯಲ್ಲಿದ್ದ ಪತ್ರವನ್ನು

ಹೊರಕ್ಕೆ ತೆಗೆದನು. ಗೀತಾಪುಸ್ತಕದಿಂದ ಹರಿದ ಹಾಳೆಯಮೇಲೆ ರಮಾನಾಥನು ಕುಮುದನಿಗೆ ಬರೆದಿದ್ದ ಕಾಗದವೇ ಅದು. ಮೂರನೆಯ ಸಸಿಯನ್ನು ಸುತ್ತಿಟ್ಟಿದ್ದುದೂ ಅದರಲ್ಲಿಯೇ. ಆ ಪತ್ರವನ್ನು ಕುಮುದನಿಗೆ ಕೊಟ್ಟು ವಿನಯಸಿಂಹನು ಹೇಳತೊಡಗಿದನು—"ನೀನು ಮಾಡದಿದ್ದ ಅಪರಾಧವನ್ನು ನಿನ್ನಮೇಲೆ ಹೊರಿಸಿ ನಿನಗೆ ದಂಡನೆಯಾಗಿದ್ದಿತು. ನೀನು ನಿರಪರಾಧಿಯೆಂಬುದು ಈಗ ವ್ಯಕ್ತವಾಗಿದೆ ನೀನು ಬಿಡುಗಡೆ ಹೊಂದಿರುವೆ. ನಿನ್ನ ಆಸ್ತಿಯೆಲ್ಲವನ್ನೂ ಹಿಂದಕ್ಕೆ ಕೊಡಲಾಗುವುದು. ಏಕೆಂದರೆ, ನಿರಪರಾಧಿಯ ಆಸ್ತಿಯನ್ನು ಯಾವ ಸರಕಾರವೂ ತೆಗೆದುಕೊಳ್ಳಲಾಗದು. ಕುಮುದಚಂದ್ರ! ನೀನು ರಮಾನಾಥಬಾಬುವಿನ ಸಾಕು ಮಗನು! ಉಮಾನಾಥಬಾಬುವಿನ ಮಿತ್ರನು. ಅವರಿಬ್ಬರ ಆತ್ಮಕ್ಕೂ ತೃಪ್ತಿಯಾಗುವಂತೆ ನಡೆದುಕೊ. ಅವರಿಬ್ಬರೂ ನಿರ್ದೋಷಿಗಳು. ಅವರ ಧ್ಯೇಯವನ್ನು ತಪ್ಪಾಗಿ ತಿಳಿದು ಅವರಿಗೆ ಅನ್ಯಾಯವಾದ ಶಿಕ್ಷೆಯನ್ನು ವಿಧಿಸಿಬಿಟ್ಟರು. ಅವರು ಉನ್ನತಧ್ಯೇಯವನ್ನುಂಟಾಗಿದ್ದ ಪೌರವಾಸಿಗಳು. ಈಗ ದೇಶವೇ ಅವರನ್ನು ದೇಶಪ್ರೇಮಿಗಳೆಂದು ಕೊಂಡಾಡುತ್ತಿರುವುದು"

ಆ ಮಾತುಗಳನ್ನು ಹೇಳುತ್ತಿದ್ದಂತೆ ಅವನ ಕಣ್ಣುಗಳಲ್ಲಿ ಅಶ್ರುಬಿಂದುಗಳು ತುಂಬಿದುವು. ಅವನಾವಾಗಲೇ ಆಗಲಿ ಹಾಗೆ ಭಾವನಾಪರವಶನಾಗಿ ತನ್ನ ಮನಸ್ಸನ್ನು ಹೊರಗೆಡಹಿರಲಿಲ್ಲ

ರಾಜಕುಮಾರನು ಒಂದು ಬಾರಿ ನಿಟ್ಟುಸಿರು ಬಿಟ್ಟು ಹೇಳತೊಡಗಿದನು—

"ನೀವು ನಿಜವಾಗಿ ಸುಖವಾಗಿರುವಿರಿ. ನಮ್ಮ ದೇಶದ ನಿಜಯಶಸ್ಸಾದ ಪುಷ್ಪಗಳ ವಿಚಾರವಾಗಿ ಮಾತ್ರ ನೀವು ಯೋಚಿಸುವಿರಿ. ಆದರೆ ಕೆಲವರಿಗೆ ಅನೇಕ ಯೋಚನೆಗಳಿರುವುವು."

ಹಾಗೆ ಹೇಳುತ್ತ ಅವನು ವಿಲಾಸನಗರಿಯಿದ್ದ ದಿಕ್ಕಿಗೊಂದುಬಾರಿ ನೋಡಿದನು. ಆ ಕಡೆ ಅನೇಕ ಕಾರ್ಮೋಡಗಳು ಮಿಳಿತವಾಗುತ್ತಿದ್ದಂತೆ ಅವನಿಗೆ ಭಾಸವಾಯಿತು.

ವಿನಯಸಿಂಹನು ಮುಂದೇನನ್ನೂ ಹೇಳಲಿಲ್ಲ. ಉತ್ಸವವನ್ನು ಮುಗಿಸಿ ತನ್ನ ಗಾಡಿಯಲ್ಲಿ ಕುಳಿತು ಹೊರಟುಹೋದನು.

*    *    *    *

ಕುಮುದಚಂದ್ರನು ಅದೇ ದಿನವೇ ಪುಷ್ಪಲತೆಯೊಡನೆ ರತ್ನಗಿರಿಗೆ ಹೊರಟುಹೋದನು. ಅವಳು ವೃದ್ಧಸೇವಕಿಯನ್ನು ಕರೆದು ಎಲ್ಲವನ್ನೂ ತಿಳಿಸಲೋಸುಗ ತನ್ನ ತಂದೆಯ ಬಳಿಗೆ ಅವಳನ್ನು ಕಳುಹಿದಳು.

ಕಾಳೀಚರಣನು ತನ್ನ ಅಳಿಯನ ವಿಷಯವಾಗಿ ಉತ್ಸಾಹಗೊಳ್ಳಲು ಸಿದ್ಧನಾಗಿರಲಿಲ್ಲ. ಅವನಿಗೆ ಬಿದ್ದಿದ್ದ ಪೆಟ್ಟುಗಳನ್ನವನು ಇನ್ನೂ ಮರೆತಿರಲಿಲ್ಲ. ಅವನು ಬಾಸುಂಡೆಗಳನ್ನು ಸಿಥಾನವಾಗಿ ಎಣಿಸಿಬಿಟ್ಟು ನಲವತ್ತೊಂದಿರುವುದಾಗಿ ನಿರ್ಧರಿಸಿದ್ದನು. ಆದರೂ ಎಲ್ಲ ವಿಷಯವನ್ನೂ ತಿಳಿದು ರಾಜಕುಮಾರನಿಗಿಂತ ಕಡಮೆಯಾಗಿ ದಯೆ ತೋರಬಾರದೆಂದು ನಿರ್ಧರಿಸಿ ಅವನು ಅಳಿಯನೊಡನೆ ಕೌಲುಮಾಡಿಕೊಳ್ಳಲು ಒಪ್ಪಿದನು. ಅವನು ಟ್ಯೂಲಿಪ್ ಪುಷ್ಪಗಳನ್ನು ನೋಡಿಕೊಂಡಿರುವುದಾಗಿಯೂ ಒಪ್ಪಿಕೊಂಡನು.

ಕುಮುದಚಂದ್ರನಿಗೂ ಪುಷ್ಪಲತೆಗೂ ವಿಜೃಂಭಣೆಯಿಂದ ವಿವಾಹವಾಯಿತು. ಕುಮುದನು ತನ್ನ ನೆರೆಮನೆಯವನಾಗಿದ್ದ ವಿಷಕಂಠನ ಮನೆಯನ್ನೂ ಕೊಂಡುಕೊಂಡನು. ಕಾಳೀಚರಣನಿಗೆ ವಿಷಕಂಠನ ವಿಷಯವು ತಿಳಿಯುತ್ತಲೇ ತಾನು ಮೋಸಹೋದುದಕ್ಕಾಗಿ ವಿಷಕಂಠನ ಮೇಲೆ ಕ್ರೋಧವುಂಟಾಯಿತು. ವಿಷಕಂಠನು ಗೋಡೆಯೊಂದರ ಹಿಂದೆ ನಿಂತು ಕುಮುದನ ಮನೆಯಲ್ಲಿ ನಡೆಯುತ್ತಿದ್ದುದೆಲ್ಲವನ್ನೂ ನೋಡುತ್ತಿದ್ದನಷ್ಟೆ. ಈಗ ಕಾಳೀಚರಣನು ಆ ಗೋಡೆಯನ್ನೊಡೆದು ಚೂರು ಚೂರು ಮಾಡಿದನು.

*    *    *    *

ಪುಷ್ಪಲತೆಗೆ ಎರಡು ವರ್ಷಗಳಲ್ಲಿ ಎರಡು ಶಿಶುಗಳು ಜನಿಸಿದುವು. ಈ ವೇಳೆಗೆ ಅವಳು ಸೌಂದರ್ಯದಲ್ಲಿಯೂ ಬುದ್ಧಿಯಲ್ಲಿಯೂ ವೃದ್ಧಿಹೊಂದಿದ್ದಳಾಗಿ ತನ್ನ ಮಕ್ಕಳಿಗೆ ಪಾಠಹೇಳುವ ವಿಷಯವನ್ನು ತಾನೇ ಸ್ವಂತವಾಗಿ ವಹಿಸಿಕೊಂಡಳು.

ಕುಮುದನು ಪುಷ್ಪಲತೆಯನ್ನು ಪ್ರೀತಿಸಿದಷ್ಟೇ ಪುಷ್ಪಗಳನ್ನೂ ಪ್ರೀತಿಸತೊಡಗಿದ್ದನು. ಕ್ರಮಕ್ರಮವಾಗಿ ಅವನು ಅನೇಕ ನೂತನ ಪುಷ್ಪಗಳನ್ನು ಕಂಡುಹಿಡಿದನು.

ಅವನ ಕಿರುಮನೆಯಲ್ಲಿ ಬಂಗಾರದ ಕಟ್ಟು ಹಾಕಲ್ಪಟ್ಟ ಪಟಗಳೆರಡಿದ್ದುವು. ಅವೇ ಕಿರುಮನೆಯ ಮುಖ್ಯ ವಸ್ತುಗಳಾಗಿದ್ದುವು. ಒಂದರಲ್ಲಿ ರಮಾನಾಥನು ಕಾಗದಗಳನ್ನು ಸುಟ್ಟುಹಾಕಲು ಹೇಳಿದ್ದ ಪತ್ರವಿತ್ತು. ಮತ್ತೊಂದರಲ್ಲಿ ವಿವಾಹಮಾಡಿಕೊಳ್ಳುವ ನಿಯಮಗಳನ್ನು ಪುಷ್ಪಲತೆಗೆ ವಿವರಿಸುತ್ತ ಕುಮುದಚಂದ್ರನು ತನ್ನ ಆಸ್ತಿಯೆಲ್ಲವನ್ನೂ ಅವಳಿಗೆ ದಾನ ಮಾಡಿದ ವಿಷಯವಿತ್ತು

ಪುನಃ ವಿಷಕಂಠನಂತಹವನು ಅಸೂಯೆಯಿಂದ ಪ್ರಯತ್ನಪಡದಿರಲೆಂದು ಕುಮುದಚಂದ್ರನು ತನ್ನ ಬಾಗಿಲಿನಮೇಲೆ ದೊಡ್ಡ ಅಕ್ಷರಗಳಲ್ಲಿ ಈ ರೀತಿಯಾಗಿ ಬರೆದಿದ್ದನು—

"ಬಹಳವಾಗಿ ಕಷ್ಟಪಟ್ಟು ಕಡೆಗೆ ಸುಖವನ್ನು ಪಡೆದವನು ಮಾತ್ರ ನಿಜವಾದ ಸೌಖ್ಯವನ್ನು ಅನುಭವಿಸುವನು."



ಭಾರತೀ ಮುದ್ರಣಾಲಯ, ನಂ ೩, ಗೊಲ್ಲರಪೇಟೆ, ಬೆಂಗಳೂರು ಸಿಟಿ.

# ಇತರ ಹೊಸ ಗ್ರಂಥಗಳು.

| | | | |
|---|---|---|---|
| 1 | ಆನಂಪನ ಹತ್ಯಾಕಾರಿ | (ಪತ್ತೇದಾರಿಯ ಕಾದಂಬರಿ) | 0 – 6 –0 |
| 2 | ವಿಲಾಸಿನಿಯ ಅಕಾಲಮರಣ | ( ,, ) | 0 –12 –0 |
| 3 | ಅನಾಥಪ್ರಲಾಪ ಉಪಕ್ರಮಣಿಕೆ ಮತ್ತು | ಭಾಗ 1 | 1 – 8 –0 |
| 4 | ಮುಕ್ತಿಮಾರ್ಗ | ಕಾದಂಬರಿ | 1 – 4 –0 |
| 5 | ರಾಬಿನ್‌ಸ್ಸ ಕ್ರೂಸೊ | ,, | 1 – 4 –0 |
| 6 | ಕಣ್ಣೀರು | ,, | 1 –12 –0 |
| 7 | ಮಾಯಾವಿ | (ಪತ್ತೇದಾರಿ ಕಾದಂಬರಿ) | 3 – 4 –0 |
| 8 | ಹರಿದಗೆಜ್ಜೆ | ಕಾದಂಬರಿ | 1 – 8 –0 |
| 9 | ಮಹಾಸತಿ | ಜೀವನ ಚರಿತ್ರೆ | 1 – 4 –0 |
| 10 | ಭಾಗ್ಯಶಿಲ್ಪಿ | ,, | 1 – 8 –0 |
| 11 | ಪುಣ್ಯಭೂಮಿ | ಕಾದಂಬರಿ | 2 – 0 –0 |
| 12 | ಶಿಕ್ಷಣ ತತ್ವದರ್ಶನ | ಎಜುಕೇಷ್ಣ | 5 – 0 –0 |
| 13 | ಮಹಾಪುರುಷ | ಕಾದಂಬರಿ | 2 – 4 –0 |
| 14 | ಆಲಿವರ್ ಟ್ವಿಸ್ಟ್ | ,, | 1 – 8 –0 |
| 15 | ರಾಬಿನ್‌ಹುಡ್ | ,, | 1 – 8 –0 |
| 16 | ಸ್ವಾಮಿಜಿಯ ಪತ್ರಗಳು | | 1 – 8 –0 |
| 17 | ರಾಕ್ಷಸನ ಸೋಲು | ಕಾದಂಬರಿ | 1 – 8 –0 |
| 18 | ವೈರಾಗ್ಯನಿಧಿ ಅಕ್ಕಮಹಾದೇವಿ | | 1 – 8 –0 |
| 19 | ಉದಯರಾಗ | ಕಾದಂಬರಿ | 1 –12 –0 |
| 20 | ಬೃಂದಾವನ ಮತ್ತು ಇತರ ಕಥೆಗಳು | | 0 –12 –0 |